ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ–೩೦

ಪ್ರಧಾನ ಸಂಪಾದಕರು
ಡಾ|| ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

# ಪಂಪ ಭಾರತಂ

ಎಂಬ

# ವಿಕ್ರಮಾರ್ಜುನ ವಿಜಯಂ

## ಮೊದಲನೆಯ ಭಾಗ

(ಆಶ್ವಾಸ ೧–೮)






ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೯

VIKRAMARJUNA VIJAYA of *Pampa* published by the Director, Prasārānga, University of Mysore, Mysore-6, Third edition 1969, First Part (Chapter 1 to 8), Price Rs. 3-50.



ಮೂರನೆಯ ಮುದ್ರಣ : ೧೯೬೯



ಬೆಲೆ : ರೂ. ೩-೫೦



ಪ್ರಕಾಶಕರು

ಡೈರೆಕ್ಟರ್

ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು

ಡೆಪ್ಯೂಟಿ ಡೈರೆಕ್ಟರ್

ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು-೬

# ಎರಡನೆಯ (ಹೊಸ) ಮುದ್ರಣದ
## ಪೀಠಿಕೆ

ಈ ಗ್ರಂಥದ ಮೊದಲನೆಯ ಎಂಟು ಆಶ್ವಾಸಗಳನ್ನು ೧೯೨೬ನೆಯ ಇಸವಿಯ ಡಿಸೆಂಬರು ತಿಂಗಳಲ್ಲಿ ವಿದ್ಯಾರ್ಥಿಗಳ ಉಪಯೋಗಕ್ಕಾಗಿ, ಹೊಸ ರೀತಿಯಲ್ಲಿ ಮುದ್ರಿಸಲಾಯಿತು. ಹಿಂದೆ ೧೮೯೮ನೆಯ ಇಸವಿಯಲ್ಲಿ ಮುದ್ರಿತವಾಗಿದ್ದ ಪ್ರತಿಯಲ್ಲಿ ಬಿದ್ದಿದ್ದ ಹಲವು ತಪ್ಪುಗಳನ್ನು ತಿದ್ದಿ, ಬಿಟ್ಟಿದ್ದ ಹಲವು ಭಾಗಗಳನ್ನು ಸೇರಿಸಿ ಈ ಹೊಸ ಮುದ್ರಣವನ್ನು ಒದಗಿಸಲು ಆರಾ ಪಟ್ಟಣದಲ್ಲಿ ದೊರೆತ ತಾಳೆಯೋಲೆಯ ಪ್ರತಿಯು ಬಹಳ ಸಹಾಯವಾಯಿತು. ಆದರೂ, ತಿದ್ದಲು ನಮಗೆ ಸಾಧ್ಯವಾಗದ ಇನ್ನೂ ಕೆಲವು ದೋಷಗಳೂ ಲೋಪಗಳೂ ಕಂಡುಬಂದುದರಿಂದ, ಇವನ್ನು ಸರಿ ಮಾಡಲು ಸಕಲ ಕರ್ಣಾಟಕದ ಕನ್ನಡ ಪಂಡಿತರ ಸಹಾಯವನ್ನು ಬಯಸಿ, ೧೯೩೩ನೆಯ ಜೂಲೈ ತಿಂಗಳಲ್ಲಿ, ಪತ್ರಮುಖೇನ ಅನೇಕ ಮಂದಿ ಪಂಡಿತರುಗಳನ್ನು ಕೇಳಿಕೊಳ್ಳಲಾಯಿತು. ಹತ್ತು ಮಂದಿ ನಮ್ಮ ಪ್ರಾರ್ಥನೆಯನ್ನು ಲಾಲಿಸಿ ಅವರವರಿಗೆ ತೋರಿದ ಸಲಹೆಗಳನ್ನು ಕಳುಹಿಸಿಕೊಟ್ಟರು. ಈ ಪಂಡಿತರು ಮಾಡಿರುವ ಸಹಾಯಕ್ಕಾಗಿ ನಾವು ಅವರಿಗೆ ಬಹಳ ಕೃತಜ್ಞರಾಗಿರುತ್ತೇವೆ. ಆದರೆ, ನಮಗೆ ದೊರೆತಿರುವ ಪಂಪ ಭಾರತದ ಹಳೆಯ ಪ್ರತಿಗಳಲ್ಲದೆ ಇತರ ಹಳೆಯ ಪ್ರತಿಗಳು ಎಲ್ಲಿಯೂ ದೊರೆಯದುದರಿಂದ, ಈ ಪಂಡಿತರುಗಳು ಕೆಲವರು ಸೂಚಿಸಿರುವ ತಿದ್ದುಪಡಿಗಳನೇಕಕ್ಕೆ ತಕ್ಕಷ್ಟು ಆಧಾರವಿಲ್ಲದೆ ಸ್ವಾಭಿಪ್ರಾಯ ಸೂಚಕವಾದವುಗಳಾಗಿರುವುದರಿಂದ ಅಂತಹ ಸೂಚನೆಗಳನೇಕವನ್ನು ಅಂಗೀಕರಿಸಲು ಸಾಧ್ಯವಾಗಲಿಲ್ಲ.

ಈ ಎರಡನೆಯ (ಹೊಸ) ಮುದ್ರಣ ಕಾರ್ಯದಲ್ಲಿ ಮೊದಲಿನಂತೆಯೇ ಗ್ರಂಥವನ್ನು ಹಳೆಯ ಪ್ರತಿಗಳೊಡನೆ ಮರಳಿ ಸರಿನೋಡಿ, ಕೆಲವೆಡೆಗಳಲ್ಲಿ ತಿದ್ದಿ, ಮತ್ತೆ ಕೆಲವೆಡೆಗಳಲ್ಲಿ ಹೆಚ್ಚು ಪಾಠಾಂತರಗಳನ್ನು ಸೇರಿಸಲಾಗಿದೆ. ಮಾತೃಕೆಗಳಲ್ಲಿ ಯಾವ ಆಧಾರವೂ ದೊರೆಯದೆ ಗ್ರಂಥವನ್ನು ತಿದ್ದುವುದು ನಮಗೆ ಒಪ್ಪದು. ಗ್ರಂಥಪಾತವಾಗಿರುವ ಸ್ಥಳಗಳಲ್ಲಿಯೂ, ನಮಗೆ ಅರ್ಥವಾಗದ ಸ್ಥಳಗಳಲ್ಲಿಯೂ ನಮಗೆ ಸರಿಯೆಂದು ತೋರಿದ ಪಾಠಗಳನ್ನು ಚದರ ಕಂಸದಲ್ಲಿ ಕೊಟ್ಟಿರುತ್ತೇವೆ. ಅಡಿಟಿಪ್ಪಣಿಗಳಲ್ಲಿ ಹಳೆಯ ಪ್ರತಿಗಳ ಪಾಠಗಳನ್ನೂ ಕೊಟ್ಟಿರುವುದರಿಂದ, ಪಾಠಕರು ತಮಗೆ ತೋರಿದಂತೆ ತಿದ್ದಿಕೊಳ್ಳಲು ಅವಕಾಶವಿರುವುದು.

ಈ ಮುದ್ರಣದಲ್ಲಿ ನಾವು ಮಾಡಿರುವ ಮುಖ್ಯವಾದ ತಿದ್ದುಪಡಿಗಳು ಕೆಲವನ್ನು ಇಲ್ಲಿ ಸೂಚಿಸುವೆವು:—(೧) ಪ್ರಥಮಾಶ್ವಾಸದ ೨೦ನೆಯ ಪದ್ಯದಲ್ಲಿ, "ವೆಂಗಿ ವಿಷಯ[ಮಂ] ಮಂತ್ರಿಗಳಿಂ ಬೆರಸೊತ್ತಿಕೊಂಡು" ಎಂಬುದಕ್ಕೆ ಅರ್ಥವಾಗುವುದಿಲ್ಲ. ಇದನ್ನು "ವೆಂಗಿ ವಿಷಯಮಂ ತ್ರಿ[ಕಳಿಂಗಂ] ಬೆರಸೊತ್ತಿಕೊಂಡು"

ಎಂದು ತಿದ್ದಲಾಗಿದೆ. (‘ತ್ರಿಕಳಿಂಗಂ’ ಎಂಬುದು ಒಂದು ದೇಶ.) (೨) ಚತುರ್ಥಾಶ್ವಾಸದಲ್ಲಿ ೬೦ ರಿಂದ ೬೯ ನೆಯ ಪದ್ಯದವರೆಗಿರುವ ಭಾಗವು ಮೊದಲನೆಯ (ಹೊಸ) ಮುದ್ರಣದಲ್ಲಿ ಹಿಂದಿನಂತೆಯೇ ಹಿಂದುಮುಂದಾಗಿ ಬಿದ್ದಿದ್ದುದನ್ನು ಈ ಮುದ್ರಣದಲ್ಲಿ ನೇರ್ಪಡಿಸಿದೆ. (೩) ಎಂಟನೆಯ ಆಶ್ವಾಸದಲ್ಲಿ ೩೧ ಮತ್ತು ೯೧ನೆಯ ಪದ್ಯಗಳಲ್ಲಿದ್ದ ಛಂದೋಭಂಗವನ್ನು ಸರಿಪಡಿಸಲಾಗಿದೆ. (೪) ಮಾತೃಕೆಗಳ ಪಾಠಗಳಿಗೆ ಬದಲಾಗಿ ಹಾಕಿದ್ದ ನಮ್ಮ ಪಾಠಗಳನ್ನು ಹತ್ತಾರು ಕಡೆ ತೆಗೆದುಹಾಕಿ ಮಾತೃಕೆಯ ಪಾಠಗಳನ್ನೇ ಉಳಿಸಲಾಗಿದೆ.

ಇಷ್ಟಾದರೂ ಗ್ರಂಥದಲ್ಲಿ ಇನ್ನೂ ಅನೇಕ ಲೋಪಗಳಿವೆ: ಅನೇಕ ಪದಗಳಿಗೆ ನಿಷ್ಕೃಷ್ಟವಾದ ಅರ್ಥವು ಇನ್ನೂ ದೊರೆತಿಲ್ಲ; ಕೆಲವು ಪದಗಳು ಪಂಪನು ಉಪಯೋಗಿಸಿದುವೇ, ಅಥವಾ ತಪ್ಪುಗಳೇ ಎಂದು ಹೇಳಲು ಸಾಧ್ಯವಲ್ಲದಿದೆ. ಈ ಗ್ರಂಥದ ಹಳೆಯ ಪ್ರತಿ ಮತ್ತೊಂದು ದೊರೆಯುವವರೆಗೂ ಇವು ಯಾವುವೂ ನೇರ್ಪಡುವಂತೆ ತೋರುವುದಿಲ್ಲ.

ಈ ಮುದ್ರಣದ ಕಾರ್ಯದಲ್ಲಿಯೂ ನನ್ನ ಮಿತ್ರರಾದ ಮ|| ರಾ|| ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರೂ, ಮ|| ರಾ|| ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಅವರೂ ಅಭಿಮಾನವಿಟ್ಟು ಭಾಗವಹಿಸಿ, ಒಪ್ಪಿಕೆಗಾಗಿ ಬಂದ ಮುದ್ರಣದ ಪ್ರತಿ ಪುಟವನ್ನೂ ಪರೀಕ್ಷಿಸಿ, ತಿದ್ದಿ, ಅನೇಕ ಉಪಯುಕ್ತವಾದ ಸಲಹೆಗಳನ್ನು ಕೊಟ್ಟು ಸಹಾಯ ಮಾಡಿರುವರು. ಇದಕ್ಕಾಗಿ ಅವರಿಗೆ ನಾನು ಬಹಳ ಕೃತಜ್ಞನಾಗಿರುತ್ತೇನೆ.

ಕರ್ಣಾಟಕ ಸಾಹಿತ್ಯ ಪರಿಷತ್ತು
ಬೆಂಗಳೂರು
೨೦ನೆಯ ಮೇ ೧೯೩೩

ಬೆಳ್ಳಾವೆ ವೆಂಕಟನಾರಾಯಣಪ್ಪ
ಸಂಪಾದಕ

## ಮೊದಲನೆಯ (ಹೊಸ) ಮುದ್ರಣದ

## ಸೂಚನೆ

ಮೈಸೂರು ಶ್ರೀಮನ್ಮಹಾರಾಜರವರ ಸರಕಾರದ ಅಪ್ಪಣೆಯ ಮೇರೆಗೆ, 'ವಿಕ್ರಮಾರ್ಜುನ ವಿಜಯ'ವೆಂಬ ಆದಿ ಪಂಪನ ಭಾರತದ ಅಚ್ಚಿನ ಪ್ರತಿಯನ್ನು ತಿದ್ದಿ ಪುನರ್ಮುದ್ರಣ ಮಾಡಿಸುವ ಕೆಲಸವು ಕರ್ಣಾಟಕ ಸಾಹಿತ್ಯ ಪರಿಷತ್ತಿನಲ್ಲಿ ಬಹಳ ದಿನಗಳಿಂದ ನಡೆಯುತ್ತಿದೆ. ಈಚೆಗೆ, ಎಂದರೆ ೧೯೩೦ನೆಯ ಇಸವಿಯ ಮಧ್ಯ ಭಾಗದಲ್ಲಿ, ಉತ್ತರ ಹಿಂದೂಸ್ಥಾನದಲ್ಲಿರುವ ಆರಾ ಪಟ್ಟಣದ ಜೈನ ಪ್ರಾಚ್ಯ ಗ್ರಂಥಾಲಯದಲ್ಲಿಯ ತಾಳೆಯೋಲೆಯ ಪ್ರತಿಯೊಂದು ದೊರೆಯಿತು. ಅದರ ಸಹಾಯದಿಂದ, ನಾವು ಮೊದಲು ತಿದ್ದಿ ಅಚ್ಚಿಗೆ ಸಿದ್ಧಪಡಿಸಿದ್ದ ಗ್ರಂಥದಲ್ಲಿಯ ಹಲವು ತಪ್ಪುಗಳನ್ನು ತಿದ್ದಿ, ಬಿಟ್ಟುಹೋಗಿದ್ದ ಅನೇಕ ಭಾಗಗಳನ್ನು ಸೇರಿಸಲು ಅವಕಾಶ ದೊರೆಯಿತು. ನಮಗೆ ಆ ಪುಸ್ತಕವನ್ನು ಕೊಟ್ಟು ಸಹಾಯ ಮಾಡಿದ ಆ ಗ್ರಂಥಾಲಯದ ಅಧಿಕಾರಿಗಳಾದ ಮ|| ರಾ|| ಕೆ. ಭುಜಬಲಿ ಶಾಸ್ತ್ರಿಗಳಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುವೆವು.

ಸರಕಾರದವರ ಅಪ್ಪಣೆಯ ಮೇರೆ ಗ್ರಂಥದ ಮೂಲವನ್ನು, ವಿದ್ಯಾರ್ಥಿಗಳ ಉಪಯೋಗಕ್ಕಾಗಿ, ಎರಡು ಭಾಗ ಮಾಡಿ, ಈಗ ಸಿದ್ಧವಾಗಿರುವ ಮೊದಲನೆಯ ಎಂಟು ಆಶ್ವಾಸಗಳನ್ನು ಮೊದಲನೆಯ ಭಾಗವಾಗಿ ಪ್ರಕಟಿಸಿರುವೆವು. ಒಟ್ಟು ಗ್ರಂಥದ ಮುದ್ರಣವು ಪೂರಯಿಸಿದನಂತರ ನಿಘಂಟು ಉಪೋದ್ಘಾತ ಮೊದಲಾದುವನ್ನು ಸೇರಿಸಿ ಸಮಗ್ರ ಗ್ರಂಥವನ್ನು ಪ್ರಕಟಿಸುವೆವು.

**ಕರ್ಣಾಟಕ ಸಾಹಿತ್ಯ ಪರಿಷತ್ತು**
ಬೆಂಗಳೂರು
ಅಕ್ಷಯ ಸಂ|| ಮಾರ್ಗಶಿರ ಶು|| ೧೦

**ಬೆಳ್ಳಾವೆ ವೆಂಕಟನಾರಾಯಣಪ್ಪ**
ಸಂಪಾದಕ

## ಈ ಗ್ರಂಥದಲ್ಲಿ ಉಪಯೋಗಿಸಿರುವ ಸಂಕೇತಗಳು

---

ಕ.—೧೮೯೮ನೆಯ ಇಸವಿಯಲ್ಲಿ ಮೈಸೂರು ಸರಕಾರದಿಂದ ಪ್ರಕಟವಾದ ಪಂಪ ಭಾರತದ ಅಚ್ಚಿನ ಪ್ರತಿ.

ಖ.—ಮೈಸೂರು ಅರಮನೆಯ ಸರಸ್ವತೀ ಭಂಡಾರದ ತಾಳೆಯೋಲೆಯ ಪ್ರತಿ.

ಗ.—ಈಗ ಪೂನಾ 'ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ'ನಲ್ಲಿರುವ ತಾಳೆಯೋಲೆಯ ಪ್ರತಿ.

ಘ.—ಆರಾ 'ಸೆಂಟ್ರಲ್ ಜೈನಾ ಓರಿಯಂಟಲ್ ಲೈಬ್ರೆರಿ'ಯಲ್ಲಿಯ ತಾಳೆಯೋಲೆಯ ಪ್ರತಿ.

ಘ§.—ಆರಾ ಪ್ರತಿಯಲ್ಲಿ ಹಂಸಪಾದ ಹಾಕಿ ಕೊಟ್ಟಿರುವ ಪಾಠ.

ಸ.—ಮೇಲೆ ಹೇಳಿರುವ ಸರ್ವ ಪುಸ್ತಕಗಳಲ್ಲಿಯೂ ದೊರೆಯುವ ಪಾಠ.

ಪ.—ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪಾಠ.

[ ].—ಈ ಗುರುತಿನಲ್ಲಿರುವ ಪಾಠವು ಗ್ರಂಥದ ಸಂಪಾದಕರದು.

ಶ್ರೀಃ

**ಪಂಪಕವಿ ವಿರಚಿತಂ**

# ವಿಕ್ರಮಾರ್ಜುನ ವಿಜಯಂ

---

## ಪ್ರಥಮಾಶ್ವಾಸಂ

ಉ|| ಶ್ರೀಯನರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ|
ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಮಾ||
ತ್ಮೀಯ[1]ಸುಪುಷ್ಪವೃಷ್ಟಿಯ ನೊಡಂಬಡೆ ತಾಳ್ದಿಯುಮಿಂತುದಾತ್ತನಾ|
ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ ||೧||

ಚಂ|| ಮುಳಿಸು ಲಲಾಟ ನೇತ್ರ ಶಿಖಿ ಮೆಚ್ಚೆ ವಿನೂತ[2]ರಸ ಪ್ರಸಾದಮು|
ಜ್ಜಳ ಜಸಮಂಗ ಸಂಗತ ಲಸದ್ಭಸಿತಂ ಪ್ರಭುಶಕ್ತಿ ಶಕ್ತಿ ನಿ||
ರ್ಮಳ ಮಣಿಭೂಷಣಂ ಫಣಿ ವಿಭೂಷಣಮಾಗೆ ನೆಗೞ್ತೆಯಂ ಪುದುಂ|
ಗೊಳಿಸಿದನೀಶ್ವರಂ ನೆಗೞ್ದುದಾರ ಮಹೇಶ್ವರನೀಗೆ [3]ಭೋಗಮಂ ||೨||

ಉ|| ಚಂಡ[4]ವಿರೋಧಿ ಸಾಧನ ತಮ[5]ಸ್ತಮಮೋಡೆ ವಿಶಿಷ್ಟ ಪದ್ಮಿನೀ|
ಷಂಡಮರಲ್ದು ರಾಗದಿನೊಱಲ್ದಿರೆ ಯಾಚಕ ಭೃಂಗ ಕೋಟಿ ಕೈ||
ಕೊಂಡು ನಿರಂತರಂ ತಗುಳ್ದು ಕೀರ್ತಿಸೆ ಮಿಕ್ಕೆಸೆವ ಪ್ರಚಂಡ ಮಾ|
ರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜ ವಾಙ್ಮರೀಚಿಯಿಂ ||೩||

ಚಂ|| ಸಹಜದ ಚೆಲ್ವಿನೊಳ್ ರತಿಯ ಸೋಲದ ಕೇಳಿಕೆಯೊಳ್ ಪೊದೞ್ದು ಸ|
ನ್ನಹಿತವೆನಿಪ್ಪಪೂರ್ವ ಶುಭ ಲಕ್ಷಣ ದೇಹದೊಳೊಪ್ಪನಾಳ್ದು ಸಂ||
ದಹಿಕಟಕ ಪ್ರಸಾದದೆ ಮನೋಜನುಮಂ ಗೆಲೆವಂದನಾಗಳುಂ|
ಸಹಜಮನೋಜನೋಜನೆಮಗೀಗೆ ವಿಚಿತ್ರ ರತೋತ್ಸವಂಗಳಂ ||೪||

---

[1] ಸುಪುಷ್ಪ ದೃಷ್ಟಿ (ಪ.); [2] ವರ (ಘ.); [3] ರಾಗ (ಘ.); [4] ಮರೀಚಿ (ಕ. ಖ.); [5] ಶ್ಚಯ (ಪ.).

**ಸೂಚನೆ.**—(1) ಗ. ಪ್ರತಿಯಲ್ಲಿ ಮೊದಲನೆಯಾಶ್ವಾಸವು ದೊರೆಯುವುದಿಲ್ಲ. (2) ಘ. ಪ್ರತಿಯಲ್ಲಿ ಮೊದಲನೆಯ ಪತ್ರದ ಬಲ ಭಾಗವು ನಾಲ್ಕಂಗುಲದಷ್ಟು ಹೋಗಿರುವುದರಿಂದ ಮೊದಲಿನ ೧೮ ಪದ್ಯಗಳಲ್ಲಿ ಕೆಲವಕ್ಕೆ ಆದರ ಪಾಠವು ದೊರೆಯುವುದಿಲ್ಲ.

ಚಂ॥ ಕ್ಷಯಮಣಮಿಲ್ಲ[1]ಕೇಳ್ದು ಕಡೆಗಂಡವ[2]ನಾವನು[3]ಮಿಲ್ಲೆನಲ್ ತದ।
ಕ್ಷಯ ನಿಧಿ ತಾನೆ ತನ್ನನೊಸೆದೋಲಗಿಪಂಗರಿದಿಲ್ಲೆನಿಪ್ಪ ವಾ॥
ಙ್ಮಯಮನಿ[4]ತರ್ಕಮಂಬಿ[ಕೆ] ಸರಸ್ವತಿ ಮನ್ಮುಖಪದ್ಮ ರಂಗ[5]ದೇ।
ಟಿಗ್ಗಿಯನೆಡೆಗೊಂಡು ಕೊಂಡುಕೊನೆದೀಗರಿಗಂಗೆ ವಿಶುದ್ಧ ಬುದ್ಧಿಯಂ॥೫॥

ತಿಸುಳದೊಳುಚ್ಚಳಿಪ್ಪ ಪೊಸ ನೆತ್ತರಿ ಕೆಂದಳಿರಾಗೆ [6]ಕಣ್ಣಗು।
ರ್ವಿಸುವಿನಮೊಕ್ಕು ನೇಲ್ವ ಕರುಳೋಳಿಯೆ ಬಾಳ ಮೃಣಾಳಮಾಗೆ ವಿ॥
ಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯನಾಱಿಸು[7]ತಿಂತೆ ತನ್ನ ಕೊ।
ರಸಿಯೊಳಡುರ್ತು ಕೊಂದಸಿಯುಳಿ[8][ರ್ಕ]ಸಿಯೊಳ್ ಪಡೆ ಮೆಚ್ಚೆ ಗಂಡನಾ ॥೬॥

ಮಲ್ಲಿಕಾಮಾಲೆ॥ ಎನ್ನ ದಾನಮಿದಾಗಳುಂ ಮಧುಪಾಶ್ರಯಂ ಧರೆಗವ್ಯವ।
ಚ್ಛಿನ್ನ ದಾನಮಿದಾಗಳುಂ ವಿಬುಧಾಶ್ರಯಂ ಗೆಲೆವಂದನೆ॥
ನ್ನನ್ನಿಜೋನ್ನತಿಯಿಂದಮೀ ಪತಿಯೆಂದು ಮೆಚ್ಚಿ ವಿನಾಯಕಂ।
ತಾನ್ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವ ಭೂಪನಾ ॥೭॥

ಚಂ॥ ಬಗೆ ಪೊಸತಪ್ಪುದಾಗಿ ಮೃದು ಬಂಧದೊಳೊಂದುವುದೊಂದಿ ದೇಸಿಯೊಳ್।
ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯ ಬಂಧಮೊ॥
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಱಲ್ದು ತಂ।
ಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್ ॥೮॥

ಉ॥ ಆ ಸಕಳಾರ್ಥ ಸಂಯುತಮಳಂಕೃತಿಯುಕ್ತಮುದಾತ್ತ[9][ವೃತ್ತಿ] ವಿ।
ನ್ಯಾಸಮನೇಕ ಲಕ್ಷಣ ಗುಣ ಪ್ರಭವಂ ಮೃದು ಪಾದಮಾದ ವಾ॥
ಕ್ಶ್ರೀ ಸುಭಗಂ ಕಳಾಕಳಿತಮೆಂಬ ನೆಗೞ್ತೆಯನಾಳ್ದ ಕಬ್ಬಮಂ।
ಕೂಸುಮನೀವುದೀವುದರಿಕೇಸರಿಗಲ್ಲ[10]ದವಸ್ತುಗೀವುದೇ ॥೯॥

ಚಂ॥ ಕವಿಗಳ ನಾಮಧಾರಕ ನರಾಧಿಪರೋಳಿಯೊಳೀತನೊಳ್ಳಿದಂ।
ಕವಿ ನೃಪನೀತನೊಳ್ಳಿದನೆನಲ್ ದೊರೆಯಲ್ತು ನೆಗೞ್ತೆವೆತ್ತ ಸ॥
ತ್ಕವಿಗಳ ಷೋಡಶಾವನಿಪರೋಳಿಯೊ[11]ಳಂ ಕವಿತಾ ಗುಣಾರ್ಣವಂ।
ಕವಿತೆಯೊಳಗ್ಗಳಂ ಗುಣದೊಳಗ್ಗಳಮೆಲ್ಲಿಯುಮೀ ಗುಣಾರ್ಣವಂ ॥೧೦॥

ಚಂ॥ ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾ।
ರತಮನಪೂರ್ವಮಾಗೆ ಸಲೆ ಪೇೞ್ದ [ಕವೀಶ್ವರ[12]ರಿ]ಲ್ಲ ವರ್ಣಕಂ॥

---

[1] ಮಿಾಗಳತಿ (ಕ. ಖ.); [2] ನಾದನು (ಕ. ಖ.); [3] ಮಿಲ್ಲ ಕಲ್ತೊಡ (ಘ.); [4] ತಕ್ಕಮಂ ಬಿಡೆ (ಕ. ಖ.); [5] ದ|ಲ್ಲಿಯೆ (ಘ§.); [6] ಕಣ್ಣ (ಕ. ಖ.); [7] ವಂತೆ (ಘ.); [8] ಕ್ಕಸಿ (ಕ. ಖ. ಘ.); [9] ಕೀರ್ತಿ (ಕ. ಖ. ಘ.); [10] ದ ವಸ್ತುವೀವುದೆ (ಪ.); [11] ಳೀ (ಪ.); [12] ರೆ (ಕ. ಖ. ಘ.).

ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದು ಪಂ।
ಡಿತರೆ ತಗುಳ್ದು ಬಿಚ್ಚಳಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ ॥ ೧೧ ॥

ಚಂ॥ ಲಲಿತ ಪದಂ ಪ್ರಸನ್ನ ಕವಿತಾ ಗುಣಮಿಲ್ಲದೆ ಪೂಣ್ದು ಪೇೞ್ದ ಬೆ।
ಳ್ಗಳ ಕೃತಿಬಂಧಮುಂ ಬರೆ[1][ಪ]ಕಾಱರ ಕೈಗಳ ಕೇಡು ನುಣ್ಣನ॥
ಪ್ಪಳಕದ ಕೇಡು ಪೇೞಿಸಿ[2]ದೊಡರ್ಥದ ಕೇಡೆನೆ ಪೇೞ್ದು ಬೀಗಿ ಪೊ।
ಟ್ಟಳಿಸಿ ನೆಗೞ್ತೆಗಾಟಿಸುವ ದುಷ್ಕವಿಯುಂ ಕವಿಯೆಂಬ ಲೆಕ್ಕನೇ ॥ ೧೨ ॥*

• ಉ॥ ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ ಕವಿ।
ವ್ಯಾಸನೆನೆಂಬ ಗರ್ವಮೆನಗಿಲ್ಲ ಗುಣಾರ್ಣವನೊಳ್ಪು ಮನ್ಮನೋ॥
ವಾಸಮ[3]ನೆಯ್ದೆ ಪೇೞ್ದಪೆನದಲ್ಲದೆ [4]ಗರ್ವಮೆ ದೋಷಮ[5][ೞ್ತೆ]ಗಂ।
ದೋಷಮೆ ಕಾಣೆನೆನ್ನ ಜೀವ ಮಾೞ್ಕೆಯೆ ಪೇೞ್ವೆನಿದಾವ ದೋಷಮೋ॥೧೩॥

ಚಂ॥ ವಿಪುಳ ಯಶೋ ವಿತಾನ ಗುಣಮಿಲ್ಲದನಂ ಪ್ರಭು ಮಾಡಿ ಪೂರ್ವ ಭೂ।
ಮಿಪರ ಪದಂಗಳಂ ಪುಗಿಸಿ [6]ಪೋಲಿಪೊಡೀತನುದಾತ್ತ ಪೂರ್ವ ಭೂ॥
ಮಿಪರುಮನೊಳ್ಪಿನೊಳ್ ತಗುಳೆವಂದೊಡೆಯಿಾ ಕಥೆಯೊಳ್ ತಗುಳ್ಚಿ ಪೋ।
ಲಿಪೊಡೆನಗೞ್ತೆಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್॥೧೪॥

ಕಂ॥ ಶ್ರೀಮಚ್ಚಳುಕ್ಯ ವಂಶ।
ವ್ಯೋಮಾಮೃತ ಕಿರಣನೆನಿಪ ಕಾಂತಿಯನೊಳಕೊಂ॥
ಡೀ ಮಹಿಯೊಳಾತ್ಮ ವಂಶ ಶಿ।
ಖಾಮಣಿ ಜಸಮೆಸೆಯೆ [7]ಯುದ್ಧಮಲ್ಲಂ ನೆಗೞ್ದಂ ॥ ೧೫ ॥
ಆತಂ ನಿಜ ಭುಜ[8]ವಿಜಯ।
ಖ್ಯಾತಿಯನಾಳ್ದಾಳ್ದ[9]ನಧಿಕಬಲನವ[10]ನಿಪತಿ॥
ವ್ರಾತ ಮಣಿ ಮುಕುಟ ಕಿರಣ।
ದ್ಯೋತಿತ ಪಾದಂ ಸಪಾದ ಲಕ್ಷ ಕ್ಷಿತಿಯಂ ॥ ೧೬ ॥

---

[1] ಹ (ಕ. ಖ. ಘ.); [2] ದನರ್ಥದ (ಘ.); [3] ದಾಗೆ (ಕ. ಖ.); [4] ಕಬ್ಬಮೆ (ಕ. ಖ.); [5] ರ್ಥಿ (ಕ. ಖ. ಘ.); [6] ಪೋಲ್ವೆಸೆದೀತ (ಖ.), ಪೋಲಿಪರೀ (ಪ.); [7] ದುದ್ದಮಲ್ಲಂ (ಘ.). [8] ಬಲ ವಿ (ಕ. ಖ); [9]ನಮಿತ ರಿಪುಬಳನಮಿತ (ಘ.); [10] ನಮಿತ (ಖ.)

*೧೨ನೆಯ ಪದ್ಯವಾದ ಮೇಲೆ, ಘ. ಪ್ರತಿಯಲ್ಲಿ ಮಾತ್ರ ಮುಂದೆ ಹೇಳುವ ಪದ್ಯವನ್ನು ಕೊಟ್ಟಿದೆ; ಪತ್ರವು ಹರಿದುಹೋಗಿರುವುದರಿಂದ ಪದ್ಯವು ಸಮಗ್ರವಾಗಿಲ್ಲ:—

ಉ॥ ಬ್ಯಾಸ ಮುನೀಂದ್ರನೀಶ್ವರನ ಪೇೞ್ದುಪದೇಶದೊಳೊಂದು ದಿಬ್ಯ ಕೈ।
ಳಾಸದೊಳಿರ್ದು ತಿ . . . . . . . . . . . . . . ॥
. . . . ಶಿಷ್ಯನೆಯ್ದೆ ಜನಮೇಜಯನೆಂಬ ನೃಪಂಗೆ ಪೇೞ್ದುಳಾ।
ಶಾಸನಮಾಗೆ ಮಾಡಿದುದನಿಂತಿತಿಹಾಸ ಕಥಾ ಪ್ರಬಂಧಮಂ॥

ಕಂ || ಏನಂ ಪೇೞ್ವುದೊ ಸಿರಿಯುೞ್ |
ದ್ದಾನಿಯನೆಣ್ಣೆಯೊಳೆ ತೀವಿ ದೀರ್ಘಿಕೆಗಳನಂ ||
ತಾ ನೃಪತಿ ನಿಚ್ಚಲಯ್ಯೂ |
ೞಾನೆಯುನವಗಾಹಮಿರಿ[1]ಸುವಂ [2]ಬೋದನದೊಳ್ || ೧೭ ||

ಶ್ರೀಪತಿಗೆ [3]ಯುದ್ಧಮಲ್ಲ ಮ |
ಹೀಪತಿಗೆ ನೆಗೞ್ತೆ ಪುಟ್ಟೆ ಪುಟ್ಟಿದನಖಿಳ ||
ಕ್ಷ್ಮಾಪಾಲ ಮೌಳಿ ಮಣಿ ಕಿರ |
ಣಾ[4]ಪಾಳಿತ ನಖ ಮಯೂಖ ರಂಜಿತ ಚರಣಂ || ೧೮ ||

ಅರಿಕೇಸರಿಯೆಂಬಂ ಸುಂ |
ದರಾಂಗನತ್ಯಂತ ವಸ್ತುವಂ ಮದ ಕರಿಯಂ ||
[5]ಹರಿಯಂ [6]ಪಡಿವಡೆಗುರ್ಚಿದ |
ಕರವಾಳನೆ ತೋಱೆ ನೃಪತಿ ಗೆಲ್ಲಂಗೊಂಡಂ || ೧೯ ||

ನಿರುಪಮ ದೇವನ ರಾಜ್ಯದೊ |
ಳರಿಕೇಸರಿ [7]ವೆಂಗಿ [8]ವಿಷಯಮಂ ತ್ರಿ[ಕಳಿಂಗಂ] ||
ಬೆರಸೊತ್ತಿ ಕೊಂಡು ಗರ್ವದೆ |
ಬರೆಯಿಸಿದಂ ಪೆಸರನಖಿಳ ದಿಗ್ಭಿತ್ತಿಗಳೊಳ್ || ೨೦ ||

ಕ್ಷತ್ರಂ ತೇಜೋ ಗುಣಮಾ |
ಕ್ಷತ್ರಿಯರೊಳ್ ನೆಲಸಿ ನಿಂದುದಾ ನೆಗೞ್ದಾದಿ ||
ಕ್ಷತ್ರಿಯರೊಳಮಿಲ್ಲೆನಿಸಿದು |
ದೀ ತ್ರಿಜಗದೊಳೆಸಗಿದೆಸಕಮರಿಕೇಸರಿಯಾ || ೨೧ ||

ಅರಿಕೇಸರಿಗಾತ್ಮಜರರಿ |
ನರಪ ಶಿರೋದಳನ ಪರಿಣತೋಗ್ರಾಸಿ ಭಯಂ ||
[9]ಕರ ಕರರಾಯಿರ್ವರೊಳಾರ್ |
ದೊರೆಯೆನೆ ನರಸಿಂಹ ಭದ್ರದೇವರ್ ನೆಗೞ್ದರ್ || ೨೨ ||

---

[1] ಸಿದಂ (ಕ. ಖ.); [2] ಜೌವನನೊಳ್ (ಕ.), ಜೋದನನೊಳ್ (ಖ.); [3] ದುದ್ಧಮಲ್ಲ (ಖ.), ನುದ್ಧಮಲ್ಲ (ಘ.); [4] ಪಾಟಲ (ಘ§.); [5] ಭರದಿಂ (ಕ.); [6] ಪಗೆವಡೆ (ಘ.); [7] ಯೆಂಬವಂ (ಕ.), ಯೆಂಬಂಗೆ (ಖ.); [8] ವಿಷಯ ಮಂತ್ರಿಗಳಿಂ (ಕ. ಖ.). ವಿಷಯ ಮಂತ್ರಿಗಳಿಂದಂ (ಘ.); [9] ಕರರೀ ಕಲಿ (ಕ.).

ಕಂ || ಅವರೊಳ್ ನರಸಿಂಗಂಗತಿ |
ಧವಳ ಯಶಂ [1][ಯುದ್ಧ]ಮಲ್ಲನಗ್ರಸುತಂ ತ ||
[2]ದ್ಭುವನ ಪ್ರದೀಪನಾಗಿ |
[3]ರ್ದವಾರ್ಯ ವೀರ್ಯಂಗೆ ಬದ್ದೆಗಂ ಪಿರಿಯ ಮಗಂ || ೨೩ ||

ಪುಟ್ಟಿದೊಡಾತನೊಳಱಿವೊಡ |
ವುಟ್ಟಿದುದಱಿವಿಂಗೆ ಪೆಂಪು ಪೆಂಪಿನೊಳಾಯಂ ||
ಕಟ್ಟಾಯದೊಳಳವಳವಿನೊ |
ಳೊಟ್ಟಜೆ ಪುಟ್ಟಿದುದು ಪೋಲ್ವರಾರ್ ಬದ್ದೆಗನಂ || ೨೪ ||

ಬಲ್ವರಿಕೆಯೊಳರಿ ನೃಪರ ಪ |
ಡಲ್ವಡೆ ತಳ್ತಿಱಿದು ರಣ[4]ದೊಳಾ ವಿಕ್ರಮಮುಂ ||
ಸೊಲ್ವಿನವಾವ[5]ರ್ಜಿಸಿದಂ |
ನಾಲ್ವತ್ತೆರಡಱಿಕೆಗಾಳೆಗಂಗಳೊಳೀತಂ || ೨೫ ||

ಚಂ || ವನಧಿ ಪರೀತ ಭೂತಳದೊಳೀತನೆ ಸೋಲದ ಗಂಡನೆಂಬ ಪೆಂ |
ಪಿನ [6]ಪೆಸರಂ ನಿಮಿರ್ಚಿದುದುಮಲ್ಲದೆ ವಿಕ್ರಮ[7]ದಿಂದೆ ನಿಂದಗು ||
ರ್ವೆನಲಿಱಿದಾಂತರಂ ಮೊಸಳೆಯಂ ಪಿಡಿವಂತಿರೆ ನೀರೊಳೊತ್ತಿ ಭೀ |
ಮನನತಿ ಗರ್ವದಿಂ ಪಿಡಿ[8]ಯೆ ಮೆಯ್ಗಲಿ ಬದ್ದೆಗನನ್ನನಾವನೋ || ೨೬ ||

ಮ || ಮುಗಿಲಂ ಮುಟ್ಟಿದ ಪೆಂಪು ಪೆಂಪನೊಳಕೊಂಡುದ್ಯೋಗಮುದ್ಯೋಗ
ದೊಳ್ |
ನೆಗೞ್ದಾಜ್ಞಾ ಫಲಮಾಜ್ಞೆಯೊಳ್ ತೊಡರ್ದ[9]ಗುರ್ವೊಂದೊಂದಗುರ್ವಿಂ
ದಗು ||
ರ್ವುಗೊಳುತ್ತಿರ್ಪರಿ ಮಂಡಳಂ ಜಸಕಡರ್ಪಪ್ಪನ್ನೆಗಂ ಸಂದನೀ |
ಜಗದೊಳ್ ಬದ್ದೆಗ[10]ನನ್ನನಾವನಿೞಿಕುಂ [11]ಭ್ರೂಕೋಟಿಯಿಂ ಕೋಟಿ
ಯಂ || ೨೭ ||

ಕಂ || ಮೇರು[12][ವ] ಪೊನ್ ಕಲ್ಪಾಂಘ್ರಿಪ |
[13]ದಾರವೆ ರಸ[14]ದೊಱವು ಪರುಸವೇದಿ[15]ಯ ಕಣಿ ಛಂ ||
ಡಾರದೊಳುಂಟೆನೆ ಕುಡುವ[16]ನಿ |
ವಾರಿತ ದಾನಕ್ಕೆ ಪೋಲ್ವರಾರ್ ಬದ್ದೆಗನಂ || ೨೮ ||

---

[1] ದುಗ್ಧ (ಕ.ಖ.), ದುದ್ದ (ಘ.); [2] ದ್ಭುವನ (ಪ.); [3] ರ್ದವಿರಲ ವೀರಂಗೆ, (ಕ.); ರ್ದುರುತರ ವೀರಂಗೆ (ಖ.); [4] ವಿನೋದ ಕ್ರಮಮುಂ (ಘ.); [5] ರ್ತಿ (ಪ.); [6] ಪೆಸರಿಂ (ಖ. ಘ.); [7] ಗರ್ವದಿಂದಗು | ರ್ವಿನೊಳಿದಿರಾಂತರಂ (ಘ.); [8] ದ (ಘ.) [9] ದೋರ್ಗರ್ವಕ್ಕ ಗುರ್ವಾಗೆ ಮ (ಘ.); [10] ನೀತನಾಂತನೆ ವಲಂ (ಕ.); [11] ಭೂಕೋಟಿಯಂ (ಕ. ಖ.). [12] ವೆ (ಕ. ಖ. ಘ.); [13] ಮಾ (ಕ. ಖ.); [14] ಮೊಱತೆ (ಕ.ಖ.); [15] ಯೆ (ಕ.); [16] ನ (ಕ. ಖ.).

*ತರಳ || ಸುರಭಿ ದೇವತೆಯೆಂಬ [1]ಕಾಪಿನೆ ಮಾಣ್ದುದೇಱುವುದೊಂದಪೆಂ |
ದಿರದೆ ಮಾಣ್ದು[2]ದು ದೇವ ವಾರಣವೇಟ[3] [3]ಉಂಟವು ಪೋದೊಡಾ ||
[4][ಖ]ರಕರಂಗರಿದೆಂದೆ [5]ಮಾಣ್ದಿ[ರೆ] ಮಾ[6][ಣ್ದ]ವಾ ಹರಿ ನೀನೆ ಪೇ |
ೞರಿಯುವೆಂದಿವು ಭದ್ರದೇವರ ಚಾಗದೊಳ್ಪೊಱಗಾ[7]ದುವೇ || ೨೯ ||

ಕಂ || ಆ ಬದ್ದೆಗಂಗೆ ವೈರಿ ತ |
ಮೋಬಳ ದಶಶತಕರಂ ವಿರಾಜಿತ ವಿಜಯ ||
ಶ್ರೀ ಬಾಹು [8][ಯುದ್ಧ]ಮಲ್ಲನಿ |
ೞಾ[9]ಬಹು ವಿಧ[10][ರ]ಕ್ಷಣ ಪ್ರವೀಣ[11]ಕೃಪಾಣಂ || ೩೦ ||

ಆತ್ಮಭವನಾ ನರಾಧಿಪ |
ನಾತ್ಮ [12]ಜನಾ ನಹುಷ ಪೃಥು ಭಗೀರಥ ನಳ ಮಾ ||
ಹಾತ್ಮರನಿೞಿಸಿ ನೆಗೞ್ದ ಮ |
ಹಾತ್ಮಂ ನರಸಿಂಹನಱುವಿನೊ[13]ಳ್ ಪರಮಾತ್ಮಂ || ೩೧ ||

ಮಾಂಕರಿಸದಱುವು ಗುರು ವಚ |
ನಾಂಕುಶಮಂ ಪಾೞಿಯೆಡೆಗೆ ಪೊಣರ್ದರಿ ಬಲಮಂ ||
ಕಿಂಕೊಳೆ [14]ಮಾ[ೞ್ಪಿಡೆಗಣಮೆ] ನಿ |
ರಂಕುಶಮೆನಿಸಿದುದು ಮುನಿಸು ಭದ್ರಾಂಕುಶ[15][ನಾ] || ೩೨ ||†

---

* ಈ ಪದ್ಯನನ್ನೂ ಘ. ಪ್ರತಿಯಲ್ಲಿ ಹಂಸಪಾದ ಹಾಕಿ ಸೇರಿಸಿದೆ:—
ಸುರಭಿ ದೇವನಿಯೆಂಬ ಗೋಸನೆ ಮಾೞ್ಪುದೇಱುವುದೊಂದದಂ |
ಹರಿಗೆ ಮುನ್ನಿಸು ದೇವ ವಾರಣಮೇೞೆಯುಂಟವು ಪೋದೊಡಾ ||
ಖರಕರಂಗರಿದೆಂದು ಮಾಣಿಸೆ ಮಾಣ್ದವಾಹವದಲ್ಲಿ ಪೇ |
ೞರಿಯುವಾದುವೊ ಭದ್ರದೇವನ ಚಾಗದೊಳ್ಪೆಱಗಾದುವೋ ||

† ಈ ಪದ್ಯವು ಕ. ಖ. ಪ್ರತಿಗಳಲ್ಲಿ ಮುಂದೆ ಹೇಳುವಂತಿದೆ:—
ಮಂತರಿಸಿದಱುವು ಗುರು ವಚ |
ದಂತುಟು ಸಮುಪಾೞಿಯೆಡೆಗೆ ಪೊಣರ್ದಿರೆ ಚಲಮಂ ||
ತಿಂತೊಳೆ ಮಾಪ್ಪೊರ್ಡೆ ಗುಣಮೋ |
ರಂತೆ ನಿಸರ್ಗ್ಗಮೆ ಸುಭದ್ರ ಮುನಿಪುಂಗವನಾ ||

1 ತಾಪನೆ (ಕ.), ತಾಪಿನೆ (ಖ.); 2 ದೆ (ಖ. ಘ.); 3 ಗೊಂಡ (ಕ. ಖ. ಘ.); 4 ತರತರಂಗವಿದೆಂದೆ (ಕ. ಖ.), ಕರಕರಂಗರಿದೆಂದೆ (ಘ.); 5 ಮಾಣ್ದುವು (ಕ.); 6 ಣ್ದ (ಕ. ಖ. ಘ.); 7 ಗದೇ (ಕ. ಖ.); 8 ದುಗ್ಧ, ದುದ್ಧ (ಕ. ಖ. ಘ.); 9 ಪಾಳಕ (ಘ.); 10 ಲ (ಕ. ಖ. ಘ.); 11 ನೃಪಾಲಂ (ಕ. ಖ.); 12 ಭವಂ (ಘ.); 13 ಳನುಪಮಾತ್ಮಂ (ಕ. ಖ.) 14 ಮಾರ್ಪಡೆ . ಣವೆ (ಘ.); 15 ನಂ (ಘ.).

ಕಂ|| ತಱಸಂದು ಲಾಟಿರೊಳ್ [1]ತ|
[ಳ್ತಿ]ಱದೇಱಂ ಪೇಟಿ[3] ಕೇಳ್ದು ಮಂಡಲಮಿನ್ನುಂ||
[2]ತಿಱನೀರಿಕ್ಕುವುದೆನಿಸಿದ|
ತಱಸಲವಿನ ಚಲದ ಬಲದ ಕಲಿ ನರಸಿಂಹಂ ||೩೩||

ಸಿಂಗಂ ಮಸಗಿದವೋಲ್ ನರ|
ಸಿಂಗಂ ತಳ್ತಿಱಿಯೆ [3]ನೆಗಟ್ದಿ ನೆತ್ತರ್ ನಭದೊಳ್||
ಕೆಂಗುಡಿ ಕವಿದಂತಾದುದಿ|
ದೇಂ ಗರ್ವದ ಪೆಂಪೊ [4]ಸಕಲ ಲೋಕಾಶ್ರಯನಾ ||೩೪||

ಏಟಿಂ ಮಾಟಿ[5]ಮುಮಂ ಪಾ|
ಅ[3]ೀಟಿ[3] ತಗುಳ್ದಿಱಿದು ನರಗನು[6]ರಿಪಿದೊಡೆ ಕರಿಂ||
ಕೇಟಿಸಿದಾತನ ತೇಜದ|
ಬೀಟಲನನುಕರಿಪುವಾದುವೊಗೆದುರಿವುರಿಗಳ್ ||೩೫||

ವಿಜಯಾರಂಭ ಪುರಸ್ಸರ
ವಿಜಯ ಗಜಂಗಳನೆ ಪಿಡಿದು ಘೂರ್ಜರ ರಾಜ||
ಧ್ವಜಿನಿಯನಿಱದೋಡಿಸಿ ಭುಜ|
ವಿಜಯದೆ ವಿಜಯನುಮನಿಟಿಸಿದಂ ನರಸಿಂಹಂ ||೩೬||

ಸಿಡಿಲವೊಲೆಱಗುವ ನರಗನ|
ಪಡೆಗಗಿ[7]ದುಮ್ಮಳದಿನುಂಡೆಡೆಯೊಳುಣ್ಣದೆಯುಂ||
ಕೆಡೆದೆಡೆಯೊಳ್ [8][ಕ]ಡೆಯದೆ ನಿಂ|
ದೆಡೆಯೊಳ್ ನಿಲ್ಲದೆಯುಮೋಡಿದಂ ಮಹಿಪಾಲಂ ||೩೭||

ಗಂಗಾ ವಾರ್ಧಿಯೊಳಾತ್ಮ ತು|
ರಂಗಮುಮಂ ಮಿಸಿಸಿ ನೆಗ[9]ಟ್ದ ಡಾಳಪ್ರಿಯನೊಳ್||
ಸಂಗ[10]ತ ಗುಣನಸಿ ಲತೆಯನ|
ಸುಂಗೊಳೆ ಭುಜ ವಿಜಯ ಗರ್ವದಿಂ ಸ್ಥಾಪಿಸಿದಂ ||೩೮||

---

[1] ತುರಿ| ದೆ ಱಪಂ ತವೆ ಕೇಳ್ದು ಪೇಟ್ದು (ಕ. ಖ.); [2] ಕಿಱು ನೀರುಕ್ಕು (ಘ.); [3] ನೆಗೆದ (ಪ.); [4] ಧರಣಿ (ಘ.); [5] ಳಮುಯ್ಯಂ| ಪಾಟಿ (ಕ. ಖ.); [6] ಱುಬಿ (ಕ. ಖ.); [7] ದುಂಡೆಡೆಯೊಳಣಮು (ಘ.); [8] ಕಿ (ಕ. ಖ.). [9] ಟ್ಟೊಡಾತ್ಮ (ಕ. ಖ.); [10] ನ ಗುಣಶೀ (ಕ. ಖ.).

ಕಂ॥ ಆ ನರಸಿಂಹ ಮ[1]ಹೀಶ ಮ।
ನೋನಯನ ಪ್ರಿಯೆ ವಿಳೋಳ ನೀಳಾಳಕೆ ಚಂ॥
ದ್ರಾನನೆ ಜಾಕವ್ವೆ ದಲಾ।
ಜಾನಕಿಗಗ್ಗಳವೆ [2]ಕುಲದೊಳಂ ಶೀಲದೊಳಂ ॥ ೩೯ ॥

ಪೊಸತಲರ್ದ ಬಿಳಿಯ ತಾವರೆ।
ಯೆಸೞ್ಗಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್॥
[3]ನಸು ಮಸುಳ್ದು [4]ತೋರ್ಪಳಿನೆ ಪೋ।
[5]ಲಿಸುವೊಡೆ ಜಾಕವ್ವೆಗುೞಿದ ಪೆಂಡಿರ್ ದೊರೆಯೇ ॥ ೪೦ ॥

ಆ ಜಾಕವ್ವೆಗಮಾ ವಸು।
ಧಾ [6]ಜಯ ಸದ್ವಲ್ಲಭಂಗಮತಿ ವಿಶದ ಯಶೋ॥
[7]ರಾಜಿತನೆನಿಪರಿಕೇಸರಿ।
ರಾಜಂ ತೇಜೋಗ್ನಿಮಗ್ನ ರಿಪು ನೃಪ [8]ಶಲಭಂ ॥ ೪೧ ॥

ಮಗನಾದನಾಗಿ ಚಾಗದ।
ನೆಗೞ್ತೆಯೊಳ್ ಬೀರದೇೞ್ಗೆಯೊಳ್ ನೆಗೞ್ದ ಮಗಂ॥
ಮಗನೆನೆ ಪುಟ್ಟಲೊಡಂ [9]ಕೋ।
ೞ್ಕ್ರಗಗೊಂಡುದು ಭುವನ ಭವನಮರಿಕೇಸರಿಯೊಳ್ ॥ ೪೨ ॥

ತರಳ॥ ಮದದ ನೀರೊಳೆ ಲೋಕ ವಾರ್ತೆಗೆ ಬೆಚ್ಚುನೀರ್ದಳಿದಾಗಳಾ।
ಮದ ಗಜಾಂಕುಶದಿಂದೆ ಪೆರ್ಚಿಸಿ ನಾಭಿಯುಂ ಮದ ದಂತಿ ದಂ॥
ತದೊಳೆ ಕಟ್ಟಿದ ತೊಟ್ಟಿಲಂ ನಯದಿಂದವೇಱಿ[10][ಸೆ] ಬಾ[11]ಳ ಕಾ।
ಲದೊಳೆ ತೊಟ್ಟಿಲಿಗಂ ಗಜ ಪ್ರಿಯನಪ್ಪುದಂ ಸಲೆ ತೋಱಿದಂ ॥ ೪೩ ॥

ಕಂ॥ [12]ರುಂದ್ರಾಂಭೋಧಿ ಪರೀತ ಮ।
ಹೀಂದ್ರ[13]ರದಾರಿನ್ನರೀ ನರೇಂದ್ರಂ ಸಾಕ್ಷಾ॥
ದಿಂದ್ರಂ ತಾನೆನೆ ಸಲೆ ನೆಗ।
ೞ್ದಿಂದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ ॥ ೪೪ ॥

---

1 ನೋನಯ। ನಾನಂದ ಶ್ರೀವಿಳಾಸವತಿ . . . . ಚಂ॥ ದ್ರಾನನೆ ಚೆಲ್ವಿಕೆಯಿಂದಾ। (ಕ.) ; 2 ಗುಣ (ಕ. ಖ.) ; 3 ಕಿಸುಗುಳಿಯೆ (ಕ. ಖ. ಘ.) ; 4 ನಿಸದೆ ಜವಳಿಯೆ (ಕ.) ; 5 ನಿಸುವಳೆ (ಕ. ಖ. ಘ.) ; 6 ಜಿ (ಕ. ಖ.) ; 7 ಭ್ರಾ (ಕ. ಖ.) ; 8 ಶರಭಂ (ಖ. ಘ.) ; 9 ಕೇ (ಕ. ಖ.) ; 10 ಸಿ (ಕ. ಖ. ಘ.) ; 11 ೞ್ವ (ಕ. ಖ.) ; 12 ಮಂ (ಕ. ಖ.) ; 13 ರೊಳೇನೀ ನರೇಂದ್ರ ಚಕ್ರಂ ನಯದೊಳ್ ॥ ಇಂ (ಕ.), ರೊಳೇಸೀ ನರೇಂದ್ರ ಚಕ್ರ ದೊಳಿಂದ್ರಂ (ಖ.)

ಕಂ॥ [1]ಅಮಿತ ಮತಿ ಗುಣದಿನತಿ ವಿ।
ಕ್ರಮ ಗುಣದಿಂ [2]ಶಾಸ್ತ್ರ ಪಾರಮುಂ ರಿಪುಬಳ [3][ಪಾ]॥
ರ[4]ಮುಮೊಡನೆ ಸಂದುವೆನಿಸಿದ।
ನ[5]ಮೇಯ ಬಲಶಾಲಿ ಮನುಜ ಮಾರ್ತಾಂಡ ನೃಪಂ ॥ ೪೫ ॥

ಉಡೆವಣಿ [6][ಪ]ಱಿಯದ ಮುನ್ನಮೆ।
ತೊಡಗಿ ಚಲಂ ನೆಗೞೆ ರಿಪು ಬಲಂಗಳನೆ ಪಡ॥
ಲ್ವಡಿಸಿ ಪರ ಬಲದ ನೆತ್ತರ।
ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ ಬಳೆದಂ ॥ ೪೬ ॥

ಮೇಲೆ[7]ೞ್ದ ಬಲಂ [8]ಕೋಟೆಗೆ।
ಮೇಲಪ್ಪೊಡಮನ್ಯ ವನಿತೆ ನೆಗೞ್ದೂರ್ವಶಿಗಂ॥
ಮೇಲಪ್ಪೊಡಮಕ್ಕೆಂದುಂ।
ಸೋಲವು ಕಣ್ ಪರ ಬಲಾಬ್ಧಿಗಂ ಪರ ವಧುಗಂ ॥ ೪೭ ॥

ಧುರದೊಳ್ ಮೂಱುಂ ಲೋಕಂ।
ನೆರೆದಿರೆಯುಂ ಕುಡುವ [9]ಪೊ[ೞ್ತ]ಱೊಳ್ ಮೇರುವೆ ಮುಂ॥
ದಿರೆಯುಂ ಬೀರದ ಬಿಯದಂ।
ತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಳಂ ॥ ೪೮ ॥

ಸಮನೆನಿಸು[10]ವ[ರ್] ಪ್ರಶಸ್ತಿ।
ಕ್ರಮದೊಳ್ ಸ್ವಸ್ತಿ ಸಮಧಿಗತ ಪಂಚ [11][ಮಹಾ] [12]ಶ॥
ಬ್ದ ಮಹಾ ಸಾಮಂತರೆನಲ್।
ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್ ॥ ೪೯ ॥

ಉ॥ ಚಾಗದ ಕಂಬಮುಂ ನಿಱಿಸಿ ಬೀರದ ಶಾಸನಮುಂ ನೆಗೞ್ಚಿ ಕೋ।
ಳ್ಪೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸ॥
ಕ್ಕಾಗರಮಾದ ಬದ್ದೆಗನಿನಾ ನರಸಿಂಹಸಿ[13]ನತ್ತ ನಾಲ್ವೆರಲ್।
ಮೇ[14]ಗು ಪೊದೞ್ದ ಚಾಗದೊಳಮೊಂದಿದ ಬೀರದೊಳಂ ಗುಣಾರ್ಣವಂ
॥ ೫೦ ॥

---

[1] ಕ್ರಮಿತ ರಿಪು(ಕ.); [2] ಶಸ್ತ್ರವಾ (ಕ.ಖ.) [3] ವಾ (ಕ.), ಹಾ (ಖ. ಘ); [4] ಮನೊ (ಕ.); [5] ಮಿತೋಭಯ ಶೌರ್ಯ (ಕ.); [6] ವ (ಕ. ಖ. ಘ.); [7] ಯ್ದ (ಕ.); [8] ತೋ (ಕ.); [9] ಪೊತ್ತರೊಳ್ (ಘ.); [10] ವ ಪ್ರಶಸ್ತಿ (ಕ. ಖ. ಘ); [11] ಮಾ (ಕ.), ಮಹ (ಖ. ಘ.); [12] ಶಬ್ದಂ। ಸಮತರೆ ತೋಱಿ ಯೆನಲ್ಕರೆ (ಕ.), ಶಬ್ದಂ। ಸಮಂತರೆ ತೋಱೆಯೆನಲ್ (ಖ.); [13] ನಂತೆ ನಾಲ್ವರೊಳ್ (ಕ. ಖ.); [14] ಗೆ (ಘ.).

ಮ॥ಸ್ರ॥ಎನೆ ಸಂದುಂ ವೀರ ವೈರಿ ಕ್ಷಿತಿಪ ಗಜ ಘಟಾಟೋಪ ಕುಂಭಸ್ಥಳೀ ಭೇ।
ದನನುಗ್ರೋ[1][ದ್ಭಾ]ಸಿ ಭಾಸ್ವದ್ಭುಜ ಪರಿಘನನಾರೂಢ ಸರ್ವಜ್ಞನಂ ವೈ॥
ರಿ ನರೇಂದ್ರೋದ್ದಾಮ ದರ್ಪೋದ್ದಳನ[2]ನನೆ ಕಥಾನಾಯಕಂ ಮಾಡಿ ಸಂದ।
ರ್ಜುನನೊಳ್ ಪೋಲ್ವಿ ಕಥಾ ಭಿತ್ತಿಯನನುನಯದಿಂ ಪೇೞಲೆಂ ದೆತ್ತಿಕೊಂಡೆಂ ॥೫೧॥

†ವ॥ ಅದೆಂತೆನೆ—ಸ[3][ಮುನ್ಮಿಷ][4]ದ್ವಿವಿಧ ರತ್ನ ಮಾಲಾ ಪ್ರಭಾ[5]ಭಿ[ಲಾ]ರುಣ ಜಲಪ್ಲ[6][ವಾ]ವಿಳ ವಿಳೋಳ[7]ವೀಚೀ ರಯ ಪ್ರದಾರಿತ ಕುಳಾಚಲೋದಧಿ ಪರೀತಮಾಗಿರ್ದ ಜಂಬೂದ್ವೀಪದೊಳಗುಂಟು ನಾಡು ಕುರುಜಾಂಗಣ ನಾಮದಿಂ ಅಂತಾ ಕುರುಜಾಂಗಣ ವಿಷಯದೊಳ್—

ಚಂ॥ ಜಲ ಜಲನೊ[8][ಟ್ಟು]ತಿರ್ಪ ಪರಿಕಾಲ್ ಪರಿಕಾಲೊಳಳುರ್ಕೆಗೊಂಡ ನೆ।
ಯ್ದಿಲ ಪೊಸವೂ ಪೊದಟ್ದು ಪೊಸ ನೆಯ್ದಿಲ ಕಂಪನೆ ಬೀಱಿ ಕಾಯ್ತು ಕೆಂ॥
ಗೊಲೆಯೊಳೆ ಜೋಲ್ವ ಶಾಳಿ [9][ನವ] ಶಾಳಿಗೆ ಪಾಯ್ವ ಶುಕಾಳಿ ತೋ ಱಿ ಕೆ।
ಯ್ವೊಲಗಳ[10]ನೊಪ್ಪಿ ತೋ[11][ಱಿ] ಸಿರಿ ನೋಡುಗುಮಾ ವಿಷಯಾಂತರಾಳ ದೊಳ್ ॥೫೨॥

*ಬೆಳೆದೆಱಗಿರ್ದ ಕೆಯ್ವೊಲನೆ ಕೆಯ್ವೊಲನಂ ಬಳಸಿರ್ದ ಪೂತ ಪೂ।
ಗೊಳಗಳೆ ಪೂತ ಪೂಗೊಳಗಳಂ ಬಳಸಿರ್ದ ವಿಚಿತ್ರ ನಂದನಾ॥
ವಳಿಗಳೆ ನಂದನಾವಳಿಗಳಂ ಬಳಸಿರ್ದ ಮದಾಳಿ ಸಂಕುಲಂ।
ಗಳೆ ವಿಷಯಾಂಗನಾ ಲುಳಿತ ಕುಂತಳದಂತೆವೊಲೊಪ್ಪಿ ತೋಱುಗುಂ॥೫೩॥

---

1 ದ್ಭಾ (ಕ. ಖ.), ದ್ಬಾ (ಘ.) ; 2 ಘಟನನಂ (ಕ. ಖ.) ; 3 ಮುಂನತ (ಕ.), ಮುಂನ್ವಿಶ (ಘ.) ; 4 ದೀಪ್ಯದ್ವಿವಿಧ (ಕ.) ; 5 ಭೀದಾ (ಕ. ಖ.) ; 6 ವ (ಕ. ಖ. ಘ.) ; 7 ವೇಳಾ ಪಯಃ (ಕ.) 8 ಕ್ಕು (ಕ. ಘ.), ಕ್ಕುರ್ (ಖ.) ; 9 ವನ (ಕ. ಖ. ಘ.) ; 10 ನಾವ ನಾಡು ಸರಿಮಾ (ಘ§.) ; 11 ಱಿ[3] (ಕ. ಖ. ಘ.).

† ಘ. ಪ್ರತಿಯಲ್ಲಿ ಇದನ್ನು ‘ ಪೃಥ್ವಿ ’ ಎಂದು ಬರೆದಿದೆ. ವೃತ್ತವು ಹೀಗಿರಬಹುದು:
ಪೃಥ್ವಿ॥ ಅದೆಂತೆನೆ ಸ [ಮುನ್ಮಿಷ] ದ್ವಿವಿಧ ರತ್ನಮಾಲಾ ಪ್ರಭಾ।
ಭಿದಾರುಣ ಜಲಪ್ಲ [ವಾ] ವಿಳ ವಿಳೋಳ ವೀಚೀ ರಯ॥
ಪ್ರದಾರಿತ ಕುಳಾಚಲೋದಧಿ ಪರೀತಮಾಗಿರ್ದ ಜಂ।
[ಬುದೀವಿಯೊ]ಳಗುಂಟು ನಾಡು ಕುರುಜಾಂಗಣ [ಂ] ನಾಮದಿಂ॥

* ೫೩-೫೪ನೆಯ ಪದ್ಯಗಳನ್ನು ಬೇರೆ ಬೇರೆಯಾಗಿ ಕೊಟ್ಟಿರುವುದು ಘ. ಪ್ರತಿಯಲ್ಲಿ ಮಾತ್ರ. ಮಿಕ್ಕ ಪ್ರತಿಗಳಲ್ಲಿ ೫೩ನೆಯ ಪದ್ಯದ ಪೂರ್ವಾರ್ಧವನ್ನೂ ೫೪ನೆಯದರ ಉತ್ತರಾರ್ಧವನ್ನೂ ಸೇರಿಸಿಕೊಟ್ಟಿದೆ. ಅವುಗಳಲ್ಲಿ ೫೪ನೆಯ ಪದ್ಯದ ಮೂರನೆಯ ಪಾದದ ಮೊದಲಲ್ಲಿರುವ ‘ ಬೆಳೆವುದು ’ ಎಂಬುದಕ್ಕೆ ಬದಲಾಗಿ ‘ ವಳಿಗಳೆ ’ ಎಂದಿದೆ.

ಚಂ || ಲಳಿತ ವಿಚಿತ್ರ ಪತ್ರ ಫಲ ಪುಷ್ಪಯುತಾಟವಿ ಸೊರ್ಕಿದಾಸೆಯುಂ |
ಬೆಳೆವುದು [1][ದೇ]ವ ಮಾತೃಕಮೆನಿಪ್ಪ ಪೊಲಂ ನವ ಗಂಧ ಶಾಳಿಯುಂ ||
ಬೆಳೆವುದು ರಮ್ಯ ನಂದನ ವನಾಳಿ ವಿಯೋಗಿ ಜನಕ್ಕೆ ಜೇಟಮುಂ |
ಬಳೆವುದು ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ || ೫೪ ||

ಕಂ || ಆವಲರುಂ ಪಣ್ಣುಂ ಬೇ |
ತೋ[2]ವು ಗಡ ಬೇಯುವಲ್ಲಿ ಮಲ್ಲಿಗೆಗಳುಮಿ ||
ಮ್ಮಾವುಗ[3]ಳುಮೆಂದೊಡಿನ್ ಪೆಱ |
ತಾವುದು ಸಂಸಾರ ಸಾರ ಸರ್ವಸ್ವ ಫಲಂ || ೫೫ ||

ಮಿಡಿದೊಡೆ ತನಿಗ[4][ರ್ವು] ರಸಂ |
ಬಿಡುವುವು ಬಿರಿದೊಂದು ಮುಗುಳ ಕಂಪಿನೊಳೆ ಮೊಗಂ ||
ಗಿಡುವುವು ತುಂಬಿಗಳಟ್ಟಿಮೆ |
ಪಡುವುವು ಕುಡಿದೊಂದು ಪಣ್ಣರಸದೊಳೆ ಗಿಳಿಗಳ್ || ೫೬ ||

ಸುತ್ತಿಱಿದ ರಸದ ತೊಱೆಗ[5]ಳೆ |
ಮುತ್ತಿನ ಮಾಣಿಕದ ಪಲವುಮಾಗರಮೆ ಮದೋ ||
ನ್ಮತ್ತ ಮದ ಕರಿ ವನಂಗ[6][ಳೆ] |
ಸುತ್ತಲುಮಾ ನೆಲದ ಸಿರಿಯನೇನಂ ಪೊಗೞ್ವಂ || ೫೭ ||

ವ || ಅಂತು ಸೊಗಯಿಸುವ ಕುರುಜಾಂಗಣ ವಿಷಯಕ್ಕೆ ರಾಜದ್ರಾಜಧಾನಿಯಾಗಿ[7] [ರ್ದು] ಹರ ಜಟಾ ಜೂಟಕ್ಕೆ ಚಂದ್ರ ಲೇಖೆಯಿರ್ಪಂ[8][ತೆ] ದಿಕ್ಕರಿ [9]ಕಟ ತಟಕ್ಕೆ ಮದ ಲೇಖೆ[10][ಯಿರ್ಪಂ]ತೆ ಕೈಟಭಾರಾತಿಯ ವಿಶಾಲೋರ ಸ್ಥಳಕ್ಕೆ ಕೌಸ್ತುಭಮಿರ್ಪಂತೆ ಸೊಗಯಿಸುತಿರ್ದುದು ಹಸ್ತಿ [11]ನಪುರಮೆಂಬುದು ಪೊೞಲಲ್ಲಿ—
ರಗಳೆ || ಅದಱ ಪೊಱವೊೞಲ ವಿಶಾಳ ಕನಕ ಕೃತಕ ಗಿರಿಗಳಿಂ
ಫಳ [12][ಪ್ರಕೀರ್ಣ] ತರುಗಳಿಂ |
ನನೆಯ ಕೊನೆಯ ತಳಿರ ಮುಗುಳ ವನ[13]ಲತಾ ನಿಕುಂಜದಿಂ
ಪ್ರಸೂನರಜದ ಪುಂಜದಿಂ |
ಗಗನ ತಳಮೆ ಪಱಿದು ಬಿೞ್ದುದೆನಿಪ ಬಹು ತಟಾಕದಿಂ
ಕುಕಿಲ್ವ ನಲಿವ ಕೋಕದಿಂ |

---

1 ದೆಯ್ವ (ಘ.); 2 ವು (ಖ. ಘ.); 3 ಳುಂಟೆಂದೊಡೆ (ಕ.), ಳುಂಟೆಂದೊಡಿಂ (ಖ. ಘ.); 4 ಬ್ಬ (ಕ. ಖ. ಘ.); 5 ಳ್ (ಕ.); 6 ಳ್ (ಕ. ಖ. ಘ.); 7 ರ್ದ (ಕ. ಖ. ಘ.); 8 ತಿರ್ದ (ಕ. ಖ. ಘ.); 9 ಕರಟ ತಲಕ್ಕೆ (ಕ.); 10 ಯಂತೆ (ಕ.ಖ.ಘ.); 11 ನಾ (ಕ. ಖ.); 12 ಪ್ರಸೂನ ಕೀರ್ಣ (ಕ. ಖ. ಘ.); 13 ಲತಾಳಿ ಕುಂಜ (ಕ.), ಲತಾಳಿ ಪುಂಜ (ಖ. ಘ.).

ಸುರಿವ ಸುರಯಿಯುರಲ ಮುಗುಳ್ಗೆ ಮೊಗಸಿವಳಿ ಕುಳಂಗಳಿಂ
[1]ತೊದ[ಲ್ವ] ಶಿಶು ಶುಕಂಗಳಿಂ।
[2]ತೆಗೆಯೆ ಬೀರ ರವ[3][ದೆ] ಮೇಲೆ ಪರಿವ ಮದ ಗಜಂಗಳಿಂ
ಚಳತ್ತುರಂಗಮಂಗಳಿಂ।
ಲವಣ ಜಳಧಿ ಬಳಸಿದಂತೆ ಬಳಸಿದಗಟಿ ನೀಳದಿಂ
ದುದಗ್ರ[4]ಕನಕ ಶಾಳದಿಂ।
ದೊಳಗೆ ಕುಲ ನಗಂಗಳೆನಿಪ ದೇವಕುಲದ ಭೋಗದಿಂ
ಸರಾಗವಾದ ರಾಗದಿಂ।
ದಿವಮನೇಳಿಪಂತು ಮಿಳಿರ್ವ ವಿವಿಧ ಕೇತನಂಗಳಿಂ
ಸದಾನಿ ಕೇತನಂಗಳಿಂ।
ಧನದ ಭವನಮೆನಿಪ ಸಿರಿಯ ಬಚ್ಚ[5]ರಾಪಣಂಗಳಿಂ
ಪೊದಳ್ದ [6][ಕಾವ]ಣಂಗಳಿಂ।
ವಿಟ ಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ
ವಿದಗ್ಧ ಹೃದಯಹಾರಿಯಿಂ।
ಕನಕ ಗೋಪುರಂಗಳೊಳಗಣೆರಡು ದೆಸೆಯ [7]ಗುಣಣೆಯಿಂ
ವಿಳಾಸಿನಿಯರ ಗಡಣೆಯಿಂ।
ಸುರತ ಸುಖದ ಬಳ್ಳವಳ್ಳಿಯೆನಿಪ ಬಳ್ಳಿ ಮಾಡದಿಂ
ಮಹಾ ವಿನೋದನೀಡದಿಂ।
ಕನಕ ಶೈಲಮೆನಿಸಿ ನೆಗಟ್ದ ಭೂಮಿಪಾಲ ಭವನದಿಂ
ಸಮಸ್ತ ವಸ್ತುಭುವನದಿಂ ॥ ೫೮ ॥

ವ॥ ಅಂತು ಮೂಱು ಲೋಕದ ಚೆಲ್ವೆಲ್ಲಮಂ ವಿಧಾತ್ರನೊಂದೆಡೆಗೆ ತೆರಳ್ಚಿದಂತೆ ಸಮಸ್ತ ವಸ್ತು ವಿಸ್ತಾರ ಹಾರಮಾಗಿರ್ದ ಹಸ್ತಿನಪುರವೆ ನಿಜ ವಂಶಾವಳಂಬನಾಗೆ ನೆಗಟ್ದ ಭರತ ಕುಲ ತಿಲಕರ ವಂಶಾವತಾರಮೆಂತಾದುದೆಂದೊಡೆ—

ಕಂ॥ ಜಳರುಹನಾಭನ ನಾಭಿಯ।
ಜಳ ಬುದ್ಬುದದೊಳಗೆ ಸುರಭಿ ಪರಿಮಳ ಮಿಳಿತೋ॥
ಲ್ಲುಳಿತಾಳಿ [8]ಜಲ[ಜ]ಮಾಯ್ತಾ।
ಜಳ[9][ಜ]ದೊಳೊಗೆದಂ ಹಿರಣ್ಯಗರ್ಭ ಬ್ರಹ್ಮಂ ॥ ೫೯ ॥

---

[1] ತೊದಳ್ವ (ಘ.); [2] ತೆಗೆಯುದಬ್ಬ ಸಮಿತಿವೋಲೆ (ಕ.); [3] ದ (ಖ. ಘ.) [4] ದುರ್ಗ ಶೈಳದಿಂ (ಕ.); [5] ಊಟಣಂ (ಕ. ಖ.); [6] ಕೇವಿಕಂ (ಘ.); [7] ಗಣನೆ (ಕ.); [8] ಜಲಮಾಯ್ತಾ (ಘ.); [9] ದೊಳಗೊಗೆದಂ (ಕ. ಖ. ಘ.).

ಕಂ॥ ಕಮಲೋದ್ಭವನಮಳಿನ ಹೃ।
ತ್ಕಮಲದೊಳೊಗೆದರ್ ಸುರೇಂದ್ರ [1]ಧಾರಕರಾವಾ॥
[2][ಗಮಳರ್] ನೆಗೞ್ದಿರ್ದರ್ [3]ಪುಲ।
ಹ ಮರೀಚ್ಯತ್ರ್ಯಂಗಿರಃ ಪುಳಸ್ತ್ಯ ಕ್ರತುಗಳ್ ॥೬೦॥

ವ॥ ಅಂತು ಹಿರಣ್ಯಗರ್ಭ ಬ್ರಹ್ಮ ಮನಸ್ಸಂಭವದೊಳ್ ಪುಟ್ಟಿದಱುವರ್ಮಕ್ಕಳೊಳಗೆ ಮರೀಚಿಯ ಮಗಂ ಕಶ್ಯಪನನೇಕ ಭುವನೋತ್ಪತ್ತಿ ನಾಟಕಕ್ಕೆ ಸೂತ್ರಧಾರನಾದನಾತನ ಮಗನವಾರ್ಯ ವೀರ್ಯಂ ಸೂರ್ಯನಾತನಿಂದವ್ಯವಚ್ಛಿನ್ನಮಾಗಿ ಬಂದ ವಂಶಂ ಸೂರ್ಯವಂಶಮೆಂಬುದಾಯ್ತು—

ಕಂ॥ ಅತ್ರಿಯ ಪಿರಿಯ ಮಗಂ ಭುವ।
ನ ತ್ರಯ ಸಂಗೀತ ಕೀರ್ತಿ ಸೋಮಂ ಸಕಲ॥
ಕ್ಷತ್ರ[4]ಕುಲ ಪೂಜ್ಯನಮಳ ಚ।
ರಿತ್ರಂ ಪ್ರೋದ್ದಾಮ ಸೋಮ ವಂಶ ಲಲಾಮಂ ॥೬೧॥

ಆ ಸೋಮ ವಂಶಜರ್ ಪಲ।
ರಾಸು[5]ಕರಂ ಬೆರಸು ನೆಗೞ್ದ ಜಸದಿಂ ಜಗಮಂ॥
ಬಾಸಣಿಸಿ ಪೋದೊಡಧಿಕ ವಿ।
ಳಾಸಂ ದೌ[6][ಷ್ಯ]ಂತಿ ಭರತನೆಂಬಂ ನೆಗೞ್ದಂ ॥೬೨॥

ಚಾರು ಚರಿತ್ರಂ ಭರತನ।
ಪಾರ ಗುಣಂ ತನ್ನ ಪೆಸರೊಳಮರ್ದಿಸೆಯೆ ಯಶೋ॥
ಭಾರಂ ಕುಲಮುಂ ಕಥೆಯುಂ।
ಭಾರತಮೆನೆ ನೆಗೞ್ದನಂತುನೆಗ[7] [ೞ್ವ]ದು ಭೂಪರ್ ॥೬೩॥

ಕಂ॥ ಭರತನನೇಕಾಧ್ವರ ಭರ।
ನಿರತಂ ಜಸಮುಱಿಯೆ ಕಱಿಯೆ ಭೂಪರ್ ಪಲರಾ॥
ದರಿಸಿದ ಧರಣೀ ಭರಮಂ।
ಧರಿಯಿಸಿದಂ ಪ್ರತಿಮನೆಂಬನಪ್ರತಿಮ ಬಲಂ ॥೬೪॥

ಅಂತಾ ಪ್ರತಿಮಂಗೆ ಸುತರ್।
ಶಂತನು ಬಾಹ್ಲಿಕ ವಿನೂತ ದೇವಾಪಿಗ[8]ಳೋ॥
ರಂತೆ ಧರೆ ಪೊಗೞೆ ನೆಗೞ್ದರ।
ನಂತ ಬಳರ್ ಪರ ಬಳ ಪ್ರಭೇದನ ಶೌರ್ಯರ್ ॥೬೫॥

---

[1] ದಾ (ಕ. ಖ.); [2] ಕಮಳಂ (ಕ. ಖ. ಘ.); [3] ವಿಮ।ಳ (ಖ. ಘ.); [4] ಮಣಿ (ಕ. ಖ.); [5] ತ (ಕ. ಖ.); [6] ಸ್ಯ (ಕ. ಖ. ಘ.); [7] ೞ್ದರ್ (ಕ.), ೞ್ವುದು (ಖ.), ೞ್ವದ (ಘ.); [8] ಳೊ॥ ಲ್ವಂತೆ (ಕ.).

ವ॥ ಅವರೊಳಗೆ ದೇವಾಪಿ ನವ ಯೌವನ ಪ್ರಾರಂಭದೊಳ್ ತಪಶ್ಚರಣ ಪರಾಯಣನಾ[1]ದಂ ಪ್ರತಿಮನುಂ ಪ್ರತಾಪ ಪ್ರಸರ ಪ್ರಕಟ ಪಟುವಾಗಿ ಪಲವು ಕಾಲಮರಸುಗೆಯ್ದು ಸಂಸಾ[2][ರಾ]ಸಾರತೆಗೆ ಪೇಸಿ ತಪೋವನಕ್ಕಭಿಮುಖನಾಗಲ್ಬಗೆದು—

ಕಂ॥ ಕಂತು [3]ಶರ ಭವ[ನ]ನಾ ಪ್ರಿಯ।
ಕಾಂತಾ ಭ್ರೂ ವಿಭ್ರಮ ಗ್ರಹಾಗ್ರಹ ವಶದಿಂ॥
ಭ್ರಾಂತಿಸದುಪಶಾಂತ ಮನಂ।
ಶಂತನುಗಿತ್ತಂ ಸಮಸ್ತ ರಾಜ್ಯ ಶ್ರೀಯಂ ॥ ೬೬ ॥

ಶಂತನುಗಮಮಳ ಗಂಗಾ।
ಕಾಂತೆಗಮೆಂಟನೆಯ ವಸು ವಸಿಷ್ಠನ ಶಾಪ॥
ಭ್ರಾಂತಿಯೊಳ್ ಬಂದು ನಿರ್ಜಿತ।
ಕಂತುವೆನಲ್ಕಂತು ಪುಟ್ಟಿದಂ ಗಾಂಗೇಯಂ ॥ ೬೭ ॥

ವ॥ ಅಂತು ಭುವನ ಭವನಕ್ಕೆಲ್ಲಮಾಯುಮುಮಳವುಮಱಿವುಮಣ್ಮುಂ ಪುಟ್ಟುವಂತೆ ಪುಟ್ಟಿ ನವ ಯೌವನಂ ನೆಱೆಯೆ ನೆಱೆಯೆ—

ಶಾ॥ ಸಾಲ ಪ್ರಾಂಶು ವಿಶಾಲ ಲೋಲ ನಯನಂ ಪ್ರೋದ್ಯದ್ವೃಷ ಸ್ಕಂಧನು।
ನ್ಮೀಲತ್ಪಂಕಜ ವಕ್ತ್ರನಾಯತ ಸಮುಗ್ರೋರ ಸ್ಥಳಂ ದೀರ್ಘ ಬಾ॥
ಹಾಲಂಬಂ ಭುಜ [4]ವೀರ್ಯ ವಿಕ್ರಮಯುತಂ [5]ಗಂಗಾತ್ಮಜನ್ಮಂ ಜಯ।
ಶ್ರೀ ಲೋಲಂ ಜಮದಗ್ನಿ ರಾಮ[6]ಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ ॥ ೬೮ ॥

ವ॥ ಅಂತು ಕಲ್ತು ಮುನ್ನಮೆ ಚಾಪ ವಿದ್ಯೆಯೊಳಾರಿಂ[7]ದಮಿಾತನೆ ಭಾರ್ಗವನೆನಿಸಿದ ಭಾರ್ಗವಂಗೆ ತಾನೆ ಭಾರ್ಗವನಾಗಿ ಯುವರಾಜ ಕಂಠಿಕಾ ಪರಿಕಲಿತ ಕಂಠ ಲುಂಠನುಮಾಗಿ ಪ್ರಮಾಣ ನಿಜ ಭುಜ ದಂಡ ದಂಡಿತಾರಾತಿ ಮಂಡಲನುಮಾಗಿ ಗಾಂಗೇಯಂ ಸುಖದೊಳರಸುಗೆಯ್ಯುತ್ತಿರ್ಪನ್ನೆಗಮಿತ್ತ ಗಂಗಾ ದೇಶದೊಳುಪರಿಚರ ವಸುವೆಂಬರಸಂ ಮುಕ್ತಾವತಿಯೆಂಬ ತೊಱೆಯೊಳ್ ವಿಶ್ರಮಿಸಿರ್ದೊಡೆ ಕೋಳಾಹಳಮೆಂಬ ಪರ್ವತಕ್ಕೆ ಪುಟ್ಟಿದ ಗಿರಿಜೆಯೆಂಬ ಕನ್ನೆಯನಾತಂ ಕಂಡು ಕಣ್ಬೇಟಂಗೊಂಡು ಮದುವೆಯಂ ನಿಂದೊಂದು ದಿವಸಮಿಂದ್ರನೋಲಗಕ್ಕೆ ಪೋಗಿ ಋತು ಕಾಲ ಪ್ರಾಪ್ತೆಯಾಗಿರ್ದ ನಲ್ಲಳಲ್ಲಿಗೆ ಬರಲ್ ಪಡೆಯದಾಕೆಯಂ ನೆನೆದಿಂದ್ರಿಯ ಕ್ಷರಣೆಯಾದೊಡದನೊಂದು ಕದಳೀ ಪತ್ರದೊಳ್ ಪುದಿದು ತನ್ನ ನಡಪಿದ ಗಿಳಿಯ ಕೈಯೊಳೋಪಳಲ್ಲಿಗಟ್ಟಿದೊಡದಂ ತರ್ಪರಗಿಳಿಯನೊಂದು ಗಿಡುಗ

---

[1] ದನಪ್ರತಿಮನುಂ (ಕ.); [2] ರ (ಕ. ಖ. ಘ.); [3] ಶರನಭವನ (ಕ. ಖ.), ಸರಭವನಾ (ಘ.); [4] ಶೌ (ಘ.); [5] ಗಾಂಗೇಯನಿರ್ದಂತೆ ಭೂ। ಪಾಲಕರ್ಗಳ್ (ಕ. ಖ. ಘ.); [6] ನೆಡೆ (ಕ.); [7] ದಂ ತಾನೆ (ಕ. ಖ. ಘ.).

ನೆಡೆಗೊಂಡು ಜಗುನೆಯಂ ಪಾಯ್ವಾಗಳುಗಿಬಗಿ ಮಾಡಿದಾಗಳದಱ ಕೈಯಿಂ ಬರ್ದುಂಕಿ ತೊಱೆಯೊಳಗೆ ಬಿಟ್ಟೊಡದನೊಂದು ಬಾಳೆಮೀನ್ನುಂಗಿ ಗರ್ಭಮಂ ತಾಳ್ದಿದೊಡೊಂದು ದಿವಸಮಾ ಮೀನನೊರ್ವ ಜಾಲಗಾಱಂ ಜಾಲದೊಳ್ ಪಿಡಿದಲ್ಲಿಗರಸಪ್ಪ ದಾಶನಲ್ಲಿಗುಯ್ದು ತೋಱಿದೊಡದಂ ವಿದಾರಿಸಿ ನೋೞ್ಪನ್ನೆಗಂ ಬಾಳೆಯ ಗರ್ಭದೊಳಿರ್ದ ಬಾಳೆಯುಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಂ ಮತ್ಸ್ಯಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾ ನದೀ ತೀರದೊಳಿರ್ಪನ್ನೆಗಮಲ್ಲಿಗೊರ್ವ ಬ್ರಹ್ಮರ ಮೊಮ್ಮನಪ್ಪ ವೃದ್ಧ ಪರಾಶರ ಮುನೀಂದ್ರನುತ್ತರಾ ಪಥಕ್ಕೆ ಪೋಗುತ್ತುಂ ಬಂದು ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯುಂ ಕಂಡೆಮ್ಮನೀ ತೊಱೆಯಂ ಪಾಯಿಸೆಂಬುದುಂ ಸಾಸಿರ್ವರೇಱಿದೊಡಲ್ಲದೀ ಯೋಡಂ ನಡೆಯದೆಂಬುದುಮಾ ಮುನಿಬರ ಬಿಣ್ಪುಮಪ್ಪೆಮೇಱಿಸೆಂದೊಡಂತೆ ಗೆಯ್ವೆನೆಂದೋಡಮೇಱಿಸಿ ನಡೆಯಿಸುವಲ್ಲಿ ದಿವ್ಯ ಕನ್ಯೆಯನಟ್ಟಿಕಿರ್ತು ನೋಡಿ—

ಮ॥ ಮನದೊಳ್ ಸೋಲ್ತು ಮುನೀಂದ್ರ[1]ನಾಕೆಯೊಡಲೀ ದುರ್ಗಂಧ
[2]ಮೋಪಂತೆ ಯೋ।
ಜನ ಗಂಧಿತ್ವಮನಿತ್ತು ಕಾಂಡ ಪಟದಂತಿರ್ಪನ್ನೆಗಂ ಮಾಡಿ ಮಂ॥
ಜನಲಂಪಟ್ಟಿಱನೀಯೆ ಕೂಡುವೆಡೆಯೊಳ್ ಜ್ಞಾನ ಸ್ವರೂಪಂ ಮಹಾ।
ಮುನಿಪಂ ಪುಟ್ಟಿದನಂತು ದಿವ್ಯಮುನಿಗಳ್ಗೇಗೆಯ್ದೊಡಂ ತೀರದೇ॥ ೬೯ ॥

ವ॥ ಅಂತು ನೀಲಾಂಬುದ ಶ್ಯಾಮನುಂ ಕನಕ ಪಿಂಗಳ ಜಟಾಬಂಧ ಕಳಾಪನುಂ ದಂಡ [3][ಕಪಾಳ] ಹಸ್ತನುಂ ಕೃಷ್ಣ ಮೃಗ[4][ತ್ವಕ್ಪ]ರಿಧಾನನುಮಾಗಿ ವ್ಯಾಸಭಟ್ಟಾರಕಂ ಪುಟ್ಟುವುದುಮಾತನನೊಡಗೊಂಡು ಸತ್ಯವತಿಗೆ ಪುನಃ ಕನ್ಯಾಭಾವಮಂ ದಯೆಗೆಯ್ದು ಪರಾಶರಂ ಪೋದನಿತ್ತಲ್—

ಮ॥ ಮೃಗಯಾ ವ್ಯಾಜದಿನೊರ್ವ ಶಂತನು ತೊೞಲ್ತರ್ಪಂ ಪಳಂಚ[5]ಲ್ಕೆ ತ।
ನ್ಮೃಗ ಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ [6]ಸೋಲ್ತು
ಕಂ[7]ಡೊಲ್ದು ನ॥
ಲ್ಮಿಗೆ ದಿಬ್ಯಂಬಿಡಿವಂತೆವೋಲ್ ಪಿಡಿದು ನೀಂ ಬಾ ಪೋಪಮೆಂದಂಗೆ ಮೆ।
ಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ॥ ೭೦ ॥

---

[1] ನೀ (ಕ. ಖ.); [2] ಮಾದತ್ತು (ಕ. ಖ); [3] ಕಳಾಪ (ಕ.), ಕಳಾ (ಖ. ಘ.); [4] ಚರ್ಮ ಪಿಧಾನ (ಕ.), ತ್ಪರಿದಾಮ (ಘ.); [5] ಲ್ವಿನಂ। ಮೃ (ಕ.), ಲ್ವಿತಂ। ಮೃ (ಘ.); [6] ಮನಂ ಸೋಲ್ತು ಕಂ। (ಕ. ಖ. ಘ.); [7] ಡೊಗೆದಿಭ್ಯಂಬಿಡಿ (ಕ.), ಡೊಲೆದುಂ। ನಲುಮಿಗೆ ದಿಭ್ಯಂಬಿಡಿ (ಖ.).

ವ॥ ಎಂಬುದುಂ ಶಂತನು ಪೊೞಲ್ಗೆ ಮಗುೞ್ದು ವಂದವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳನಟ್ಟಿದೊಡೆ ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮ ಕ್ರಮಾರ್ಹನುಮಿರ್ದಂತೆನ್ನ ಮಗಳಂ [1]ಕುಡೆವೆಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯಕ್ಕೊಡೆಯನುಂ ಪಿರಿಯ ಮಗನುಂ ಕ್ರಮಕ್ಕರ್ಹನು ಮಪ್ಪೊಡೆ ಕುಡುವೆಮೆನೆ ತದ್ವೃತ್ತಾಂತಮುಂ ಮಂತ್ರಿಗಳಿಂ ಶಂತನು ಕೇಳ್ದು—

ಮ॥ ಕ್ರಮಮುಂ ವಿಕ್ರಮದಿಂದೆ ತಾಳ್ದುವ ಮಗಂ ಗಾಂಗೇಯನಿರ್ದಂತೆ ನೋ।
ಡ ಮರುಳ್ ಶಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜ॥
ಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂಬೊಂದಪಖ್ಯಾತಿ ಲೋ।
ಕಮನಾವರ್ತಿಸೆ ಬೞೆದ್ದೊಡೆನ್ನ ಕುಲಮುಂ ತ[2][ಕ್ಕೊ]ರ್ಮೆಯುಂ
ಮಾಸದೇ ॥ ೨೧ ॥

ವ॥ ಎಂದು ತನ್ನ ನಾ[3]ಣ್ಗಾಪನೆ ಬಗೆದತನು ಪರಿತಾಪಿತ ಶರೀರನುಮಾಗಿ ಶಂತನು ಕರಂಗೆರ್ದೆಗಿಡೆ ತದ್ವೃತ್ತಾಂತಮೆಲ್ಲಮುಂ ಗಾಂಗೇಯನಱಿದು—

ಉ॥ ಎನ್ನಯ ದೂಸಱಿಂ ನೃಪತಿ ಬೇಡಿದುದಂ ಕುಡಲೊಲ್ಲದಂಗಜೋ।
ತ್ಪನ್ನ ವಿಮೋಹದಿಂದೞಿದಪಂ ಪತಿ ಸತ್ತೊಡೆ ಸತ್ತ ಪಾಪಮೆ॥
ನ್ನನ್ನರಕಂಗಳೊಳ್ ತಡೆಯದೞ್ದುಗುಮೇವುದು ರಾಜ್ಯಲಕ್ಷ್ಮಿ ಪೋ।
ತನ್ನಯ ತಂದೆಯೆಂದುದನೆ ಕೊಟ್ಟು ವಿವಾಹಮನಿಂದೆ ಮಾಡುವೆಂ ॥ ೨೨ ॥

ವ॥ ಎಂದು ನಿಶ್ಚಯಿಸಿ ಗಾಂಗೇಯಂ ದಾಶರಾಜನಲ್ಲಿಗೆ ವಂದಾತನ ಮನದ ತೊಡರ್ಪಂ ಪಿಂಗೆ ನುಡಿದು

ಉ॥ ನೀಡಿರದೀವುದೀ ನಿಜ ತನೂಜೆಯನೀ ವಧುಗಾದ ಪುತ್ರರೊಳ್।
ಕೂಡುಗೆ ರಾಜ್ಯಲಕ್ಷ್ಮಿ ಮೊಱೆಯಲ್ತೆನಗಂತದು ಪೆಂಡಿರೆಂಬರೊಳ್॥
ಕೂಡುವನಲ್ಲೆನಿಂದು ಮೊದಲಾಗಿರೆ ನಿಕ್ಕುವಮೆಂದು ರಾಗದಿಂ।
ಕೂಡಿದನುಯ್ದು ಸತ್ಯವತಿಯಂ [4]ಸತಿಯಂ ಪತಿಯೊಳ್ ನದೀಸುತಂ॥ ೨೩ ॥

ವ॥ ಅಂತು ಶಂತನುವುಂ ಸತ್ಯವತಿಯುಮನ್ಯೋ[5]ನ್ಯಾಸಕ್ತ ಚಿತ್ತರಾಗಿ ಕೆಲವು ಕಾಲಮಿರ್ಪನ್ನೆಗಮವರ ಬೇಟದ [6]ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರ ವೀರ್ಯರೆಂಬ ಮಕ್ಕಳ್ ಪುಟ್ಟಿ ಮಹಾಪ್ರಚಂಡರುಂ ಪ್ರತಾಪಿಗಳುಮಾಗಿ ಬಳೆಯು ತ್ತಿರ್ಪನ್ನೆಗಂ ಶಂತನು ಪರಲೋಕ ಪ್ರಾಪ್ತನಾಮೊಡೆ ಗಾಂಗೇಯಂ ತದುಚಿತ

---

[1] ಕುಡುವೊಡೆಮ್ಮ (ಕ.); [2] ತನ್ನ (ಕ. ಖ. ಘ.); [3] ಣೆ (ಗ. ಖ.); [4] ನಿಜಭೂಪತಿಯೊಳ್ (ಕ.); [5] ಸ್ಯ ಚಿತ್ತರಾಗಿ (ಕ.ಖ.); [6] ಕವಲ್ಗ (ಕ.).

ಪರಲೋಕ ಕ್ರಿಯೆಗಳಂ ಮಾಡಿ ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದ ಕ್ಕಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ ರಾಜ್ಯಂ [1]ಗೆಯಿಸುತ್ತು ಮಿರ್ಪನ್ನೆಗಮೊರ್ವ ಗಂಧರ್ವನೊಳೆ ಚಿತ್ರಾಂಗದಂ ದ್ವಂದ್ವ ಯುದ್ಧಮಂ ಪೊಣರ್ಚಿ ಕುರುಕ್ಷೇತ್ರಮುಂ ಕಳಂಬೇಟ್ಟು ಕಾದಿ ಸತ್ತೊಡೆ ವಿಚಿತ್ರವೀರ್ಯನಂ ಗಾಂಗೇಯಂ ಧರಾಭಾರ ಧುರಂಧರನಂ ಮಾಡಿ—

ಮ॥ ಸಕಳ ಕ್ಷತ್ರಿಯ ಮೋಹದಿಂ ನಿಜ ಭುಜ ಪ್ರಾರಂಭದಿಂ ಪೋಗಿ ತಾ।
[2]ಗಿ ಕೆಲರ್ ನೊಂದೊಡೆ [3]ಕಾದಿ ರಾಜಸುತರೊಳ್ ತನ್ನಂಕದೊಂದುಗ್ರ ಸಾ॥
ಯಕದಿಂ ನಾಯಕರಂ ಪಡಲ್ವಡಿಸುತುಂ ತಾಂ ತಂದನಂದಂಬೆಯುಂ।
ಬಿಕೆಯುಂಬಾಲೆಯರೆಂಬ ಬಾಲೆಯ[4][ರನೇಂ] ಭೀಷ್ಮಂ ಯಶೋಭಾ[5]ಗಿಯೋ ॥ ೭೪ ॥

ವ॥ ಅಂತು ತಂದು ತನ್ನ ತಮ್ಮಂ ವಿಚಿತ್ರವೀರ್ಯಂಗಾ ಮೂವರ್ ಕನ್ನೆಯರಂ ಪಾಣಿಗ್ರಹಣಂ ಗೆಯ್ವಾಗಳೆಲ್ಲರಿಂ ಪಿರಿಯಾಕೆ ನಿನ್ನನಲ್ಲದೆ ಪೆಱರನೊಲ್ಲೆ ನೆಂದಿರ್ದೊಡೆ ಮತ್ತಿನಿರ್ವರುಮಂ ಮದುವೆಯುಂ ಮಾಡಿ ಗಾಂಗೇಯನಂಬೆಯ ನಿಂತೆಂದಂ—

ಉ॥ ಅತ್ತ ಸುರೇಶ್ವರಾವಸ[6]ಥಮಿತ್ತ ಮಹೀತಳಮುತ್ತ ಪನ್ನಗೋ।
ದಾತ್ತ ಸಮಸ್ತ ಲೋಕಮುಱ[7]ದಂತಿರೆ ಪೂಣ್ದೆನಗಾಗದಂಗಜೋ॥
ತ್ಪತ್ತಿ ಸುಖಕ್ಕೆ [8]ಸೋಲಲಱಗುಂ ಪುರುಷವ್ರತಮಾಗಳಬ್ಬೆಯೆಂ।
[9]ದತ್ತಿಗೆಯೆಂಬ ಮಾತನೆ[10]ನಗೇನೆನಲಕ್ಕುಮೊ ಪಂಕಜಾನನೇ ॥ ೭೫ ॥

ವ॥ ಎಂದು ನುಡಿದ ಗಾಂಗೇಯನ ನುಡಿಯೊಳವಸರಮುಂ ಪಸರಮುಂ ಪಡೆಯದೆ ತನಗೆ ಕಿಱಿಯಂದುಂಗುರವಿಟ್ಟ [11]ಸಾಲ್ವಲನೆಂಬರಸನಲ್ಲಿಗೆ ಪೋಗಿ ನೀನೆನ್ನಂ ಕೈಕೊಳವೇಟ್ಕುಮೆಂದೊಡಾತನಿಂತೆಂದಂ—

ಕಂ॥ ಬಂಡಣದೊಳೆನ್ನ ನೋಡಿಸಿ।
ಕೊಂಡುಯ್ದಂ ನಿನ್ನನಾ ಸರಿತ್ಸುತನಾನುಂ॥
ಪೆಂಡತಿಯೆನಾದೆನದಱಂ।
ಪೆಂಡಿರ್ ಪೆಂಡಿರೊಳದೆಂತು ಬೆರಸುವರಬಲೇ ॥ ೭೬ ॥

---

1. ಗೆಯ್ವುತಿಪ್ಪ (ಖ. ಘ.); 2. ನೆ (ಕ.); 3. ಕಾಶಿ ರಾಜಪುರದೊಳ್ (ಕ.), ಕಾದಿ ರಾಜಪುರದೊಳ್ (ಖ.); 4. ರುಮಂ (ಕ. ಖ. ಘ.); 5. ಗದೊಳ್ (ಕ. ಖ.); 6. ಧ (ಕ.), ತ (ಖ.); 7. ವಂ (ಕ. ಖ.); 8. ಸಾರ (ಕ.), ಸಾಲ (ಖ.); 9. ಬ (ಕ.); 10. ಲಗೇ ಎನ (ಕ.); 11. ಸಾಲ್ವನೆಂ (ಕ.).

ವ|| ಎಂದು ಸಾಲ್ವಲಂ ತನ್ನ ಪರಿಭವದೊಳಾದ ಸಿಗ್ಗಂ ಸಾಲ್ವಿನಮುಂಟು ಮಾಡಿದೊಡಾತನ ಮನಮನೊಡಂಬಡಿಸಲಾಱದೆ ಪರಶುರಾಮನಲ್ಲಿಗೆ ಪೋಗಿ ಭೀಷ್ಮನೆನ್ನ ಸ್ವಯಂವರದೊಳ್ ನೆರೆದರಸುಮಕ್ಕಳೆಲ್ಲರುಮನೋಡಿಸಿ ಕೊಂಡು ಬಂದೆನ್ನ[ಂ] ಮದುವೆಯಂ [1]ನಿಲಲೊಲ್ಲ[2][ದ]ಟ್ಟೆ ಕಳೆದೊಡೆನ್ನ ದಿವಸಮುಂ ಜವ್ವನಮುಮಡವಿಯೊಳಗೆ ಪೂತ ಪೂವಿನಂತೆ ಕಿಡಲೀಯದಾತನನೆನ್ನಂ ಪಾಣಿ ಗ್ರಹಣಂ ಗೆಯ್ವಂತು ಮಾಡು ಮಾಡಲಾಱದೊಡೆ ಕಿಚ್ಚಂ ದಯೆಗೆಯ್ವುದೆಂದಂಬೆ ಕಣ್ಣ ನೀರಂ ತುಂಬೆ—

ಮ|| ನಯಮಂ[3]ನಂಬುವೊಡೆನ್ನ ಪೇೞ್ವ ಸತಿಯಂ ಕೈಕೊಂಡನಂ[4]ತಲ್ಲದು।
ರ್ನಯಮಂ ನಚ್ಚುವೊಡೆನ್ನನುಗ್ರರಣದೊಳ್ ಮೇಣ್ ವಿಾಱಿ ಮಾರ್ಕೊಂಡನಾ||
ರಯೆ ಕಜ್ಜಂ ಪೆಱತಿಲ್ಲ ಶಂತನುಸುತಂಗೆನ್ನಂ ಕರಂ ನಂಬಿದಂ।
ಬೆಯೊಳೆನ್ನಂಬೆ[5][ವ]ಲಂ ವಿವಾಹ ವಿಧಿಯಂ ಮಾೞ್ಪಿಂ ಪೆಱರ್ ಮಾೞ್ಪರೇ ||೭೭||

ವ|| ಎಂದು ನಾಗಪುರಕ್ಕೆ ವರ್ಪ ಪರಶುರಾಮನ ಬರವಂ ಗಾಂಗೇಯಂ ಕೇಳ್ದಿದಿರ್ವಂದು ಕನಕ ರಜತ ಪಾತ್ರಂಗಳೊಳರ್ಘ್ಯಮಂ ಕೊಟ್ಟು ಪೊಡಮಟ್ಟು—

ಮ|| [6]ಬೆಸನೇನೆಂದೊಡೆ ಪೇೞ್ವೆನೆನ್ನ ಬೆಸನಂ ಕೈಕೊಳ್ವುದೀ ಕನ್ನೆಯಂ।
ಪಸುರ್ವಂದರ್ ಪಸೆಯೆಂಬಿವಂ ಸಮೆದು ನೀಂ ಕೈಕೊಳ್ ಕೊಳಲ್ಕಾಗದೆಂ||
ಬೆಸಕಂ ಚಿತ್ತದೊಳು[7]ಳ್ಳೊಡೀಗಳಿವರೆಮ್ಮಾಚಾರ್ಯರೆಂ[8]ದೋವದೇ।
ರ್ವೆಸನಂ ಮಾಣದೆ ಕೈದುಗೊಳ್ಳಿರಡಱಿಂ ಮೆಚ್ಚಿತ್ತೆನೇನೆಂದಪಯ್ ||೭೮||

ವ|| ಎಂದು ನುಡಿದ ಪರಶುರಾಮನ ನುಡಿಯಂ ಗಾಂಗೇಯಂ ಕೇಳ್ದಿನಗೆ ವೀರಶ್ರೀಯುಂ ಕೀರ್ತಿಶ್ರೀಯುಮಲ್ಲದುೞಿದ ಪೆಂಡಿರ್ ಮೊಱೆಯಲ್ಲ ನೀವಿದ [9]ನೇಕಾಗ್ರಹಂ ಗೆಯ್ವಿರೆಂದೊಡೆಂತುಮೆಮ್ಮೊಳ್ ಕಾದಲ್ವೇೞ್ಪುದೆಂದು—

ಮ|| [10]ಕೆಳರ್ದಂದುಗ್ರ ರಣಾ[11]ಗ್ರಹ ಪ್ರಣಯದಿಂದಾಗಳ್ ಕುರುಃಕ್ಷೇತ್ರಮಂ।
ಕಳವೇೞ್ದಿರ್ವರುಮೈಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರ ಸಂ||
ಕುಳದಿಂದೊರ್ವರನೊರ್ವರೆಚ್ಚು ನಿಜ ಪೀಠಾಂಭೋಜದಿಂ ಬ್ರಹ್ಮನು।
ಚ್ಚಳಿಪನ್ನಂ ಪಿರಿದೊಂದು ಸಂಕಟಮನೀ ತ್ರೈಲೋಕ್ಯದೊಳ್ ಮಾಡಿದರ್ ||೭೯||

---

1. ನಿಲ್ಲದೊಡೆನ್ನ ದಿವಸ (ಕ. ಖ.); 2. ದೊ (ಘ.); 3. ಪೇೞು (ಕ. ಖ. ಘ.); 4. ತ್ರೊಪ್ಪಿ (ಕ.), ತಟ್ಟೆ (ಖ.); 5. ವೊ (ಕ. ಖ. ಘ.); 6. ಬೆಸಸೆನ್ನಂ (ಕ.), ಬೆಸಸೇನೆಂ (ಖ.); 7. ಳ್ಳುದೆಂದೊಡಿವ (ಕ.), ಳ್ಳಡಿವ (ಖ.); 8. ದೋವ್ವುರ್ದುಂ। ಬೆ (ಕ.), ದೊವ್ವರ್ದುಂ। ಬೆ (ಖ.); 9. ಕೇ (ಕ.); 10. ತ (ಕ. ಖ.); 11. ಂಗಣ (ಕ. ಖ.).

ಶಿಖರಿಣಿ॥ ಅತರ್ಕ್ಯಂ ವಿಕ್ರಾಂತಂ ಭುಜಬಲಮಸಾಮಾನ್ಯಮಧಿಕಂ।
ಪ್ರತಾಪಂ ಪೋಗೀತಂಗೆ[1]ಣೆಯೆ ದಿವಿಜರ್ ವಾಯುಪಥದೊಳ್॥
ಶಿತಾಸ್ತ್ರಂಗಳ್ [2]ಪೊಂ[ಕ]ಂಗಿಡಿಸೆ ಸುಗಿದಂ ಭಾರ್ಗವನಿದೇಂ।
ಪ್ರತಿಜ್ಞಾಗಾಂಗೇಯಂಗದಿರದಿದಿ[3]ರ್ನಿಲ್ವನ್ನರೊಳರೇ ॥೬೦॥

ವ॥ ಅಂತು ಗಾಂಗೇಯನೊಳ್ ಪರಶುರಾಮಂ ಕಾದಿ ಬಸವೞಿದುಸಿರಲ ಪ್ಪೊಡಮಾಱದೆ ಮೂರ್ಛೆವೋಗಿರ್ದನಂ ಕಂಡಂಬೆಯೆಂಬ [4]ದಂಡುರುಂಬೆ ನಿನ[5]ಗೆ ವಧಾರ್ಥಮಾಗಿ ಪುಟ್ಟುವೆನಕ್ಕೆಂದು [6]ಕೋಪಾಗ್ನಿಯಿಂದಮಗ್ನಿ ಶರೀರೆಯಾಗಿ ದ್ರುಪದನ ಮಹಾದೇವಿಗೆ ಮಗನಾಗಿ ಪುಟ್ಟಿ ಕಾರಣಾಂತರದೊಳ್ ಶಿಖಂಡಿಯಾಗಿ ರ್ದಳಿತ್ತ ಭೀಷ್ಮರ ಬೆಂಬಲದೊಳ್ ವಿಚಿತ್ರವೀರ್ಯನುಮವಾರ್ಯವೀರ್ಯನು ಮಾಗಿ ಕೆಲವು ಕಾಲಂ ರಾಜ್ಯಲಕ್ಷ್ಮಿಯಂ ತಾಳ್ದಿ ರಾ[7][ಜಯಕ್ಷ್ಮ] ತಪ್ತ ಶರೀರ ನಾತ್ಮಜ ವಿಗತಜೀವಿಯಾಗಿ ಪರಲೋಕಪ್ರಾಪ್ತನಾದೊಡೆ ಗಾಂಗೇಯನುಂ ಸತ್ಯವತಿಯುಮತ್ಯಂತ ಶೋಕಾನಲ ದಹ್ಯಮಾನ ಮಾನಸರ್ಕಳಾಗಿ ಆತಂಗೆ ಪರಲೋಕ ಕ್ರಿಯೆಗಳಂ ಮಾಡಿ ರಾಜ್ಯಂ ನಷ್ಟ [8]ರಾ[ಜ]ಮಾದುದರ್ಕೆ [9]ಮಮ್ಮಲ ಮಱುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್—

ಮ॥ ಮಗನೆಂಬಂತು ಧರಿತ್ರಿ ನಿನ್ನನುಜರಂ ಕೈಕೊಂಡು ಮುಂ ಪೂಣ್ದ ನ।
ನ್ನಿಗೆ ಬನ್ನಂ ಬರಲೀಯದಾರ್ತೆಸಗಿದೀ ವಿಖ್ಯಾತಿಯುಂ ಕೀರ್ತಿಯುಂ॥
ಮುಗಿಲಂ ಮುಟ್ಟಿದುದಲ್ತೆ ನಮ್ಮ ಕುಲದೊಳ್ ಮಕ್ಕಳ್ಪೆಱರ್ ನೀನೆ ಜ।
ಟ್ಟಿಗನೈ ಮುನ್ನಿನೊರಂಟು ವೇಡ ಮಗ[10]ನೇ ಕೈಕೊಳ್ ಧರಾಭಾರಮಂ ॥೬೧॥

ವ॥ ಎಂದು ನಿನ್ನನಾನಿನಿತಂ ಕೈಯೊಡ್ಡಿ ಬೇಡಿದೆನೆಂದ ಸತ್ಯವತಿಗಮರಾಪಗಾ ನಂದನನಿಂತೆಂದಂ—

ಕಂ॥ ಕಿಡುಗುಮೆ ರಾಜ್ಯಂ ರಾಜ್ಯದ।
ತೊಡರ್ಪದೇವಾೞ್ತೆ ಬಾೞ್ತೆ ನನ್ನಿಯ [11]ನುಡಿಯಂ॥
ಕಿಡೆನೆಗೞ್ ನಾನುಮೆರಡಂ।
ನುಡಿದೊಡೆ ಹರಿ ಹರ ಹಿರಣ್ಯಗರ್ಭರ್ ನಗರೇ ॥೬೨॥

1. ದೇವಗಣಂ (ಖ. ಘ.); 2. ಪೋಗಂಕಿಡಿಸೆ (ಕ.), ಪೊಂಖಂ ಗಿಡಿಸೆ (ಘ.); 3. ರೊಳ್ ನಿಲ್ವ (ಕ.); 4. ದುಂ (ಘ.); 5. ಗವದಾರ್ತೆಯೆನಾಗಿ (ಖ. ಘ.); 6. ಶೋಕಾಗ್ನಿ (ಕ.), ಸೋಲಾಗ್ನಿ (ಖ.); 7. ಜ್ಯ ಲಕ್ಷ್ಮೀ (ಕ. ಖ. ಘ.); 8. ಜ್ಯ (ಘ.); 9. ಮಲುಮಲ (ಖ. ಘ.); 10. ನೈ (ಕ. ಖ.); 11. ಕು (ಕ. ಖ.).

ಚಂ॥ ಹಿಮಕರನಾತ್ಮ ಶೀತರುಚಿಯಂ ದಿನನಾಯಕನುಷ್ಣ ದೀಧಿತಿ ।
ಕ್ರಮಮು[1]ನಗಾಧ ವಾರಿಧಿ[2][ಯೆ] ಗುಣ್ಪನಿಳಾವಧು ತನ್ನ ತಿಣ್ಪುಸು ॥
ತ್ತಮ ಕುಲಶೈಲಮುನ್ನತಿಯನೇೞಿದವಾಗೆ ಬಿಸುಟಿ[3]ಪ್ಪೊಡಂ ಬಿಸು ।
[3][ಟ್ಟಿಮ] ಬಿಸುಡೆಂ ಮದೀಯ ಪುರುಷವ್ರತಮೊಂದುಮನೀಗಳಂಬಿಕೇ
॥ ೮೩ ॥

ವ॥ ಎಂದು ತನ್ನ ನುಡಿದ ಪ್ರತಿಜ್ಞೆಯನೇಗೆಯ್ದುಂ ತಪ್ಪಿದನಿಲ್ಲ—

ಕಂ॥ ರಂಗತ್ತರಂಗ ವಾರ್ಧಿ ಚ ।
ಯಂಗ[4]ಳ್ ತಂತಮ್ಮ ಮೇರೆಯಂ ದಾಂಟುವೊಡಂ ॥
ಗಾಂಗೇಯನುಂ ಪ್ರತಿಜ್ಞಾ ।
ಗಾಂಗೇಯನುಮೊರ್ಮೆ ನುಡಿದುದಂ ತಪ್ಪುವರೇ ॥ ೮೪ ॥

ವ॥ ಅಂತಚಲಿತ ಪ್ರತಿಜ್ಞಾರೂಢನಾದ ಗಾಂಗೇಯನನೇಗೆಯ್ದುಮೊಡಂಬಡಿಸಲಾಱದೆ ಸತ್ಯವತಿ ತಾನುಮಾತನುಮಾಳೋಚಿಸಿ ನಿಶ್ಚಿತ ಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು ಬರಿಸಿದೊಡೆ ವ್ಯಾಸಮುನೀಂದ್ರನೇಗೆಯ್ವುದೇನಂ ತೀರ್ಚುವುದೆಂದೊಡೆ ಸತ್ಯವತಿಯಿಂತೆಂದಳ್ ಹಿರಣ್ಯಗರ್ಭ ಬ್ರಹ್ಮರಿಂ ತಗುಳ್ದ ವ್ಯವಚ್ಛಿನ್ನಮಾಗಿ ಬಂದ ಸೋಮವಂಶಮಾಗಳೆಮ್ಮ ಕುಲ ಸಂತತಿಗ[5]ಮಾರುಮಿಲ್ಲದೆಡೆವಱದು ಕಿಡುವಂತಾಗಿರ್ದುದದುಕಾರಣದಿಂ ನಿಮ್ಮ ತಮ್ಮಂ ವಿಚಿತ್ರವೀರ್ಯನ ಕ್ಷೇತ್ರದೊಳಂಬಿಕೆಗಮಂಬಾಲೆಗಂ ಪುತ್ರರಪ್ಪಂತು ವರ ಪ್ರಸಾದಮಂ ದಯೆಗೆಯ್ವುದೆನೆ ಅಂತೆ ಗೆಯ್ವೆನೆಂದು—

ಚಂ॥ ತ್ರಿದಶ ನರಾಸುರೋರಗ ಗಣ ಪ್ರಭು ನಿಶ್ಚಿತ ತತ್ತ್ವಯೋಗಿ ಯೋ ।
ಗದ ಬಲಮುಣ್ಮೆ ಪೊಣ್ಮೆ ನಿಲೆ ಪುತ್ರ ವರಾರ್ಥಿಗಳಾಗಿ ತನ್ನ ಕ ॥
ಟ್ಟೆದಿರೊಳೆ ನಿಂದರಂ ನಯದೆ ನೋಡೆ ಮುನೀಂದ್ರನ ದಿವ್ಯ ದೃಷ್ಟಿ ಮಂ ।
ತ್ರದೊಳೆ ಪೊದಳ್ದುದಾ ಸತಿಯರಿರ್ವರೊಳಂ ನವ ಗರ್ಭ ವಿಭ್ರಮಂ ॥ ೮೫ ॥

ವ॥ ಅಂತು ದಿವ್ಯ ಸಂಯೋಗದೊಳಿರ್ವರುಂ ಗರ್ಭಮಂ ತಾಳ್ದರ್ ಮತ್ತೊರ್ವ ಮಗನಂ ವರಮಂ ಬೇಡೆಂದಂಬಿಕೆಗೆ ಪೇೞ್ದೊಡಾಕೆಯುಂ ವ್ಯಾಸಭಟ್ಟಾರಕನಲ್ಲಿಗೆ ಪೋಗಲಲಸಿ ತನ್ನ [6]ಸೂಳಾಯ್ತಿಯಂ ತನ್ನವೊಲೆ ಕಯ್ಗಯ್ದು ಬರವಂ ಜೇಡಲಟ್ಟಿದೊಡಾಕೆಗೆ ವರದನಾಗಿ ವ್ಯಾಸಮುನೀಂದ್ರಂ ಸತ್ಯವತಿಗಂ ಭೀಷ್ಮಂಗಮಿಂತೆಂದನೆನ್ನ ವರ ಪ್ರಸಾದಕಾಲದೊಳೆನ್ನಂ ಕಂಡಂಬಿಕೆ ಕಣ್ಣಂ ಮುಚ್ಚಿದಳಪ್ಪುದ

---

[1]. ನನಾದಿ (ಕ.), ನೆನಾದ (ಖ.); [2]. ಯ (ಕ. ಖ. ಘ.); [3]. ಟ್ಟಿಮರಿಸಿದೇಂ (ಕ.), ಜ್ಕಿಮಾರಿ ಬಿಸುಡೆಂ (ಘ.); [4]. ಳುಮುವುತಮ್ಮ (ಕ. ಖ.); [5]. ಕಿಲ್ಲದೊಡೆ ಅಟಿಃ (ಕ.), ಕಿಲ್ಲವಡೆವರಿ (ಖ.); [6]. ಸೂಳೆಯಂ (ಕ. ಖ.).

ಅಂಬಿಕೆಗೆ ಧೃತರಾಷ್ಟ್ರನೆಂಬ ಮಗನ*ತ್ಯಂತ ಸುಂದರಾಂಗನಾಗಿಯುಂ ಜಾತ್ಯಂಧ* ನಕ್ಕುಮಂಬಾ†ಲಿ ಮದ್ರೂಪಮಂ ಕಂಡು ಮೊಗಮಂ ಪಾಂಡುರಂ ಮಾಡಿದಳಪ್ಪುದ ಱಿಂದಾಕೆಗೆ ಪಾಂಡುರೋಗ ಸಂಗತನುಮನೇಕ ಭದ್ರ ಲಕ್ಷಣ ಲಕ್ಷಿತನುಮತ್ಯಂತ ಪ್ರತಾಪನುಮಾಗಿ ಪಾಂಡುರಾಜನೆಂಬ ಮಗನಕ್ಕು†ಮಂಬಿಕೆಯ ಸೂಟಿಱಾಯ್ತೆ ಯಪ್ಪಾಕೆ ದರಹಸಿತ ವದನಾರವಿಂದೆಯಾಗಿ ಬರವಂ ಕೈಕೊಂಡಳಪ್ಪುದಱಿಂ ದಾಕೆಯ ಮಗಂ ವಿದುರನೆಂಬನನಂಗಾಕಾರನುಮಾಚಾರವಂತನುಂ ಬುದ್ಧಿವಂತನು ಮಕ್ಕುಮೆಂದು ಪೇೞ್ದು ಮುನಿಪುಂಗವಂ ಪೋದನಿತ್ತಂ—

ಪೃಥ್ವಿ॥ ವರಂಬಡೆದ ಸಂತಸಂ ಮನದೊಳಾಗಲೊಂದುತ್ತರೋ।
ತ್ತರಂ ಬಳೆವ ಮಾೞ್ಕೆಯಿಂ ಬಳೆವ ಗರ್ಭಮಂ ತಾಳ್ದಿಯಾ॥
ದರಂ ಬೆರಸು ಪೆತ್ತರಂದು ಧೃತರಾಷ್ಟ್ರ ವಿಖ್ಯಾತ ಪಾಂ।
ಡುರಾಜ ವಿದುರರ್ಕಳಂ ಕ್ರಮದೆ ಮೂವರುಂ ಮೂವರಂ ॥ ೮೬ ॥

ಕಂ॥ ಆ ವಿವಿಧ ಲಕ್ಷಣಂಗಳೊ।
ಳಾವರಿಸಿದ ಕುಲದ ಬಲದ ಚಲದಳವಿಗಳೊಳ್॥
ಮೂವರುಮನಾದಿಪುರುಷರ್।
ಮೂವರುಮೆನಲಲ್ಲ[1]ದ[ತ್ತ] ಮತ್ತೇನೆಂಬರ್ ॥ ೮೭ ॥

ವ॥ ಅಂತವರ್ಗೆ ಜಾತಕರ್ಮ ನಾಮಕರಣಾನ್ನಪ್ರಾಶನ ಚೌಲೋಪನಯನಾದಿ [2]ಷೋಡಶಕ್ರಿಯೆಗಳಂ ಗಾಂಗೇಯಂ ತಾಂ ಮುಂತಿಟ್ಟು ಮಾಡಿ ಶಸ್ತ್ರ ಶಾಸ್ತ್ರಂಗಳೊಳತಿ ಪರಿಣತರಂ ಮಾಡಿ ಮದುವೆಯುಂ ಮಾಡಲೆಂದು ಧೃತರಾಷ್ಟ್ರಂಗೆ ಗಾಂಧಾರರಾಜ ಸೌಬಲನ ಮಗಳಪ್ಪ ಗಾಂಧಾರಿಯಂ ಶಕುನಿಯೊಡವುಟ್ಟಿದಳಂ ತಂದು ಕೊಟ್ಟು—

ಕಂ॥ ಮತ್ತಿತ್ತ ನೆಗೞ್ತೆಯ ಪುರು।
ಷೋತ್ತಮನ ಪಿತಾಮಹಂಗೆ [3]ಶೂರಂಗೆ ಮಗಳ್॥
ಮತ್ತಗಜಗಮನೆ ಯದುವಂ।
ಶೋತ್ತಮೆಯೆನೆ ಕುಂತಿ ಕುಂತಿಭೋಜನ ಮನೆಯೊಳ್ ॥ ೮೮ ॥

---

[1] ದಯ್ಯ (ಕ.), ದನ್ಯ (ಖ.), ಮತ್ಯ (ಘ.); [2] ಷೋಡಶ (ಕ. ಪಾಠದಲ್ಲಿಲ್ಲ); [3] ಸುರಸತಿಗೆ (ಕ.), ಸುರಾಂಗನೆಗೆ (ಖ.).

** ಈ ನಕ್ಷತ್ರ ಚಿಹ್ನೆಗಳ ಮಧ್ಯೇ ಇರುವ ಭಾಗವು ಕ.ಖ. ಪ್ರತಿಗಳಲ್ಲಿಲ್ಲ.

†† ಈ ಗುರುತುಗಳ ಮಧ್ಯೇ ಇರುವ ಭಾಗವು ಘ. ಪಾಠದಲ್ಲಿ ಮಾತ್ರವಿದೆ; ಕ. ಪಾಠದಲ್ಲಿ "ಲಿಕೆಗೆಯೆನ್ನಂ ಕಂಡು ಮುಖಂ ಪಾಂಡುವರ್ಣಮಾದ ಕಾರಣದಿಂ ಪಾಂಡುರಾಜನೆಂಬ ಕುಮಾರನಕ್ಕು" ಎಂದು ಮಾತ್ರವಿದೆ; ಖ. ಪ್ರತಿಯಲ್ಲೂ ಸುಮಾರು ಹೀಗೆಯೇ ಇದೆ.

ಕಂ॥ ಬಳಿಯುತ್ತಿರ್ಪನ್ನೆಗಮಾ।
ನಳಿನಾಸ್ಯೆಯ ಗೆಯ್ದುದೊಂದು ಶುಶ್ರೂಷೆ ಮನಂ ॥
ಗೊಳೆ ಕೊಟ್ಟಂ [1][ದು]ರ್ವಾಸಂ।
ವಿಳಸಿತ ಮಂತ್ರಾಕ್ಷರಂಗಳಂ ದಯೆಯಿಂದಂ ॥ ೮೯ ॥

ವ॥ ಅಂತು ಕೊಟ್ಟಯ್ದು ಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೊಂದು ದಿವಸಂ ಕುಂತಿ—

ಕಂ॥ [2][ಪು]ಚ್ಚವಣಂ ನೋಡುವೆನೆ।
ನ್ನಿಚ್ಚೆಯೊಳೀ ಮುನಿಯ ವರದ ಮಹಿಮೆಯನೆನುತಂ॥
ದುಚ್ಚಸ್ತನಿ ಗಂಗೆಗೆ ಶಫ।
ರೋಚ್ಚಳಿತ ತರತ್ತರಂಗೆಗೊರ್ವಳೆ ಬಂದಳ್ ॥ ೯೦ ॥

ಬಂದು ಸುರನದಿಯ ನೀರೊಳ್।
ಮಿಂದಿನನಂ ನೋಡಿ ನಿನ್ನ ದೊರೆಯನೆ ಮಗನ॥
ಕ್ಕೆಂದಾಹ್ವಾನಂಗೆಯ್ಯಲೊ।
ಡಂ ದಲ್ ಧರೆಗಿೞಿದನಂದು ದಶಶತಕಿರಣಂ ॥ ೯೧ ॥

ವ॥ ಅಂತು ನಭೋಭಾಗದಿಂ ಭೂಮಿಭಾಗಕ್ಕಿೞಿದು ತನ್ನ ಮುಂದೆ ನಿಂದರವಿಂದಬಾಂಧವನಂ ನೋಡಿ ನೋಡಿ—

ಕಂ॥ ಕೊಡಗೂಸುತನದ ಭಯದಿಂ।
ನಡುಗುವ ಕನ್ನಿಕೆಯ ಬೆಮರ ನೀರ್ಗಳ ಪೊನಲೊ॥
ಳ್ಕುಡಿಯಲೊಡಗೂ[3][ಡೆ] ಗಂಗೆಯ।
ಮಡು ಕರೆಗಣ್ಮಿದುದು ನಾಣ ಪೆಂಪೇಂ ಪಿರಿದೋ ॥ ೯೨ ॥

ವ॥ ಆಗಳಾದಿತ್ಯನಾಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕಮುಮಂ ಕಿಡೆ ನುಡಿದಿಂತೆಂದಂ—

ಕಂ॥ ಬರಿಸಿದ ಕಾರಣಮಾವುದೊ।
ತರುಣಿ ಮುನೀಶ್ವರನ ಮಂತ್ರಮೇದೊರೆಯೆಂದಾ[ಂ]॥
ಮರುಳಿಯೆನೆಯಱಿದುಮಱಿಯದೆ।
ಬರಿಸಿದೆನಿನ್ನೇೞಿಮೆಂದೊಡಾಗದು ಪೋಗಲ್ ॥ ೯೩ ॥

---

1. ದೂ (ಕ. ಖ. ಘ.); 2. ಪಚ್ಚ (ಕ), ಪಜ್ಜು (ಖ. ಘ.); 3. ಡಿ (ಕ. ಖ. ಘ.).

ಕಂ॥ ಮುಂ ಬೇಡಿದ ವರಮುಂ ಕುಡ।
ದಂಬುಜಮುಖಿ ಪುತ್ರನೆನ್ನ ದೊರೆಯುಂ ನಿನಗ॥
ಕ್ಕೆಂಬುದುಮೊದವಿದ ಗರ್ಭದೊ
ಳಂಬುಜಮಿತ್ರನನೆ ಪೋಲ್ವ ಮಗನೊಗೆತಂದಂ ॥೯೪॥

ಒಡವುಟ್ಟಿದ ಮಣಿಕುಂಡಲ।
ಮೊಡವುಟ್ಟಿದ ಸಹಜ ಕವಚಮುಮರ್ದಿರೆ ತನ್ನೊಳ್॥
ತೊಡರ್ದಿರೆಯುಂ ಬಂದಾಕೆಯ।
ನಡುಕಮನೊಡರಿಸಿ[1]ದ[ನಾ]ಗಳಾ ಬಾ[ಲಿಕೆಯಾ] ॥೯೫॥

ವ॥ ಅಂತು ನಡನಡ ನಡುಗಿ ಜಲದೇವತೆಗಳಪ್ಪೊಡಂ ಮನಂಗಾಣ್ಬರೆಂದು ನಿಧಾನಮನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಳ್ಕೈಸಿ ತರೆ ಗಂಗಾತೀರದೊಳಿರ್ಪ ಸೂತನೆಂಬವಂ ಕಂಡು—

ಉ॥ ಬಾಳ ದಿನೇಶ ಬಿಂಬ[2]ದ ನೆಟಿಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂ।
ದ್ರಾಳಯದಿಂದಮುರ್ಚಿದ ಫಣಾಮಣಿ ಮಂಗಳ ರಶ್ಮಿಯೋ ಕರಂ॥
ಮೇಳಿಸಿದಪ್ಪುದೆನ್ನೆರ್ದೆಯನೆಂದು ಬೊದಿಲ್ಲನೆ ಪಾಯ್ದು ನೀರೊಳಾ।
ಬಾಳನನಾದಮಾದರದೆ ಕಂಡೊಸೆದಂ ನಿಧಿಗಂಡನಂತೆವೋಲ್ ॥೯೬॥

ವ॥ ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡಾಕೆ ರಾಗಿಸಿ ಸುತನ ಸೂತಕಮಂ ಕೊಂಡಾ[3][ಡೆ]—

ಕಂ॥ ಅಗುಳ್ದಿರಲಾ ಕುಱುಯೊಳ್ ತೊ।
ಟ್ಟಗೆ ನಿಧಿಗಂಡಂತೆ ವಸುಧೆಗಸದಳಮಾಯ್ತಾ॥
ಮಗ[4][ನಂ]ದಮೆಂದು [ಲೋಗರ್]।
ಬಗೆದಿರೆ ವಸುಷೇಣನೆಂಬ ಪೆಸರಾಯ್ತಾಗಳ್ ॥೯೭॥

ಅಂತು ವಸುಷೇಣನಾಲೋ।
ಕಾಂತಂಬರಮಳವಿ ಬಳೆಯೆ ಬಳದೆಸಕಮದೋ॥
ರಂತೆ ಜನ[5][ಂಗಳ] ಕರ್ಣೋ।
ಪಾಂತದೊಳೊಗೆದೆಸೆಯೆ ಕರ್ಣನೆಂಬನುಮಾದಂ ॥೯೮॥

---

[1] ದರಾಗಳಾ ಬಾಲಕಿಯರ್ (ಕ.ಖ.), ದುದಾಗಳಾ ಬಾಳಕಿಯಾ (ಘ.); [2] ದೆ ನೆಟಿಲ್ಗೆಣೆಯಾಗಿರೆ ಬಿಳ್ದುದೋ (ಕ.); [3] ಡಿ (ಕ.ಖ.ಘ); [4] ನಿಂ (ಕ.ಖ.ಘ.); [5] ಜನಿತ (ಕ.ಖ.).

ವ॥ ಆಗಿಯಾತಂ ಶಸ್ತ್ರ ಶಾಸ್ತ್ರ ವಿದ್ಯೆಯೊಳತಿಪರಿಣತನಾಗಿ ನವಯೌವನಾರಂಭದೊಳ್—

ಚಂ॥ ಪೊಡೆದುದು ಬಿಲ್ಲ ಜೇವೊಡೆಯೆ ಮಿಱುವ ವೈರಿ ನರೇಂದ್ರರಂ ಸಿಡಿ।
ಲ್ವೊಡೆದವೊಲಟ್ಟೆ ಮುಟ್ಟೆ ಕಡಿದಿಕ್ಕಿದುದಾದೆಡರಂ ನಿರಂತರಂ॥
ಕಡಿ ಕಡಿದಿತ್ತ ಪೊನ್ನ ಬುಧ [1]ಮಾಗಧ ವಂದಿಜನಕ್ಕೆ ಕೊಟ್ಟ ಕೋ।
[2][ಡೆ]ಡ[3]ಱಿದೆ ಬೇಡಿ[4][ವೋ]ಡಿ[5]ವಿದು ಚಾಗದ ಬೀರದ ಮಾತು ಕರ್ಣನಾ ॥೯೯॥

ವ॥ ಅಂತು ಭುವನಭವನಕ್ಕೆಲ್ಲಂ ನೆಗೞ್ದ ಕರ್ಣನ ಪೊಗೞ್ತೆಯಂ ನೆಗೞ್ತೆಯುಮನಿಂದ್ರಂ ಕೇಳ್ದು ಮುಂದೆ ತನ್ನಂಶದೊಳ್ ಪುಟ್ಟುವರ್ಜುನಂಗ ಮಾತಂಗಂ ದ್ವಂದ್ವಯುದ್ಧಮುಂಟೆಂಬುದಂ ತನ್ನ ದಿವ್ಯಜ್ಞಾನದಿಂದಮಱಿದು ವಿಂತಲ್ಲದೀತನನಾತಂ ಗೆಲಲ್ ಬಾರದೆಂದು—

ಕಂ॥ ಬೇಡಿದೊಡೆ ಬಲದ ಬರಿಯುಮ।
ನೀಡಾಡುಗುಮುಗಿದು ಕರ್ಣನೆಂದಾಗಳೆ ಕೈ॥
ಗೂಡಿದ ವಟುವಾಕೃತಿಯೊಳೆ।
ಬೇಡಿದನಾ ಸಹಜ ಕವಚಮುಂ ಕುಂಡಳಮುಂ ॥೧೦೦॥

ಬೇಡಿದುದನ[6]ರಿದುಕೊಳ್ಳೆನೆ।
ಬೇಡಿದುದಂ ಮುಟ್ಟಲಾಗದೆನಗೆನೆ ನೆಗೞ್ದ॥
ಲ್ಲಾಡದೆ ಕೊಳ್ಳೆಂದರಿದೀ।
ಡಾಡಿದನಿಂದ್ರಂಗೆ ಕವಚಮುಂ ರಾಧೇಯಂ ॥೧೦೧॥

ಎಂದುಂ ಪೋಗೆಂದನೆ ಮಾ।
ಣೆಂದನೆ ಪೆಱತೊಂದನೀವೆನೆಂದನೆ ನೊಂದಃ॥
ಎಂದನೆ ಸೆರಗಿಲ್ಲದೆ ಪಿಡಿ।
ಯೆಂದನಿದೇಂ ಕಲಿಯೊ ಚಾಗಿಯೋ ರವಿತನಯಂ ॥೧೦೨॥

ವ॥ ಅಂತು ತನ್ನ ಸಹಜ ಕವಚಮುಂ ನೆತ್ತರ್ ಪನ ಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟೊಡಿಂದ್ರನಾತನ ಕಲಿತನಕೆ ಮೆಚ್ಚಿ—

ಕಂ॥ ಸುರ ದನುಜ ಭುಜಗ ವಿದ್ಯಾ।
ಧರ ನರ ಸಂಕುಲದೊಳಾರನಾದೊಡಮೇನೋ॥
ಗರ ಮುಟ್ಟೆ ಕೊಲ್ಗುಮಿದು ನಿಜ।
ವಿರೋಧಿಯುಂ ಧುರದೊಳೆಂದು ಶಕ್ತಿಯನಿತ್ತಂ ॥೧೦೩॥

---

[1] ವಿಪ್ರ ಜನಕ್ಕೆನೆ ಕೋಡಿ ಕೋಡಿನೊ। ಳ್ವ (ಕ.); [2] ಳ್ವ (ಕ.), ಳೆ (ಖ. ಘ.); [3] ರ (ಕ.ಖ.); [4] ನೋ (ಕ.ಖ.ಘ.); [5] ದು (ಕ.ಖ.ಘ.); [6] ಱಿದುಕೊಳ್ಳದೆ (ಕ. ಖ.).

ವ॥ ಅಂತಿಂದ್ರನಿತ್ತ ಶಕ್ತಿಯಂ ಕೈಕೊಂಡು ನಿಜ ಭುಜಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ—

ಕಂ॥ ಕೂರಿ[1][ಸೆ] ಗುರು ಶುಶ್ರೂಷೆಯೊ।
ಳಾ ರಾಮನನುಗ್ರ ಪರಶು ಪಾಟಿತ ರಿಪು ವಂ॥
ಶಾರಾಮನನಿಸು ವಿದ್ಯಾ।
ಪಾರಗನೆನಿಸಿದುದು ಬಲ್ಮೆ ವೈಕರ್ತನನಾ ॥ ೧೦೪ ॥

ವ॥ ಅಂತು ಧನುರ್ಧರಾಗ್ರಗಣ್ಯನಾಗಿರ್ದೊಂದು ದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱೆದೊಱಗಿದಾ ಪ್ರಸ್ತಾವದೊಳಾ ಮುನಿಗೆ ಮುನಿಸಂ ಮಾಡಲೆಂದಿಂದ್ರನುಪಾಯದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱ ಕೊಡಂತಿಯೊಳ್ ಬೆಟ್ಟದಂತತ್ತಮಿತ್ತಮುರ್ಚಿ ಪೋಗೆಯುಮದನಱಿಯದಂತೆ ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯ ನುಗುರಿಸುತ್ತುಮಿರೆಯಿರೆ—

ಕಂ॥ ಅತಿ[2]ವಿಶದ ವಿಶಾಲೋರು।
ಕ್ಷತದಿಂದೊಱೆ[3]ದನಿತು ಜಡೆಯುಮಂ ನಾಂದಿ ಮನಃ॥
ಕ್ಷತದೊಡನೆಟ್ಟೞಿಸಿ[3]ದುದು।
ತ್ಥಿತಮಾ ವಂದಸ್ರಮಿಶ್ರ ಗಂಧಂ ಮುನಿಯಂ ॥ ೧೦೫ ॥

ವ॥ ಅಂತೆಟ್ಟೞತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡೀ ಧೈರ್ಯಂ ಕ್ಷತ್ರಿಯಂಗಲ್ಲದಾಗದು ಪಾರ್ವನೆಂದೆನ್ನೊಳ್ ಪುಸಿದು ವಿದ್ದೆಯಂ [4]ಕೈಕೊಂಡುದರ್ಕೆ ದಂಡಂ ಪೆಱತಿಲ್ಲ ನಿನಗಾನಿತ್ತ ಬ್ರಹ್ಮಾಸ್ತ್ರಮೆಂಬ ದಿವ್ಯಾಸ್ತ್ರಮವಸಾನ ಕಾಲದೊಳ್ ಬೆಸಕೆಯ್ಯ ದಿರ್ಕೆಂದು ಶಾಪಮನಿತ್ತನಂತು ಕರ್ಣನುಂ ಶಾಪಹತನಾಗಿ ಮ[5]ಗುಟ್ಟು ಬಂದು ಸೂತನ ಮನೆಯೊಳಿರ್ಪನ್ನೆಗಮಿತ್ತಲ್ ಕುಂತಿಗವ[6]ರ [7]ಮಾವನಪ್ಪ ಕುಂತಿ ಭೋಜನುಂ ಸ್ವಯಂಬರಂ ಮಾಡೆ—

ಚ॥ ಸೊಗಯಿಪ ತಮ್ಮ ಜವ್ವನದ ತಮ್ಮ ವಿಭೂತಿಯ ತಮ್ಮ ತಮ್ಮ ಚೆ।
ಲ್ವುಗಳ ವಿಲಾಸ[8]ದುರ್ಮೆಗಳೊಳಾವೆವಗಾಗಿಪೆವೆಂದು ಬಂದ ಚೆ॥
ನ್ನಿಗರುಮನಾಸೆಕಾಱರುಮನೊಲ್ಲದೆ ಚೆಲ್ವಿಡಿದಿರ್ದ ರೂಪು ದೃ।
ಷ್ಟಿಗೆ ವರೆ ಪಾಂಡುರಾಜನನೆ ಕುಂತಿ ಮನಂಬುಗೆ ಮಾಲೆ ಸೂಡಿದಳ್ ॥ ೧೦೬ ॥

---

1. ಸಿ (ಕ. ಖ. ಘ.); 2. ಲಲಿತ (ಘ§.); 3. ತು ತತ್। ಕ್ಷತರಕ್ತಮನಶ್ರು (ಕ.); 4. ಕೊಂಡುದಕೆ (ಕ. ಖ.); 5. ರ (ಕ.ಖ.); 6. ಳ (ಕ.); 7. ತಂದೆಯಪ್ಪ (ಕ. ಖ.); 8. ಪೇರ್ಮೆ (ಕ.), ಪಿರ್ಮೆ (ಖ.).

ವ|| ಅಂತು ಸ್ವಯಂಬರದೊಳ್ ನೆರೆದರಸುಮಕ್ಕಳೊಳಪ್ಪುಕೆಯ್ದು ಕುಂತಿಯೊಡನೆ ಮದ್ರರಾಜನ ಮಗಳ್ ಶಲ್ಯನೊಡವುಟ್ಟಿದ ಮಾದ್ರಿಯುಮನೊಂದೆ ಪಸೆಯೊಳಿರಿಸಿ ಗಾಂಗೇಯಂ ವಿಧಾತ್ರಂ ಮುಂಡಾಡುವಂತೆ ತಾಂ ಮದುವೆಯುಂ ಮಾಡಿ-

ಚಂ|| ತಳಿರ್ಗಳಸಂ ಮುಕುಂದ ರವಮೆತ್ತಿದ ಮುತ್ತಿನ ಮಂಟಪಂ ಮನಂ|
ಗೊಳಿಪ ವಿತಾನ ಪಜ್ಜೆ ಪಸುರ್ವಂದಲೊಳೊಲ್ದಿಡೆಯಾಡುವೆಯ್ದೆಯರ್ ||
ಬಳಸಿದ ವೇದ ಪಾ[1]ರಗರ ಸಂದಣಿಯೆಂಬಿವಱಿಂ ವಿವಾಹ ಮಂ|
ಗಳಮದು ಕುಂತಿ ಮಾದ್ರಿಗಳೊಳಚ್ಚರಿಯಾದುದು ಪಾಂಡುರಾಜನಾ ||೧೦೭||

ತುಱುಗೆಮೆ ನೀಳ್ದ ಪುರ್ವು ನಿಡುಗಣ್ ಪೊಱಯಲ್ಲದೆ ಬಟ್ಟೆತಪ್ಪ ಬಾ|
ಯ್ದೆಱ [2]ತನು ರೇಖೆಗೊಂಡ ಕೊರಲೊಡ್ಡಿದ ಪೆರ್ಮೊಲೆ ತೆಳ್ವಸಿಱ್ ಕರಂ ||
ನೆಱೆದ ನಿತಂಬವಿಂಬುವಡೆದೊಳ್ತೊಡೆ [3]ನಕ್ಕರವದ್ದಿ (?) ತಾನೆ ಪೋ|
ಕಿಱುದೊಡೆಯೆಂದು ಧಾತ್ರಿ ಪೊಗೞ್ಗುಂ ಪೊಗೞ್ವನ್ನರೆ ಕುಂತಿ
ಮಾದ್ರಿಗಳ್ ||೧೦೮||

ವ|| ಅಂತಾಕೆಗಳಿರ್ವರುಮೆರಡುಂ ಕೆಲದೊಳಿರೆ ಕಲ್ಪಲತೆಗಳೆರಡಱ ನಡುವಣ ಕಲ್ಪವೃಕ್ಷಮಿರ್ಪಂತಿರ್ದ ಪಾಂಡುರಾಜಂಗೆ ಧೃತರಾಷ್ಟ್ರನಂಗಹೀನನೆಂದು ವಿವಾಹದೊಸಗೆಯೊಡನೆ ಪಟ್ಟಬಂಧದೊಸಗೆಯುಂ ಮಾಡಿ ನೆಲನನಾಳಿ[4][ಸೆ]—

ಉ|| ಮಿಱುವವೆಂಬ [5][ಮಾ]ಂಡಳಿಕರೀಯದ[6][ರೆ]ಂಬದಟರ್ [7]ಪಯಲ್ಗೆ ಮೆ|
ಯ್ದೋಱುವವೆಂಬ ಪೂಣಿಗರಡಂಗಿ [8][ಕು]ನುಂಗಿ ಸಿಡಿಲ್ದು ಜೋಲ್ದು ಕಾ||
ಯ್ಪಾ[9][ಱ] ನಭಕ್ಕೆ ಪಾಱಿದುದು ಗಂಡರ ನೆತ್ತಿಯೊಳೊತ್ತಿ ಬಾ[10]ಳನಿ|
ನ್ನೂಱುಗುಮೆಂದೊಡೇಂ ಪಿರಿದೊ ತೇಜದ ದಳ್ಳುರಿ ಪಾಂಡುರಾಜನಾ ||೧೦೯||

ಮ|| ಬೆಸಕೆಯ್ದತ್ತು ಸಮುದ್ರ ಮುದ್ರಿತ ಧರಾಚಕ್ರಂ ಪ್ರತಾಪಕ್ಕಗು|
ರ್ವಿಸೆ ಗೋಳುಂಡೆಗೊಳುತ್ತುಮಿರ್ದುದು ದಿಶಾಚಕ್ರಂ ಪೊ[11]ದಳ್ದಾಜ್ಞೆಗಂ ||
ಪೆಸರ್ಗಂ ಮುನ್ನಮೆ [12]ರೂಪುವೋದುದು ವಿಯಚ್ಚಕ್ರಂ ಸಮಂತೆಂಬಿನಂ|
ಜಸಮಾ ಪಾಂಡುರಮಾದುದಾ ನೃಪರೊಳಾರಾ ಪಾಂಡುರಾಜಂಬರಂ
||೧೧೦||

ವ|| ಅಂತು ಪಾಂಡುರಾಜನಧಿಕ ತೇಜನುಮವನತ ವೈರಿ ಭೂಭೃತ್ಸ[13]ಮಾಜನುಮಾಗಿ ನೆಗ[14]ೞುತ್ತಿರ್ದೊಂದು ದಿವಸಂ ತೋಪಿನ ಬೇಂಟೆಯನಾಡಲಟ್ಟುಯಿಂ ಪೋಗಿ—

---

1. ಠಕ (ಕ. ಖ.) ; 2. ಗೆಲೆ (ಘ.) ; 3. ನಕ್ಕರೆವದ್ದಿ (ಖ.), ನೆಕ್ಕೂರ್ರೆವೊದ್ದಿ (ಘ.) ; 4. ಸಿ (ಕ.ಖ.ಘ.) ; 5. ಮಂ (ಕ.ಖ.ಘ.) ; 6. ಮೆಂ (ಕ.ಖ.ಘ.) ; 7. ವೊ (ಕ.) ; 8. ಕಱಿಂಗಿ (ಕ.), ಕಲುಂಗಿ (ಖ.), ಕನುಂಗಿ (ಘ§.) ; 9. ಱಿ (ಕ.ಖ.ಘ.) ; 10. ರ (ಕ.ಖ.) ; 11. ಗೞ್ದಾಜಿಗಂ (ಕ.), ಗಳ್ದಾಜಗಂ (ಖ.) ; 12. ಗೂಡುಗೊಂಡುದು (ಘ§.) ; 13. ರೋ (ಕ.ಖ.) ; 14. ೞ್ಚುತಿ (ಕ.ಖ.).

ಚಂ॥ ಇನಿಯಳನಟ್ಟಿಯಿಂದೆ ಮೃಗಿಮಾಡಿ ಮನೋಜಸುಖಕ್ಕೆ ಸೋಲ್ತುಲಂ।
ಪಿ[1]ನೆ ಸೆರೆಯಲ್ಕೆ ದಿವ್ಯಮುನಿ[2]ಯುಂ ಮೃಗಮಾಗಿ ಮರಲ್ದು ಕೂಡೆ ಮೆ॥
ಲ್ಲನೆ ಮೃಗಮೆಂದು [3]ಸಾದುರ್ ನೆಱನಂ ನಡೆ ನೋಡಿ ನರೇಂದ್ರನೆಚ್ಚು ಭೋಂ।
ಕನೆ ಮೃಗಚಾರಿಯುಂ ತನಗೆ ಮಾಣದೆ ತಂದನದೊಂದು ಮಾರಿಯುಂ ॥ ೧೧೧ ॥

ವ॥ ಆಗಳ್ ಪ್ರಳಯದುಳ್ಕಮುಳ್ಕುವಂತೆ ತನ್ನೆಚ್ಚಂಬು ಮುನಿಕುಮಾರನ ಕಣ್ಣೊಳಮೆರ್ದೆಯೊಳಮುಳ್ಕೆ ಪೇಱಿಮೆನ್ನನಾವನೆಚ್ಚನೆಂಬ ಮುನಿಯ ಮುನಿದ ಸರಮಂ ಕೇಳ್ದು ಬಿಲ್ಲನಂಬುಮನೀಡಾಡಿ ತನ್ನ ಮುಂದೆ ನಿಂದಿರ್ದ ಭೂಪನಂ ಮುನಿ ನೋಡಿ—

ಉ॥ ಸನ್ನತ[4]ದಿಂ ರತಕ್ಕೆಳಸಿ ನಲ್ಲಳೊಳೋತೊಡಗೂ[5]ಡಿದೆನ್ನನಿಂ।
ತನ್ನೆಯುಮೆಚ್ಚುದರ್ಕೆ ಪೆಱತಿಲ್ಲ[6]ದು ದಂಡಮೊಱಲ್ದು ನಲ್ಲಳೊಳ್ ॥
ನೀನ್ನಡೆ ನೋಡಿಯುಂ ಬಯಸಿ ಕೂಡಿಯುಮಾ[7]ಗಡೆ ಸಾವೆಯಾಗಿ ಪೋ।
ಗಿನ್ನೆನೆ ರೌದ್ರ ಶಾಪ ಪರಿತಾಪ ವಿಳಾಪದೊಳಾ ಮಹೀಶ್ವರಂ ॥ ೧೧೨ ॥

ವ॥ ಎನ್ನ ಗೆಯ್ದ [8]ಕಾಮಾಕ್ರಾಂತಕ್ಕೆ ಕಾಮ ಕೃತಮೇಂ ಪಿರಿದಲ್ತು—

ಕಂ॥ ಎತ್ತ ವನಮೆತ್ತ ಮೃಗಯಾ।
ವೃತ್ತಕ[9]ವಿಾ ತಪಸಿಯೆತ್ತ ಮೃಗಮೆಂ[10]ದೆಂ [ತಾ] ॥
ನೆತ್ತೆಚ್ಚೆನಾತ್ಮ ಕ[11]ರ್ಮಾ।
ಯತ್ತಂ ಪೆಱತಲ್ತಿದೆಲ್ಲಮಘಟಿತ ಘಟಿತಂ ॥ ೧೧೩ ॥

ವ॥ ಎಂದು ಚಿಂತಿಸುತ್ತುಂ ಪೊೞಲ್ಗೆ ಮಗುೞ್ದು ವಂದು ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗೆ ತದ್ವೃತ್ತಾಂತಮೆಲ್ಲಮಂ ಪೇೞ್ದು ಸಮಸ್ತ ವಸ್ತುಗಳಂ ದೀ[12]ನಾನಾಥ ಜನಂಗಳ್ಗೆ ಸೂಱೆಗೊಟ್ಟು ನಿಜ ಪರಿವಾರಮಂ ಬರಿಸಿ—

ಉ॥ ಸಾರಮನಂಗ ಜಂಗಮ ಲತಾ ಲಲಿತಾಂಗಿಯರಿಂದಮ[13]ಲ್ತಿ ಸಂ।
ಸಾರಮಿದೆಂಬುದಿನ್ನೆ[14]ನಗೆ ತಪ್ಪುದು ತನ್ಮುನಿ ಶಾಪದಿಂದಮಿ ॥
ನ್ನಾರುಮಿದರ್ಕೆ ವಕ್ರಿಸದಿರಿಂ ವನವಾಸದೊಳಿರ್ಪೆನೆಂದು ದು।
ರ್ವಾರ ಪರಾಕ್ರಮಂ ತಳರೆ ಬಾರಿಸಿ ವಾರಿಸಿ ಕುಂತಿ ಮಾದ್ರಿಯರ್ ॥ ೧೧೪ ॥

ವ॥ ಬೆನ್ನ ಬೆನ್ನನೆ ಬರೆ ಬಿನ್ನ ಬಿನ್ನನೆ ಪೋಗಿ—

---

1. ನ (ಕ. ಖ.); 2. ಯೊಮ್ಮೃಗ (ಕ.); 3. ಪಾ (ಘ.); 4. ವೈಶಿಕ (ಕ.), ವೈರಿತ (ಖ.); 5. ಡುವೆನ್ನ (ಕ. ಖ.); 6. ದೆ (ಕ.); 7. ದೊ (ಕ. ಖ.); 8. ಕಾಮಾತ್ರಕಿಲ್ಕಿ (ಕ. ಖ.); 9 ಮೆತ್ತಂ ತಪಸ್ವಿಯೆತ್ತಂ ಮೃಗಮೆಂ ॥ ದೆತ್ತೆಚ್ಚೆನಾತ್ಮಕರ್ಮಮೆ। ನುತ್ತುಂ (ಕ.); 10. ದಾ (ಘ§.); 11. ರ್ಮ್ಮಮೆ । ನುತ್ತುಂ (ಕ. ಖ.); 12. ನ ರಾದ (ಕ.); 13. ತ್ತೆ (ಕ.); 14. ಮಗೆ (ಕ. ಖ.).

ಖಚರ ಪ್ಲುತ॥ ತುಂಗ ವನ್ಯ ಮತಂಗಜ ದಂತಾಘಾತ ನಿಪಾತಿತ ಸಲ್ಲಕೀ।
ಭಂಗಮಂ ಮಣಿ ಮೌಕ್ತಿಕ ನೀಳ ಸ್ಥೂಳ ಶಿಳಾ ಪ್ರವಿಭಾಸಿತೋ॥
ತ್ತುಂಗಮಂ ಮುನಿ ಮುಖ್ಯ ಮುಖಾಂಭೋಜೋದರ ನಿರ್ಗತ ಮಂತ್ರ ಪೂ।
ತಾಂಗಮಂ ನೃಪನೆಯ್ದಿದನುದ್ಯಚ್ಛೃಂಗಮನಾ ಶತಶೃಂಗಮಂ ॥೧೧೫॥

ವ॥ ಆ ಪರ್ವತದ ವಿಪುಳ ವನೋಪಕಂಠಂಗಳೊಳ್ ತಾಪಸ ಕ[1][ನ್ಯೆ]ಯರ್ ನಡಪಿದೆಳಲತೆಗಳೊಳೆಱಗಿ ತುಱುಗಿ ಸಾಮವೇದ ಧ್ವನಿಯೊಳ್ ಮೊರೆವ ತುಂಬಿಗಳುಮಂ ಪಣ್ತೆಱಗಿದ ತದಾಶ್ರಮದ ತರುಗಳ ಮೇಗಿರ್ದು ಪುಗಿಲ್ ಪುಗಿಲೆಂದಿತ್ತ ಬನ್ನಿ ಮಿರಿಮೆಂಬ ಪೊಂಬಣ್ಣದ ಕೋಗಿಲೆಗಳುಮಂ ಮುನಿ[2]ಕುಮಾರರೋದುವ ವೇದ ವೇದಾಂ[3]ಗಂಗಳಂ ತಪ್ಪುಪಿಡಿದು ಜಡಿದು ಬಗ್ಗಿಸುವ ಪದುಮ ರಾಗದ ಬಣ್ಣದರಗಿಳಿಗಳುಮಂ ಸುರಭಿಗಳ ತೊರೆದ ಮೊಲೆಗಳ[4]ನುಣ್ಬವೆಱ ಮಱಿಗಳಂ ಪೋಗೆ ನೂಂಕಿ ಕೊಂಕಿ ಮೊಲೆಗಳನುಣ್ಬ ಕಿಶೋರ ಕೇಸರಿಗಳುಮಂ ತಮ್ಮೊಡನೆ ನಲಿದಾಡುವ ಕಿಶೋರ ಕೇಸರಿಗಳಂ ಪಿಡಿದು ತೆಗೆವ ಕರಿಕಳಭಂಗಳುಮನಾಗಳಾ [5]ಪಳುವಂಗಳಿಂದೆ ಪಾಯ್ವ ಪುಲಿಗಳ ಮಱಿಗಳೊಳ್ ಪರಿದಾಡುವ ತರುಣ ಹರಿಣಂಗಳುಮಂ ಮತ್ತಂ ಮುತ್ತ ಕುರುಡ[6]ತವಸಿಗಳ ಕೈಯಂ ಪಿಡಿದು[7]ಯ್ದುವರ ಗುಹೆಗಳಂ ಪುಗಿಪ ಪೊಱಮಡಿಪ ಚಪಳ ಕಪಿಗಳುಮಂ ಹೋಮಾಗ್ನಿಯನೆಱಂಕೆಯ ಗಾಳಿಯಿಂ ನಂದಲೀಯದುರಿಪುವ ರಾಜಹಂಸೆಗಳುಮಂ [8]ಮುನಿಗಣೇಶ್ವರರೊಡನೆ [9]ದಾಳಿವೂಗೊಯ್ವೊಡನೆವರ್ಪ ಗೋಳಾಂಗೂಳಂಗಳುಮಂ ನೋಡಿ ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು—

ಚಂ॥ ವಿನಯದಿನಿತ್ತ ಬನ್ನಿ ಮಿರಿಮೆಂಬವೊಲಿಂಚರದಿಂದಮೊಯ್ಯನೊ।
ಯ್ಯನೆ ಮಱಿದುಂಬಿಗಳ್ ಮೊರೆವುಪಟ್ಕಱಿಳೊ[10]ಲ್ದೆಱಪಂತೆ ತಳ್ತ ಪೂ॥
ವಿನ ಪೊಸ ಗೊಂಚಲಿಂ [11]ಮರನಿದೇನೆಸೆದಿರ್ದುವೊ ಕಲ್ತುವಾಗದೇ।
ವಿನಯಮನೀ ತಪೋಧನರ ಕೈಯೊಳೆ [12]ಶಾಖಿಗಳುಂ [13]ನಗೇಂದ್ರ[ದಾ]॥೧೧೬॥

ವ॥ ಎಂದು ಮೆಚ್ಚುತ್ತುಮೆನಗೆ ನೆಲಸಿರಲೀ ತಪೋವನಮೆ ಪಾವನಮೆಂದು ತಪೋವನದ ಮುನಿಜನದ ಪರಮಾನುರಾಗಮಂ [14]ಪೆರ್ಚಿಸಿ ‡ಕಾಮಾನುರಾಗಮಂ ಬೆರ್ಚಿಸಿ‡ ತದಾಶ್ರಮದೊಳಾಶ್ರಮಕ್ಕೆ ಗುರುವಾಗಿ ಪಾಂಡುರಾಜನಿರ್ಪನ್ನೆಗಮಿತ್ತ

1. ನ್ಯೆ (ಕ.ಖ.ಘ.) ; 2. ಪುಂಗವ (ಕ.ಖ.ಘ.); 3. ತಂ (ಘ.); 4. ನುಂಬನವ (ಕ.ಖ.); 5. 'ಪಳುವಂ' ಎಂಬುದು ಘ. ದಲ್ಲಿ ಮಾತ್ರ ; 6. ತಪಸ್ವಿ (ಕ.ಖ.ಘ.); 7. ಯ್ದುವನ (ಕ.ಖ.); 8. ಗಣೇಶ್ವರರೊಡನೆ (ಕ.ಖ.ಘ.); 9. ಧಾಟಿಽಡುತೆ ಪೂ (ಕ.); 10. ಲ್ಬರಸಂಚೆ (ಕ.); 11. ದೆಱಗುತೇನೆಸಗಿ (ಕ.); 12. ಶೋಭೆಗಳಂ (ಕ.ಖ.); 13. ನರೇಂದ್ರರಾ (ಕ.), ನಗೇಂದ್ರರಾ (ಖ.), ನರೇಂದ್ರನಾ (ಘ.); 14. ಮೆಚ್ಚಿಸಿ (ಖ.ಘ.).

‡ ‡ ಈ ಭಾಗವು ಕ.ಖ. ಪ್ರತಿಗಳಲ್ಲಿಲ್ಲ.

ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ನೂರ್ವರ್ ಮಕ್ಕಳಂ ಪಡೆವಂತು ಪರಾಶರ ಮುನೀಂದ್ರನೊಳ್ ಬರಂಬಡೆದಳೆಂಬುದಂ ಕುಂತಿ ಕೇಳ್ದು ತಾನುಂ ಪುತ್ರಾರ್ಥಿ[ನಿ]ಯಾಗಲ್ ಬಗೆದು—

ಚಂ॥ ವಿಸಸನದೊಳ್ ವಿರೋಧಿ ನೃಪರಂ ತಱಿದೊಟ್ಟಲುಮರ್ಥಿಗರ್ಥಮಂ।
ಕಸವಿನ ಲೆಕ್ಕಮೆಂದು ಕುಡಲುಂ ವಿಪುಳಾಯತಿಯಂ ದಿಗಂತದೊಳ್॥
ಪಸರಿಸಲುಂ ಕರಂ ನೆಱೆವ ಮಕ್ಕಳನೀಯದೆ ನೋಡೆ ನಾಡೆ ನೋ।
ಯಿಸಿದಪುದಿಕ್ಷು [1]ಪುಷ್ಪದವೊಲೆನ್ನಯ ನಿಷ್ಫಲ ಪುಷ್ಪ ದರ್ಶನಂ ॥೧೧೭॥

* ವ॥ ಎಂದು ಚಿಂತಾಕ್ರಾಂತೆಯಾಗಿರ್ದ ಕುಂತಿಯಂ ಕಂಡು ಪಾಂಡುರಾಜ ನೇಕಾಂತದೊಳಿಂತೆಂದಂ—

†ಉ॥ ಚಿಂತೆಯಿದೇನೊ ಸಂತತಿಗೆ ಮಕ್ಕಳೆ ನೆಟ್ಟನೆ ಬಾರ್ತೆಯಪ್ಪೊಡಿ।
ನ್ನಿಂತಿರವೇಡ ದಿವ್ಯ ಮುನಿಪುಂಗವ[2][ರಂ] ಬಗೆದೀರ್ಪಿನಂ ನಿಜಾ॥
ತ್ಯಂತ ಸತಿವ್ರತಾ ಗುಣದಿನರ್ಚಿಸಿ ಮೆಚ್ಚಿಸು ನೀಂ ದಿಗಂತ ವಿ।
ಶ್ರಾಂತ ಯಶರ್ಕಳಂ ವರ ತನೂಭವರಂ ಪಡೆ ನೀಂ ತಳೋದರೀ ॥೧೧೮॥

ವ॥ ಎಂದೊಡೆ ಕುಂತಿಯಿಂತೆಂದಳೆನ್ನ ಕನ್ನಿಕೆಯಾ ಕಾಲದೊಳ್ ನಾನೆನ್ನ ಮಾವಂ ಕುಂತಿಭೋಜನ ಮನೆಯೊಳ್ ಬಳೆವಂದು ದುರ್ವಾಸ ಮಹಾಮುನಿಯ ರೆಮ್ಮ ಮನೆಗೆ ನಿಚ್ಚಕ್ಕಂ ಬರ್ಪರವರೆನ್ನ ವಿನಯಕ್ಕಂ ಭಕ್ತಿಗಂ ಬೆಸ[3]ಕೆಯ್ವುದರ್ಕಂ ಮೆಚ್ಚಿ ಮಂತ್ರಾಕ್ಷರಂಗಳನಯ್ದಂ ವರವಿತ್ತರೀಯಯ್ದು ಮಂತ್ರಕಯ್ವರ್ ಮಕ್ಕಳಂ ನಿನ್ನ ಬಗೆಗೆ ಬಂ‡ದವರನಾಹ್ವಾನಂ ಗೆಯ್ಯಲವರ‡ [4]ಪೋಲ್ವೆಯ ಮಕ್ಕಳಂ ಪಡೆವೆ ಯೆಂದು ಬೆಸಸಿದೊಡೀಗಳೆನ್ನ ಪುಣ್ಯದಿಂ ದೊರಕೊಂಡುದೊಳ್ಳಿತ್ತೆಂಬುದುಂ ದಿವ್ಯ ಮುನಿವಾಕ್ಯಮಮೋಘವಾಕ್ಯಮಕ್ಕುಮದರ್ಕೇನುಂ ಚಿಂತಿಸಲ್ವೇಡೆಂದೊಡಂತೆ ಗೆಯ್ವೆನೆಂದು ತೀರ್ಥಜಲಂಗಳಂ ಮಿಂದು ದಳಿಂಬವನುಟ್ಟು ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು—

ಉ॥ ಜ್ಞಾನದಿನಿರ್ದು ನಿಟ್ಟಪೊಡೆ ದಿವ್ಯ ಮುನೀಂದ್ರನ ಕೊಟ್ಟ ಮಂತ್ರ ಸಂ।
ತಾನಮನೋದಿಯೋದಿ ಯಮರಾಜನನದ್ಭುತ ತೇಜನಂ ಸರೋ॥
ಜಾನನೆ ಜಾನದಿಂ ಬರಿಸೆ ಬಂದು ಯಮಂ ಬೆಸನಾವುದಾವುದಾ।
ತ್ಮಾನುಗತಾರ್ಥಮೆಂದೊಡೆನಗೀವುದು ನಿನ್ನನೆ ಪೋಲ್ವ ಪುತ್ರನಂ ॥೧೧೯॥

---

1. ಚಾಪದೊಳೆ ಮುನ್ನಮೆ ನೀಂ ಪಡೆಯೇಂ ತಳೋದರೀ(ಕ.ಖ.); 2. ರಿಂ. (ಘ.); 3. ಗೆಯ್ದು (ಕ.), ಕೆಯ್ದು (ಖ.); 4. ದೊಲ್ಮೆ (ಕ.).

* ಈ ವಚನವು ಘ. ಪ್ರತಿಯಲ್ಲಿ ಮಾತ್ರ ಇದೆ. † ಈ ಪದ್ಯವು ಘ. ಪ್ರತಿಯಲ್ಲಿ ಮಾತ್ರ ಇದೆ. ‡ ‡ ಈ ಭಾಗವು ಕ. ಖ. ಪ್ರತಿಗಳಲ್ಲಿಲ್ಲ.

ವ॥ ಎಂಬುದುಂ ತಥಾಸ್ತುವೆಂದು ತನ್ನಂಶಮನಾಕೆಯ ಗರ್ಭದೊಳವತರಿಸಿಯಮಭಟ್ಟಾರಕನಂತರ್ಧಾನಕ್ಕೆ ಸಂದನನ್ನೆಗಮಾ ಕಾಂತೆಗೆ—

ಚಂ॥ ಹಿಮ ಧವಳಾತಪತ್ರಮನೆ ಪೋಲೆ ಮುಖೇಂದುವ ಬೆಳ್ಪು ಪೂರ್ಣ ಕುಂ।
ಭಮನೆ ನಿರಂತರಂ ಗೆಲೆ ಕುಚಂಗಳ [1]ತೋರ್ಪುರ್ಪ ಪತಾಕೆಯೊಂದು ವಿ॥
ಭ್ರಮಮನೆ ಪೋಲೆ ಪುರ್ವಿನ ಪೊಡರ್ಪೊಳಕೊಂಡುದವಳ್ಗೆ ಗರ್ಭ ಚಿ।
ಹ್ನಮೆ ಗಳ ಗರ್ಭದರ್ಭಕನ ಸೂಚಿಪ ಮುಂದಣ ರಾಜ್ಯಚಿಹ್ನಮಂ ॥೧೨೦॥

ವ॥ ಅಂತು [2]ಕುಂತಿಯ ಗರ್ಭಭಾರಮುಂ ತಾಪಸಾಶ್ರಮದನುರಾಗಮುಮೊಡನೊಡನೆ ಬಳೆಯೆ ಬಂಧುಜನದ ಮನೋರಥಂಗಳುಮೊಂಬತ್ತನೆಯ ತಿಂಗಳುಮೊಡನೊಡನೆ ನೆಱೆಯೆ—

ಕಂ॥ ವನನಿಧಿಯಿಂದಂ ಚಂದ್ರಂ।
ವಿನತೋದರದಿಂ ಗರುತ್ಮನುದಯಾಚಳದಿಂ॥
ದಿನಪನೊಗೆವಂತೆ ಪುಟ್ಟಿದ।
ನ[3]ನಿವಾರ್ಯ ಸುತೇಜನೆನಿಪನಿನಜನ ತನಯಂ ॥೧೨೧॥

ಪುಟ್ಟುವುದುಂ ಧರ್ಮಮುಮೊಡ।
ವುಟ್ಟಿದುದೀತನೊಳೆ ಧರ್ಮನಂಶದೊಳೀತಂ॥
ಪುಟ್ಟಿದನೆಂದಾ ಶಿಶುಗೊಸೆ।
ದಿಟ್ಟುದು ಮುನಿಸಮಿತಿ ಧರ್ಮಸುತನೆನೆ ಪೆಸರಂ ॥೧೨೨॥

ವ॥ ಅಂತು ಪೆಸರನಿಟ್ಟು ಪರಕೆಯಂ ಕೊಟ್ಟು—

ಕಂ॥ ಸಂತಸದಿನಿರ್ದು ಮಕ್ಕಳ।
ಸಂತತಿಗೀ ದೊರೆಯರಿನ್ನುಮಾಗದೊಡೆಂತುಂ॥
ಸಂತಸಮೆನಗಿಲ್ಲೆಂದಾ।
ಕಾಂತೆ ಸುತಭ್ರಾಂತೆ ಮುನ್ನಿನಂತೆವೊಲಿರ್ದಳ್ ॥೧೨೩॥

ಮಂತ್ರಾಕ್ಷರ ನಿಯಮದಿನಭಿ।
ಮಂತ್ರಿಸಿ ಬರಿಸಿದೊಡೆ ವಾಯುದೇವಂ ಬಂದೇಂ॥
ಮಂತ್ರಂ ಪೇೞೆನೆ ಕುಡು ರಿಪು।
ತಂತ್ರ ಕ್ಷಯಕರನನೆನಗೆ ಹಿತನಂ ಸುತನಂ ॥೧೨೪॥

ವ॥ ಎಂಬುದುಮದೇವಿರಿದಿತ್ತೆನೆಂದು ವಿಯತ್ತಳಕ್ಕೊಗೆದೊಡಾತನಂಶಮಾಕೆಯ ಗರ್ಭಸರೋವರದೊಳಗೆ ಚಂದ್ರಬಿಂಬದಂತೆ ಸೊಗಯಿಸೆ—

---

[1]. ಕರ್ಪು (ಕ.ಘ); [2]. ತನ್ನ (ಕ.ಖ.); [3]. ನವರತಾತ್ಮಧಿಕ ತೇಜ (ಕ.ಖ.)

ಚಂ|| ತ್ರಿವಳಿಗಳುಂ ವಿರೋಧಿ ನೃಪರುತ್ಸವಮುಂ ಕಿಡೆವಂದುವಾನನೇಂ|
ದುವ ಕಡುವೆಳ್ಪು ಕೂಸಿನ ನೆಗಳ್ತೆಯ ಬೆಳ್ಪುವೊಲಾಯ್ತು ಮು[1][ನ್ನೆ]ಬ||
ಳ್ಕುವ ನಡು [2]ತೋರ್ಪ ಮೆಯ್ಯನೊಳಕೊಂಡುದು ಪೊಂಗೊಡನಂ
ತಮಾಳ ಪ||
ಲ್ಲವದೊಳೆ ಮುಚ್ಚಿದಂದದೊಳೆ ಚೂಚುಕ[3]ಮಾಂತುದು ಕರ್ಪನಾಕೆಯಾ
||೧೨೫||

ಕಂ|| ಆ ಸುದತಿಯ ಮೃದುಪದ ವಿ|
ನ್ಯಾಸ[4]ಮುಮಂ ಶೇಷನಾನಲಾಱದೆ ಸು[5][ಯ್ದಂ]||
ಬೇಸಱು[6]ನೆಂದೊಡೆ ಗರ್ಭದ|
ಕೂಸಿನ ಬಳೆದಳವಿಯಳವನಳೆವರುಮೊಳರೇ ||೧೨೬||

ವ|| ಅಂತು [7]ಗರ್ಭನಿರ್ಭರ ಪ್ರದೇಶದೊಳರಾತಿಗಳ್ಗಂತಕಾಲಂ ದೊರೆಕೊಳ್ವಂತೆ ಪ್ರಸೂತಿಕಾಲಂ ದೊರೆಕೊಳೆ—

ಕಂ|| ಶುಭ ತಿಥಿ ಶುಭ ನಕ್ಷತ್ರಂ
ಶುಭ ವಾರಂ ಶುಭ ಮುಹೂರ್ತಮೆನೆ ಗಣಕನಿಳಾ||
ಪ್ರಭುವೊಗೆ[8]ದನುದಿತ ಕಾಯ|
ಪ್ರಭೆ[9]ಯೊಗೆದಿರೆ ದಳಿತ ಶತ್ರುಗೋತ್ರಂ ಪುತ್ರಂ ||೧೨೭||

ಭೀಮಂ ಭಯಂಕರಂ ಪೆಱ|
ತೇಮಾತೀ ಕೂಸಿನಂದವೀತನ ಪೆಸರುಂ||
ಭೀಮನೆ ಪೋಗೆನೆ ಮುನಿಜನ|
ಮಾ ಮಾಱ್ಕೆಯಿನಾಯ್ತು ಶಿಶುಗೆ ಪೆಸರನ್ವರ್ಥಂ ||೧೨೮||

ವ|| ಅಂತು ಭರತಕುಲತಿಳಕರಪ್ಪಿರ್ವರ್ ಮಕ್ಕಳಂ ಪೆತ್ತು ಕುಂತಿ ಸಂತಸದಂತಮನೆಯ್ದಿರ್ಪುದುಮತ್ತ ಧೃತರಾಷ್ಟ್ರನ ಮಹಾದೇವಿಯಪ್ಪ ಗಾಂಧಾರಿ ಕೇಳ್ದು ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ—

ಕಂ|| ಸಂತತಿಗೆ ಪಿರಿಯ ಮಕ್ಕಳ|
ನಾಂ ತಡೆಯದೆ ಪಡೆವೆನೆಂದೊಡೆನ್ನಿಂ ಮುನ್ನಂ||
ಕುಂತಿಯೆ ಪಡೆದಳ್ ಗರ್ಭದ|
ಚಿಂತೆಯದಿನ್ನೇವುದೆಂದು ಬಸಿಱಂ ಪೊಸೆದಳ್ ||೧೨೯||

---

[1]. ನ್ನ (ಕ. ಖ. ಘ.); [2]. ನಾಡೆ ತೋರ್ಪನೊಳಕೊಂಡುದು (ಕ.); [3]. ಮಾಳ್ಪುದು (ಕ); [4]. ವಿಶೇಷಮುಮನಾನಲಾರದೆ ಸುಯ್ದಳ್ (ಕ. ಖ.); [5]. ಗಿದಂ (ಘ); [6]. ನಾನವ (ಕ.); [7]. ನಿರ್ಭರ ಗರ್ಭ (ಕ.); [8]. ದಂ ನುತ (ಕ.); [9]. ಪರೆ (ಘ.§)

ಕಂ॥ ಪೊಸೆದೊಡೆ ಪಾಲ್ಗಡಲಂ ಮಗು।
ಳ್ದಸುರರ್ ಪೊಸೆದಲ್ಲಿ ಕಾಳಕೂಟಾಂಕುರಮಂ॥
[1]ದಸದಳವೊಗೆದಂತೊಗೆದುವು।
ಬಸಿಱಿಂ ನೂಱ[3]ೊಂದು ಪಿಂಡಮರುಣಾಕೀರ್ಣಂ ॥೧೩೦॥

ವ॥ ಅವಂ ಕಂಡು ಕಿನಿಸಿ ಕಿರ್ಚೆಟ್ಟಿದ್ದವೆಲ್ಲವಂ ಪೊಱಗೆ ಬಿಸುಟು ಬನ್ನಿಮೆಂಬುದುಂ ವ್ಯಾಸಭಟ್ಟಾರಕಂ ಬಂದು ಗಾಂಧಾರಿಯುಂ ಬಗ್ಗಿಸಿ—

ಚಂ॥ ಒದವುಗೆ ನಿನ್ನ ಸಂತತಿಗೆ ನೂರ್ವರುದಗ್ರ ಸುತರ್ಕಳೊಂದೆ ಗ।
ರ್ಭದೊಳೆನೆ ಕೆಮ್ಮನಿಂತು ಪೊಸೆದಿಕ್ಕಿದೆ ಪೊಲ್ಲದು ಗೆಯ್ದೆಯೆಂದು ಮಾ॥
ಣದೆ ಮುನಿ ನೂಱು ಪಿಂಡಮುಮನಾಗಳೆ ತೀವಿದ ಕಮ್ಮನಪ್ಪ ತು।
ಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ ಸೃಷ್ಟಿಗೆ ಚೋದ್ಯ
ಮಪ್ಪಿನಂ ॥೧೩೧॥

ವ॥ ಅಂತು ನೂರ್ವರೊಳೊರ್ವನಗುರ್ಬುರ್ ಪರ್ಬ ಪ[2]ರಕಲಿಸೆ ಸಂಪೂರ್ಣವಯಸ್ಕನಾಗಿ ಘೃತ ಘಟ [3]ವಿಘಟನುಮಾಗಿ ಪುಟ್ಟುವುದುಂ—

ಕಂ॥ ಪ್ರತಿಮೆಗ[4]ಳಟ್ಟುವು ವೊಟಗಿದು।
[5][ದ]ತಿ ರಭಸದೆ ಧಾತ್ರಿ ದೆಸೆಗಳುದುರಿದುವು ಭೂತ॥
ಪ್ರತತಿಗಳಾಡಿದುವೊಳಱಿದು।
ವತಿ ರಮ್ಯ ಸ್ಥಾನದೊಳ್ ಶಿವಾ ನಿವಹಂಗಳ್ ॥೧೩೨॥

ವ॥ ಅಂತೊಗೆದನೇಕೋತ್ಪಾತಂಗಳಂ ಕಂಡು ಮುಂದಱಿವ ಚದುರ ವಿದುರನಿಂತೆಂದಂ—

ಕಂ॥ ಈತನೆ ನಮ್ಮ ಕುಲಕ್ಕಂ।
ಕೇತು[6]ದಲಾನಱಿವೆನಲ್ಲದಂದೇಕಿನಿತು॥
ತಾತ್ಪಂ ತೋರ್ಪುವು ಬಿಸುಡುವು।
ದೀತನ ಪೆಱಗುಟ್ಟಿದ ಸುತರೆ ಸಂತತಿಗಪ್ಪರ್ ॥೧೩೩॥

ವ॥ ಎಂದೊಡಂ ಪುತ್ರಮೋಹ ಕಾರಣಮಾಗಿ ಧೃತರಾಷ್ಟ್ರನುಂ ಗಾಂಧಾರಿಯುಮೇಗೆ[7]ಯ್ದುವೊಡಂಬಡಿದಿರ್ದೊಡುತ್ಪಾತ ಶಾಂತಿಕ ಪೌಷ್ಟಿಕ ಕ್ರಿಯೆಗಳಂ ಮಹಾಬ್ರಾಹ್ಮಣರಿಂದಂ ಬಳೆಯಿಸಿ ಬದ್ದವಣಮುಂ ಬಾಜಿಸಿ ಮಂಗಳಮುಂ ಪಾಡಿಸಿ ಕೂಸಿಂಗೆ ದುರ್ಯೋಧನನೆಂದು ಪೆಸರನಿಟ್ಟು ಮತ್ತಿನ ಕೂಸುಗಳ್ಗೆಲ್ಲಂ ದುಶ್ಶಾಸನಾದಿಯಾಗಿ ನಾಮಂಗಳನಿಟ್ಟು ಪರಕೆಯಂ ಕೊಟ್ಟು—

---

1. ದೊಸೆದಂತೆಗೆದುವು ಕೇಡೆನೆ। ವಸುಧೆಗೆ (ಕ); 2. ರಿ (ಕ.); 3. ದಿನಘಟವಾನನಾಗಿ (ಕ. ಖ.); 4. ಳಿತ್ತಲ್ (ಕ. ಖ.); 5. ವ (ಕ. ಖ. ಘ.); 6. ಗಡೆಂವಱಿ (ಕ. ಖ.); 7. ಯ್ದುಪೆವೆಂದೊ (ಕ. ಖ.).

ಮ॥ ಸುಕವಿರ್ಪನ್ನೆಗಮಿತ್ತು ಕುಂತಿ ಶತಶೃಂಗಾದ್ರೀಂದ್ರದೊಳ್ ದಿವ್ಯ ಬಾ ।
ಲಕ[1]ನಿನ್ನೊರ್ವನನುಗ್ರ ವೈರಿ ಮದವನ್ಮಾತಂಗ ಕುಂ[2]ಭಾ[3][ದ್ರ್] ಪಾ ॥
ಕ್ತಿಕ ಲಗ್ನೋಜ್ಜ್ವಲಬಾಣನಂ [4]ಪ್ರವಿಲಸದ್ಗೀರ್ವಾಣ ದಾತವ್ಯ ಸಾ ।
ಯಕ ಸಂಪೂರ್ಣ ಕಳಾಪ್ರವೀಣನನಿಳಾ ಭಾರ ಕ್ಷಮಾಕ್ಷೂಣನಂ ॥ ೧೩೪ ॥

ವ॥ ಅಂತು ಸರ್ವ ಲಕ್ಷಣ ಸಂಪೂರ್ಣನಪ್ಪ ಮಗನನಮೋಘಂ ಪಡೆವೆನೆಂಬು ದ್ಯೋಗಮನೆ[5]ತ್ತಿಕೊಂಡು ಪಾಂಡುರಾಜನುಂ ತಾನುಂ—

ಚಂ॥ ಎಱಗಿಯುಮೊರ್ಮೆ ದಿವ್ಯ ಮುನಿಗಾರ್ತುಪವಾಸಮನಿರ್ದುಮೊರ್ಮೆ ಕೊ ।
ಯ್ದುಱಿಕೆಯ ಪೂಗಳಿಂ ಶಿವನನರ್ಚಿಸಿಯುಂ ಬಿಡದೊರ್ಮೆ ನೋಂತುಮೋ ॥
ದಱಿವರ ಪೇಟ್ದ ನೋಂಪಿಗಳನೊರ್ಮೆ ಪಲರ್ಮೆಯುಮಿಂತು ತಮ್ಮ ಮೆ ।
ಯ್ಮಱೆವಿನಮಿರ್ವರುಂ ನವೆದರೇನವರ್ಗಾದುದೊ ಪುತ್ರದೋಹಳಂ ॥೧೩೫॥

ಅಲಸದೆ ಮಾಡಿ ಬೇಸಱದೆ ಸಾಲ್ಗುಮಿದೆನ್ನದೆ ಮೆಯ್ಯೊಸಗಕ್ಕೆ ಪಂ ।
ಬಲಿಸದೆ ನಿದ್ದೆಗೆಟ್ಟು [6][ನಿಡು] ಜಾಗರದೊಳ್ ತೊಡರ್ದೇಕ ಪಾದದೊಳ್ ॥
ಬಲಿದುಪವಾಸದೊಳ್ ನವೆದು ನೋಂಪಿಗಳೊಳ್ ನಿಯಮ ಕ್ರಮಂಗಳಂ ।
ಸಲಿಸಿದರಂತು ನೋನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೇ ॥೧೩೬॥

ವ॥ ಅಂತೊಂದು ವರ್ಷಂಬರಂ ಭರಂಗೆಯ್ದು ನೋಂತು ಪೂರ್ವ ಕ್ರಮ ದೊಳೊಂದು ದಿವಸಮುಪವಾಸಮನಿರ್ದಗಣ್ಯ ಪುಣ್ಯ ತೀರ್ಥಜಲಂಗಳಂ ಮಿಂದು ದಳಿಂಬಮನುಟ್ಟು ದರ್ಭಶಯನದೊಳಿರ್ದು—

ಮ॥ ಸುಲಿಪಲ್ ಮಿಂಚಿನಗೊಂಚಲುಟ್ಟ ದುಗುಲಂ ಗಂಗಾನದೀ ಫೇನಮು ।
ಜ್ಜ್ವಲ ಮುಕ್ತಾಭರಣಂ ತರತ್ತರಳ [7]ತಾರೋದಾರ ಭಾಭಾರಮಂ ॥
ಗ ಲತಾ [8]ಲಾಲಿತ ಸಾಂದ್ರ ಚಂದನ ರಸಂ ಬೆಳ್ದಿಂಗಳೆಂಬೊಂದು ಪಂ ।
ಬಲ ಬಂಬ[9]ಲ್ಗೆ[ಡೆ]ಯಾಗೆ ಬೆಳ್ಪಸದನಂ ಕಣ್ಗೊಪ್ಪಿತಾ ಕಾಂತೆಯಾ ॥ ೧೩೭ ॥

ವ॥ ಅಂತು ತನ್ನ ಕೈಕೊಂಡ ಬೆಳ್ಪಸದನದೊಳ್ ಕೀರ್ತಿಶ್ರೀ[10][ಯಂ] ವಾಕ್ಶ್ರೀಯುಮನನುಕರಿಸಿ ಮಂತ್ರಾಕ್ಷರ ನಿಯಮದೊಳಿಂದ್ರನಂ ಬರಿ[11][ಸೆ]—

ಕಂ॥ ನೆನೆದ ಮನಂ ಪೆಱಗುಱಿದ ।
ತ್ತೆನೆ ಬೆಳಗುವ ರತ್ನದೀಪ್ತಿ ಸುರಧನು ನೆಗೆದ ॥
ತ್ತೆನೆ ನೆಯ್ದಿಲ್ಗೊಳನಲರ್ದ ।
ತ್ತೆನೆ ಕಣ್ಗಳ ಬಳಗವಾಗಳಿಂದ್ರಂ ಬಂದಂ ॥ ೧೩೮ ॥

---

1. ನಂ ದೋರ್ವಲ ದೃಪ್ತ (ಕ.); 2. ಭಸ್ಥಳೋ ॥......ಜ್ವಲ (ಕ.); 3. ದ್ರಿ (ಘ); 4. ಪ್ರವಿಣನಂ ನಿರ್ವಾಣನಂ ದಿಬ್ಯ ಸಾ । (ಕ.ಖ.); 5. ಕೈ(ಕ.); 6. ದಿಗ್ಸರದೊಳ್ (ಕ.), ದಿಗ್ವಾಗರದೊಳ್ (ಖ.), ದಿಗ್ಜಾಗರದೊಳ್ (ಘ,); 7. ಶೋಭಾ ಭಾರವಾಭೀಲ (ಕ.ಖ.), ದಾ (ಘ.); 8. ರಾ ಸಿತ (ಕ.); 9. ಲ್ಗೊಲೆ (ಕ.ಖ.) ಲ್ಗೆಣೆ (ಘ.); 10. ಯುಂ (ಕ.ಖ.ಘ.) 11. ಸಿ (ಕ. ಖ. ಘ.).

ಕಂ॥ [1]ಬೆಸನೇನೇಗೆಯ್ವುದೊ ನಿನ।
ಗೊಸೆದೇನಂ ಕುಡುವುದೆಂದೊಡೆಂದಳ್ ಮಕ್ಕಳ್ ॥
ಒಸಗೆಯನೆನಗೀವುದು ನಿ।
ನ್ನೆಸಕದ ಮಸಕಮನೆ ಪೋಲ್ವ [2]ಮಗನಂ [3]ಮಘವಾ ॥ ೧೩೯ ॥

ವ॥ ಎಂಬುದುಮಾಕೆಯ ಬಗೆದ ಬಗೆಯೊಳೊಡಂಬಡುವಂತೆ ಕುಲಗಿರಿಗಳ ಬಿಣ್ಪುಮಂ [4]ಧರಾತಳದ ತಿಣ್ಪುಮನಾದಿತ್ಯನ ತೇಜದಗುಂ[5]ತಿಯುಮಂ ಚಂದ್ರನ ಕಾಂತಿಯುಮಂ ಮದನನ ಸೌಭಾಗ್ಯಮುಮಂ ಕಲ್ಪತರುವಿನುದಾರಶಕ್ತಿಯು ಮನೀಶ್ವರನ ಪ್ರಭುಶಕ್ತಿಯುಮಂ ಜವನ ಬಲ್ಲಾಳ್ತನಮುಮಂ ಸಿಂಹದ ಕಲಿತನ ಮುಮ[6]ನವರವರ ದೆಸೆಗಳಿಂ ತೆಗೆದೊಂದುಮಾಡಿ ಕುಂತಿಯ ದಿವ್ಯಗರ್ಭೋ ದರಮೆಂಬ ಶುಕ್ತಿಪುಟೋದರದೊಳ್ *ತನ್ನ ದಿವ್ಯಾಂಶಮೆಂಬ ಮುಕ್ತಾಫಲೋ [7][ದ] ಬಿಂದುವನಿಂದ್ರಂ ಸಂಕ್ರಮಿ*ಸಿ ನಿಜನಿವಾಸಕ್ಕೆ ಪೋದನನ್ನೆಗಮಿತ್ತ ಕುಂತಿಯು[8]ಮಂದಿನ ಬೆಳಗಪ್ಪ ಜಾವದೊಳ್ ಸುಖನಿದ್ರೆಯಾಗಿ—

ಚಂ॥ ಕುಡಿವುದನೇೞುಮಂಬುಧಿಯುಮಂ ಕುಲಶೈಲ ಕುಳಂಗಳಂ ತಗು।
ಳ್ದಡರ್ವುದನೊಂದು ಬಾಳ ರವಿ ತನ್ನಯ ಸೋಗಿಲ ಮೇಗೆ ರಾಗದಿಂ ॥
ಪೊಡರ್ವುದನಂತೆ ದಿಕ್ಕರಿಗಳಂಬುಜ [9]ಪತ್ರ [10]ಪುಟಾಂಬುವಿಂ ಜೆಡಂ।
ಗಡಸಿರೆ ಮಜ್ಜನಂಬುಗಿಪುದಂ ಸತಿ ಕಂಡೊಸೆದಳ್ ನಿಶಾಂತದೊಳ್ ॥ ೧೪೦ ॥

ವ॥ ಅಂತು ಕಂಡು ಮುನಿ[11]ಕುಮಾರರೋದುವ ವೇದನಿನಾದದಿಂ ವಿಗತ ನಿದ್ರೆಯಾಗಿ ಪಾಂಡುರಾಜಂಗಮಲ್ಲಿಯ ಮುನಿಜನಂಗಳ್ಗಮಱಿಪಿದೊಡವರಾ ಕನಸುಗಳ್ಗೆ ಸಂತೋಷಂಬಟ್ಟು—

ಚಂ॥ ಕುಡಿವುದಱಿಂದಮಬ್ಧಿಗಳನಬ್ಧಿಪರೀತ ಮಹೀಶನಂ ತಗು।
ಳ್ದಡರ್ವುದಱಿಂ ಕುಲಾದ್ರಿ ಪರಿವೇಷ್ಟಿತನಂ ತರುಣಾರ್ಕನಲ್ಕೆಱಿಂ ॥
ಪೊಡರ್ವುದಱಿಂದ[12]ಮೆಂದುಮುದಿತೋದಿತನಂ ದಿಗಿಭಂಗಳಿಂಟುಮೊ।
ಳ್ಪೊಡರಿಸಿ ಮಜ್ಜನಂಬುಗಿಸೆ ಕಂಡುದಱಿಂ ಕಮಲಾಭಿರಾಮನಂ ॥ ೧೪೧ ॥

ವ॥ ಇಂತಪ್ಪ ಮಗನಂ ನೀನಮೋಘಂ ಪಡೆವೆಯೆಂದು ಮುನಿಜನಂಗಳ್ ಪೇೞ್ವ ಶುಭಸ್ವಪ್ನಫಲಂಗಳೊಡನೊಡನೆ ಗರ್ಭಚಿಹ್ನಂಗಳುಂ ತೋಱೆ ಪಗೆವರ

---

1 ಬೆಸನೆನಗಾವುದೊ ನೀನದ। ನುಸಿರ್ದೊಡದಂ ಕುಡೆವೆನೆಂದೊಡೆಂದಳ್ ಮಕ್ಕಳ ॥ (ಕ.), .........ಗೊಸೆದೆನದಂ ಕುಡುವೆನೆಂ (ಖ.); 2. ಮೊಗನಂ (ಕ.), ಮಗುವಂ (ಖ.); 3. ಮಗನಂ (ಕ.ಖ.); 4. ತಳೆದ ತಿಣ್ಪು (ಕ.ಖ.); 5. ದಲೆಯುಮುಂ (ಕ.); 6. ನಂತವರ (ಕ.); 7. ಪ (ಘ.); 8. ಮೊಂದಿನಂ (ಕ.ಖ.); 9. ಪಾದ (ಖ.ಘ.); 10. ಘ (ಕ.ಖ.); 11. ಜನದ ಪಾದ ಪದ್ಮಂಗಳೊಳ್ ವಿಗತ (ಕ.ಖ.ಘ.); 12. ಮಂ (ಖ.ಘ.).

** ಈ ಭಾಗವು ಕ.ಖ. ಪ್ರತಿಗಳಲ್ಲಿಲ್ಲ; "ಇಟ್ಟು ತಾನುಮಾಕ್ರಮಿ." (ಕ.).

ಪೆಂಡಿರ ಮೊಗಂಗ[1][ಳುಮಾ]ಕೆಯ ಕುಚ ಚೂಚುಕಂಗಳುಮೊಡನೊಡನೆ ಕಂದಿದು ವಾಕೆಯ ವಳಿತ್ರಯಂಗಳುಂ ಪಗೆವರ ಶಕ್ತಿತ್ರಯಂಗಳುಮೊಡನೊಡನೆ ಕೆಟ್ಟು ವಾಕೆಯ ಬಾಸೆಗಳುಂ ಪಗೆವರ ಬಾೞ್ವಾಸೆಗಳುಮೊಡನೊಡನಸಿಯುವಾದುವಾಕೆಯ ಮಂದಗಮನಮುಂ ಪಗೆವರ ಮನಂಗಳುಮೊಡನೊಡನಲಸಿಕೆಯಂ ಕೈಕೊಂಡು ವಾಕೆಯ ನಡುವಿನ ಬಡತನಮುಂ ಪಗೆವರ ಸಿರಿಯುಮೊಡನೊಡನೆ ಕೆಟ್ಟುವಾ ಸಮಯದೊಳ್—

ಉ|| ಉರ್ಚಿದ ಬಾಳೊಳಾತ್ಮ ಮುಖಬಿಂಬಮನಟ್ಱಿಯೆ ನೋಡಲುಂ ಮನಂ |
ಪೆರ್ಚಿ ಧನುರ್ಲತಾ ಗುಣ ನಿನಾದಮನಾಲಿಸಿ ಕೇಳಲುಂ ಮನಂ ||
ಬೆರ್ಚದೆ ಸಿಂಹ ಪೋತಕಮನೋವಲುಮಾಕೆಯ ದೋಹಳಂ ಕರಂ |
ಪೆರ್ಚಿದುದಾ ಗುಣಾರ್ಣವನ ಮುಂದಣ ಬೀರಮನಂ[2][ದೆ] ತೋರ್ಪವೋಲ್ || ೧೪೨ ||

*ವ|| ಮತ್ತಮೇೞುಂ ಸಮುದ್ರಂಗಳ ನೀರನೊಂದುಮಾಡಿ ಮಿಾಯಲುಂ ವೇಳಾ ವನಲತಾಗೃಹೋದರ ಪುಳಿನ ಸ್ಥಳ ಪರಿಸರ ಪ್ರದೇಶದೊಳ್ ತೊೞಲಲು ಮಟ್ಱಿಯಾಗೆ—

ಕಂ|| ಬಳೆದ ನಿತಂ[3]ಬದೆ ಕಾಂಚೀ |
ಕಳಾಪಮುಂ ಕಟ್ಟಲಣಮೆ ನೆಱೆ[3]ಯು[4]ದಿದೆಂದ ||
ಗ್ಗಳಿಸಿ ಕುಳಿಕೆಗಳಿನೇಂ ಕ |
ಣ್ಗೊಳಿಸಿದು[5][ದೋ] ಸುಭಗೆಯಾದ ಸು[6]ದತಿಯ ಗರ್ಭಂ || ೧೪೩ ||

*ವ|| ಅಂತು ತೆಕ್ಕನೆ ತೀವಿದ ಮೆಯ್ಯೊಳಲರ್ದ ಸಂಪಗೆಯರಲಂತೆ ಬೆಳರ್ತ ಬಣ್ಣಂ ಗುಣಾರ್ಣವಂಗೆ ಮಾಡಿದ ಬಣ್ಣದಂತೆ ಸೊಗಯಿಸಿ ಬಳೆದು—

*ಕಂ|| ತುಡುಗೆಗಳೊಳ್ ಸರಿಗೆಯುಮಂ |
ಕಡುವಿಣ್ಣಿತ್ತೆನಿಸಿ ನಡೆದುಮೋರಡಿಯನಣಂ ||
ನಡೆಯಲುಮಾಱದೆ ಕೆಮ್ಮನೆ |
ಬಿಡದಾರಯ್ವನಿತುಮಾಗೆ ಬಳೆದುದು ಗರ್ಭಂ || ೧೪೪ ||

ವ|| ಅಂತಾ ಬಳೆದ ಗರ್ಭದೊಳ್ ಸಂಪೂರ್ಣ ಪ್ರಸವಸಮಯಂ ದೊರೆಕೊಳೆ ಗ್ರಹಂಗಳೆಲ್ಲಂ ತಂತಮ್ಮುಚ್ಚ ಸ್ಥಾನಂಗಳೊಳಿರ್ದು ಷಡ್ವರ್ಗ ಸಿದ್ಧಿಯನುಂಟುಮಾಡೆ ಶುಭಲಗ್ನೋದಯದೊಳ್—

---

1. ಳಾ [ಕ.ಖ.ಘ.); 2. ತೆ (ಕ.ಖ.ಘ.) ; 3. ಬಂ (ಕ.), ಬ (ಖ.), ಬದ (ಘ.); 4. ದು ಗಳ ಸೀ | ಕುಳಿಕೆಗಳಿನೆನೆ ಕರಂ (ಕ.) ; 5. ದಾ (ಕ.ಖ.ಘ) ; 6. ಭಗಿ (ಖ.ಘ.).

* ಈ ವಚನವೂ ಪದ್ಯವೂ ಕ.ಖ. ಪ್ರತಿಗಳಲ್ಲಿಲ್ಲ.

ಕಂ॥ ಭರತಕುಲಗಗನ ದಿನಕರ।
ನರಾತಿಕುಳಕಮಳ[1]ಹಿಮುಕರಂ ಶಿಶು ತೇಜೋ॥
ವಿರಚನೆ[2]ಯುಂ ಕಾಂತಿಯುಮಾ।
ವರಿಸಿರೆ ಗರ್ಭೋದಯಾದ್ರಿಯಿಂದುದಯಿಸಿದಂ ॥ ೧೪೫ ॥

ಉದಯಿಸುವುದುಮಮೃತಾಂಶುವಿ।
ನುದಯದೊಳಂಭೋಧಿ [3]ವೇಲೆ ಭೋರ್ಗರೆವವೊಲೊ॥
ರ್ಮೊದಲೆಸೆದುವು ಘನಪಥದೊಳ್।
ತ್ರಿದಶಕರಾಹತಿಯಿನೊಡನೆ ಸುರದುಂದುಭಿಗಳ್ ॥ ೧೪೬ ॥

ವ॥ ಅಂತು ಮೊಱಗುವ ಸುರದುಂದುಭಿಗಳುಂ ಪರಸುವ ಜಯಜಯ ಧ್ವನಿಗಳುಂ ಬೆರಸು ದೇವೇಂದ್ರಂ ಬರೆ ದೇವವಿಮಾನಂಗಳೆಲ್ಲಂ ಶತಶೃಂಗ ಪರ್ವತಮಂ ಮುಸುಱಿಕೊಂಡು—

ಕಂ॥ ದೇವರ ಪಱೆಗಳ ರವದೊಳ್।
ದೇವರ ಸುರಿವರಲ ಸರಿಯ ಬೆಳ್ಸರಿಯೊಳ್ ತ॥
ದ್ದೇವ ವಿಮಾನಾವಳಿಯೊಳ್।
ತೀವಿದುದೊರ್ಮೊದಲೆ ಗಗನ[4]ದಿಂ ಧರೆ ಮಧ್ಯಂ ॥ ೧೪೭ ॥

ವ॥ ಅಂತು ಹಿರಣ್ಯಗರ್ಭಬ್ರಹ್ಮಂ ಮೊದಲಾಗೆ ವ್ಯಾಸ ಕಶ್ಯಪ ವಸಿಷ್ಠ ವಾಲ್ಮೀಕಿ ವಿಶ್ವಾಮಿತ್ರ ಜಮದಗ್ನಿ ಭಾರದ್ವಾಜಾಗಸ್ತ್ಯ ಪುಲಸ್ತ್ಯ ನಾರದ ಪ್ರಮುಖರಪ್ಪ ದಿವ್ಯ ಮುನಿಪತಿಗಳುಮೇಕಾದಶ ರುದ್ರರುಂ ದ್ವಾದಶಾದಿತ್ಯರುಮಷ್ಟ ವಸುಗಳುಮಶ್ವಿನೀ ದೇವರುಂ ಮೊದಲಾಗೆ ಮೂವತ್ತಮೂದೇವರುಂ ಇಂದ್ರಂ ಬೆರಸು ವೈಮಾನಿಕದೇವರುಂ ನೆರೆದು ಪಾಂಡುರಾಜನುಮಂ ಕುಂತಿಯುಮಂ ಪರಸಿ ಕೂಸಿಂಗೆ [5]ಜನ್ಮೋತ್ಸವಮಂ ಮಾಡಿ—

ಕಂ॥ ನೋಡುವನಾ ಬ್ರಹ್ಮಂ ಮುಂ।
ಡಾಡುವನಮರೇಂದ್ರನಿಂದ್ರನಚ್ಚರಸೆಯರೆ॥
ಟ್ಟಾಡುವರೆಂದೊಡೆ ಪೊಗೞ।
ಲ್ಕೇಡ ಗುಣಾರ್ಣವನ ಜನ್ಮದಿನದ ಬೆಡಂಗಂ ॥ ೧೪೮ ॥

ವ॥ ಅಂತು ಪಿರಿದುಮೊಸಗೆಯಂ ಮಾಡಿ ದೇವಸಭೆಯುಂ ಬ್ರಹ್ಮಸಭೆಯುಮೊಡನಿರ್ದು ನಾಮಕರಣೋತ್ಸವ ನಿಮಿತ್ತಂಗಳಪ್ಪ ನಾಮಂಗಳೊಳೀತಂ ಸಕಲ ಭುವನ ಸಂಸ್ತೂಯಮಾನಂ ಚಾಳುಕ್ಯವಂಶೋದ್ಭವಂ ಶ್ರೀಮದರಿಕೇಸರಿ ವಿಕ್ರಮಾರ್ಜುನನುದಾತ್ತನಾರಾಯಣಂ ಪ್ರಚಂಡಮಾರ್ತಾಂಡನುದಾರ ಮಹೇ

1. ತುಹಿನಕರ (ಕ.); 2. ಯೆಂಬಾರತಿಯುವ। ತರಿಸಿರೆ (ಕ.); 3. ಪೆರ್ಚಿ (ಕ.), ಯೊಳ್ (ಖ. ಘ.); 4. ಮುಂ (ಕ.); 5 ಜನ್ಮಕರಣೋ (ಖ. ಗ. ಘ.)

ಶ್ವರಂ *ಕದನತ್ರಿಣೇತ್ರಂ ಮನುಜ ಮಾಂಧಾತಂ ಪ್ರತಿಜ್ಞಾ ಗಾಂಗೇಯಂ ಶೌಚಾಂಜನೇಯನಕಳಂಕ ರಾಮಂ ಸಾಹ[1]ಸ ಭೀಮಂ ಪ್ರತ್ಯಕ್ಷ ಜೀಮೂತವಾಹನಂ ಜಗದೇಕಮಲ್ಲಂ ಪರಸೈನ್ಯ ಭೈರವಂ ಅತಿರಥ ಮಥನಂ* ವೈರಿಗಜಘಟಾ ವಿಘ[2]ಟನಂ ವಿದ್ವಿಷ್ಟ ವಿದ್ರಾವಣನರಾತಿ ಕಾಳಾನಳಂ ರಿಪುಕುರಂಗ ಕಂಠೀರವಂ ವಿಕ್ರಾಂತ ತುಂಗಂ ಪರಾಕ್ರಮ ಧವಳಂ ಸಮರೈಕ ಮೇರು ಶರಣಾಗತ ಜಲನಿಧಿ ವಿನಯ ವಿಭೂಷಣಂ ಮನುನಿ[3]ದಾನನನೂನ ದಾನಿ ಲೋಕೈಕ ಕಲ್ಪದ್ರುಮಂಗಜ[4] ಗಮ ರಾಜಪುತ್ರನಾರೂಢ ಸರ್ವಜ್ಞಂ ಗಂಧೇಭ ವಿದ್ಯಾಧರಂ ನೃಪ ಪರಮಾತ್ಮಂ ವಿಬುಧ ವನಜವನ ಕಳಹಂಸಂ ಸುರತ ಮಕರಧ್ವಜಂ ಸಹಜ ಮನೋಜಂ[5]ಆಂಧ್ರೀ ಕು[6]ಚ ಕಳಶ ಪಲ್ಲವಂ ಕರ್ಣಾ[7][ಟೀ] ಕರ್ಣಪೂರಂ ಲಾ[8]ಟೀ ಲಲಾಮಂ ಕೇರ[9]ಳೀ ಕೇಳಿ ಕಂದರ್ಪಂ ಸಂಸಾರಸಾರೋದಯಂ ಮ[10]ಱುವಕ್ಕದಲ್ಲಟಿಂ ನೋಡುತ್ತೆ ಗೆಲ್ವಂ ಪಾಣ್ಬರಂಕುಸಂ ಅಮ್ಮನ ಗಂಧವಾರಣಂ ಪಡೆಮೆಚ್ಚೆ ಗಂಡಂ [11]ಪ್ರಿಯಗಳ್ಳಂ ಗುಣನಿಧಿ ಗುಣಾರ್ಣವಂ ಸಾಮಂತಚೂಡಾಮಣಿಯೆಂದಿಂತಿವು ಮೊದಲಾಗೆ ಪಲವುಮಷ್ಟೋತ್ತರಶತನಾಮಂಗಳನಿಟ್ಟು ವಿಶೇಷಾಶೀರ್ವಚನಂಗಳಿಂ ಪರಸಿ—

ಉ॥ ಸಪ್ತ ಸಮುದ್ರ ಮುದ್ರಿತ ಧರಾತಳಮಂ ಬೆಸಕೆಯ್ಸು ವಿಾಱಿದು ।
ದ್ದೃಪ್ತ ವಿರೋಧಿ ಸಾಧನಮನಾಹವದೊಳ್ ತಱಿದೊಟ್ಟು ವಿಶ್ವ[12]ದಿ ॥
[ಗ್ವ್ಯಾಪ್ತ][13] ಯಶೋವಿಳಾಸಿನಿಗೆ ವಲ್ಲಭನಾಗು ನಿರಂತರಂ ಸುಖ ।
ವ್ಯಾಪ್ತಿಗೆ ನೀನೆ ಮೊತ್ತಮೊದಲಾಗರಿಕೇಸರಿ ಲೋಕಮುಳ್ಳಿನಂ ॥ ೧೪೯ ॥

ಇದು ವಿವಿಧ ವಿಬುಧಜನ ವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಪ್ರಥಮಾಶ್ವಾಸಂ

———

1. ಸಾಭರಣಂ (ಘ§.) ; 2. ಟ್ಟ (ಕ.) ; 3. ಧಾ (ಕ.ಖ.) ; 4. ಗಮನ (ಕ.) ; 5. ಆದ್ರಿ (ಖ.ಗ.ಘ.) ; 6. ಜ. (ಗ.) ; 7. ಟಕ (ಸ.) ; 8. ಟ (ಕ.) ; 9. ಳ (ಕ.) ; 10. ರೆ (ಖ.ಘ.) ; 11. ಪ್ರಗಳ್ಬಂ (ಕ.) ; 12. ವಿ। ಶ್ವಾಪ್ತಿ (ಕ.ಖ.), ದಿ। ವ್ಯಾಪ್ತಿ (ಗ.ಘ.) ; 13. ವಿಳಾಸಿನೀ ವಧುಗೆ (ಕ.ಖ.ಗ.ಘ.).

**ಈ ಭಾಗವು ಕ.ಖ. ಪ್ರತಿಗಳಲ್ಲಿಲ್ಲ.

# ದ್ವಿತೀಯಾಶ್ವಾಸಂ

ಕಂ॥ ಶ್ರೀಗಗ[1]ಲುರಮಂ ಕೀರ್ತಿ।
ಶ್ರೀಗೆ ದಿಗಂತಮುಮನಹಿತರಂ ಗೆಲ್ವ ಜಯ॥
ಶ್ರೀಗೆ ಭುಜಶಿಖರಮಂ ನೆಲೆ।
ಯಾಗಿಸಿ ನೀಂ ನೆಲಸು ನೇಸಱುಳ್ಳಿನಮಱಿಗಾ ॥ ೧ ॥

ಎಂಬ ಪರಕೆಗಳ ರವದೊಳ್।
ತುಂ[2][ಬೆ] ನಭೋ ವಿವರಮುಮ[3]ರ ಮುನಿಜನಮುಮರೇಂ॥
ದ್ರಂ ಬೆರಸು ತಳರ್ದುದಾದುದ।
ಳುಂಬಂ ಮನದೊಸಗೆ ಕುಂತಿಗಂ ತತ್ಪತಿಗಂ ॥ ೨ ॥

ವ॥ ಅಂತು ಗುಣಾರ್ಣವನ ಪುಟ್ಟಿದೊಸಗೆಯೊಳೊಸ[4]ಗೆ ಮಱುಳ್ಗೊಂಡು ಕುಂತಿಯುಂ ಪಾಂಡುರಾಜನುಮಿರೆ ಮಾದ್ರಿ ತನಗೆ ಮಕ್ಕಳಿಲ್ಲದುದರ್ಕೆ ವಿರಕ್ತೆಯಾಗಿ ಪೊಸೆದು ಬಿಸುಟ ರಕ್ತಾಶೋಕ ಪಲ್ಲವದಂತೆ ಕರಂ ಕೊರಗಿ ಚಿಂತಿಸುತಿರ್ದೊಡಾಕೆಯ [5]ಬಿನ್ನನಾದ ಮೊಗದಂದಮಂ ಕಂಡು ಕುಂತಿ ಕರುಣಿಸಿ ಪುತ್ರೋತ್ಪತ್ತಿ ನಿಮಿತ್ತಂಗಳಪ್ಪ ಮಂತ್ರಾಕ್ಷರಂಗಳನುಪದೇಶಂಗೆಯ್ದೊಡಾಕೆಯುಂ ತದುಕ್ತ ಕ್ರಿಯೆ[6]ಯೊಳಂ ನಿಯಮ ನಿಯಮಿತೆಯಾಗಿ—

ಕಂ॥ [7]ಆಹ್ವಾನಂ ಗೆಯ್ದಶ್ವಿನಿ।
ದೇವರನವರಿತ್ತ ವರದೊಳವರಂಶಮೆ ಸಂ॥
ಭಾವಿಸೆ ಗರ್ಭದೊಳಮಳರ।
ನಾ ವನಜದಳಾಕ್ಷಿ ಪಡೆದು ಸಂತತಿವೆತ್ತಳ್ ॥ ೩ ॥

ವ॥ ಆಗಳಾ ಪಾಂಡುರಾಜನಾ ಕೂಸುಗಳ್ಗೆ ಜಾತಕರ್ಮಮಂ ಮುನಿಗಳಿಂ ಬಳೆಯಿಸಿ ನಕುಲ ಸಹದೇವರೆಂದವರ್ಗೆಮಳ್ವೆಸರನಿಟ್ಟು ಪುತ್ರ ಸಂಪೂರ್ಣ ಮನೋರಥನಾಗಿರ್ಪಿನಮಯ್ವರ್ ಕೂಸುಗಳುಮೇೞ್ಗೆವಾಡಿವದ ಚಂದ್ರನಂತುತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ ಭರತಕುಲಕ್ಕೆ ವಿಶದ ಯಶೋಂಕುರಂಗಳುಂ ಬಂಧುಜನಕ್ಕೆ ಪುಣ್ಯಾಂಕುರಂಗಳುಂ ವಂದಿಜನಕ್ಕೆ ಕಲ್ಪವೃಕ್ಷಾಂಕುರಂಗಳುಮರಾತಿಜನಕ್ಕೆ ಕಾಳಕೂಟಾಂಕುರಂಗಳುಮಂ ಪೋಲ್ತು ಪಂಚಾಂಗ ಮಂತ್ರ[ಂ] ಸ್ವರೂಪದೊಳ್ ಮೂರ್ತಿಮಂ[8][ತ]ಂಗಳಾದಂತೆ ಸೊಗಯಿಸಿ ಬಳೆಯೆ—

---

1. ಲ್ದು (ಕ.); 2. ಬಿ (ಸ.); 3. ರೆ (ಸ.); 4. ಗೆಗೆ (ಕ.); 5. ಖಿನ್ನವಾದ (ಕ.); 6. ಗಳಿಂ ನಿಯಮಿತೆ (ಕ.ಪ.); 7. ಆವಾಹನೆ (ಕ.); 8. ತ್ರಂ (ಸ.).

ಕಂ|| ತೊಡರ್ದಮರ್ದ ಬಾಳವಣ್ಣದ |
ತುಡುಗೆ ಪಳಂಚಲೆವ ಪಂಚ ಜಡೆ ನೊಸಲೊಳೊಡಂ ||
ಬಡುವರಳಿಲೆಯಿವಱಿಂ ಚೆ |
ಲ್ವಿಡಿದಿರ್ದುದು ಬಾಳ ಕೇಳಿ ಧರ್ಮಾತ್ಮಜನಾ || ೪ ||

ವ|| ಅಂತಾತಂ ಬಳೆಯೆವಳೆಯೆ—

ಕಂ|| ನಡೆವ ತಳರ್ನಡೆಯೊಳ್ ಪುಡಿ |
ವುಡಿಯಾದುವು ಶಿಲೆಗ[1]ಳೊಡೆದು ಕರಿಗಳ್ ಭೀಮಂ ||
ಪಿಡಿದಡರ್ದೊಡೆ ಬಾಯ್ವಿಟ್ಟೆ |
ಲ್ವಡಗಾದುವು ಮುದ್ದದಂತು ಸೊಗಯಿಸವೇಡಾ || ೫ ||

ಮುನಿ[2]ವನ[3]ಮನೆ ಬಿಸುಟುವು ಮುಂ |
ಮುನಿಯುರ ಸೋಂಕಿ[4]ಲೊಳೆ ಬಳೆದ ಸಿಂಗಂಗಳ್ ಮು ||
ದ್ದಿನೊಳಡರ್ವ ಪಿಡಿವ ಗುರ್ದುವ |
[5]ಮನೆಗೆಟ್ಟ[3]ವನಿತರ್ಕಮಲಸಿ ಮರುದಾತ್ಮಜ[6]ನಾ || ೬ ||

ವ|| ಅಂತಾತಂ ಬಳೆಯೆ—

ಕಂ|| ಬೇಡದುದಂ ಬೇಡುವ ಪುಡಿ |
ಯಾಡುವ ತೊದಳೊದವೆ ನುಡಿವ ನಗಿಸುವ ಬಾಲ ||
ಕ್ರೀಡೆ ಮುರಾರಿಯ ಬಾಲ |
ಕ್ರೀಡೆಯನನುಕರಿಪುದಾದುದರಿಕೇಸರಿಯಾ || ೭ ||

ಪರೆದಡರ್ದ ಧೂಳಿ ಕಿಱುನಗೆ |
ವೆರ[7]ಸಿದ ತೊದಳೊದವೆ ನುಡಿವ ನುಡಿ ನಗೆಮೊಗದೊಳ್ ||
ಪರಕಲಿಸಿದ ಕಾಡಿಗೆವೆರ |
ಸರಿಕೇಸರಿ ತಾಯ ಮನಮನಿಟ್ಟಳಿಗೊಂಡಂ || ೮ ||

ಒಗೆತರ್ಪ ಪಲ್ಗಳಾ ನಗೆ |
ಮೊಗದ ಸರಸ್ವತಿಯನಾಗಳರ್ಚಿಸಿದ ಪೊದ ||
[8]ಳ್ದಗಲದ ಚೆಲ್ವಿನ ಮೊಲ್ಲೆಯ |
ಮುಗುಳ್ಗಳನಿಳಿಸಿರೆ ಗುಣಾರ್ಣವಂ ಸೊಗಯಿಸಿದಂ || ೯ ||

---

1. ಳುಡಿ (ಘ.); 2. ಜ (ಕ.ಖ.ಘ.); 3. ಮನೆಯೊಳಗಾದುವು (ಕ.ಖ.ಘ.); 4. ನೊ (ಕ.ಖ.); 5. ನನುವಿಗೆ ತರ್ಪೊಂದು ಕಲಿಕೆ (ಕ.ಖ.); 6. ನೊಳ್ (ಕ.ಖ.ಗ.); 7. ಸು ತೊದಳ್ನುಡಿವ ನುಡಿಯ (ಕ.ಖ.ಗ.); 8. ಟ್ವಿ (ಕ.).

ಕಂ॥ ಕರಿಕಳಭಂಗಳ ಶಿಶು ಕೇ।
ಸರಿಗಳ ಬೞಿಯಂ ತಗುಳ್ದು ಬಡವುಗಳನವಂ॥
ತಿರಿಪಿ ಪಿಡಿಯುತ್ತುಮರಿಗಂ।
ಪರಿದಾಡುವ [1]ಸಮವಯ[ಸ್ಕರೊ]ಳ್ ಸೊಗಯಿಸಿದಂ ॥೧೦॥

ದೆಯ್ವ ಬಲಂ ಸೊಗ[2]ಸಿಕೆ ಮುಂ।
ಗೆಯ್ವ ಬಲಂ ಬಾಳ ಕಾಲದೊಳ್ ತೊಡರ್ದ ಪೊಡ॥
ರ್ದಯ್ವರ ಬಾಲಕ್ರಿಯೆಯುಂ।
ಮುಯ್ವಂ ನೋಡಿಸಿತು ತಾಯುಮಂ ತಂದೆಯುಮಂ ॥೧೧॥

ವ॥ ಅಂತಾ ಕೂಸುಗಳ್ ನಿಜ ಜನನೀ ಜನಕರ ಮನಮನಿಟ್ಟುಕೞಿಗೊ[3]ಳಿಸಿಯು ಮರಾತಿಜನಂಗಳ ಮನಮನಸುಂಗೊಳಿಸಿಯುಂ ಬಳೆಯೆ ಬಳೆಯೆ—

ಚಂ॥ ಅಲರ್ದದಿರ್ಮುತ್ತೆ ಪೂತ ಪೊಸ ಮಲ್ಲಿಗೆ ಕಂಪನವುಂಕುತಿರ್ಪ ತೆಂ।
ಬೆಲ[4]ರು[ವಿದ]ಂ ಗೆಲಲ್ಬಗೆವ ತುಂಬಿಗಳ ಧ್ವನಿಯಿಂ ಕುಕಿಲ್ವ ಕೋ॥
ಗಿಲೆ ನನೆದೋಱಿ ನುಣ್ಪೆಸೆವ ಮಾಮರನೊರ್ಮೊದಲಲ್ಲದುಣ್ಮುವು।
ಯ್ಯಲ ಪೊಸಗಾವರಂ ಪುಗಿಲೊಳೇನೆಸೆದತ್ತೊ ಬಸಂತ ಮಾಸದೊಳ್ ॥೧೨॥

ವ॥ ಆಗಳಾ ಬಸಂತರಾಜನ ಬರವಿಂಗೆ ಗುಡಿಗಟ್ಟಿದಂತೆ ಬಳ್ವಳ ಬಳೆದ ಮಿಳಿರ್ದಶೋಕೆಯ ತಳಿರ್ಗಳುಮಾತನ ಬರವಿಂಗೆ ತೋರಣಂಗಟ್ಟಿದಂತೆ ಬಂದ ಮಾಮರಂಗಳನಡರ್ದು ತೊಡರ್ದೆಳಗೊಂಬುಗಳ್ವಿಡಿದು ಮರದಿಂ ಮರಕ್ಕೆ ದಾಂಗುಡಿವಿಡುವ ಮಾಧವೀ ಲತೆಗಳುಮಾತನ ಬರವಿಂಗೆ ನೆಱೆಯೆ ಸೊಗಯಿಸೆ ಕೆಯ್ಗೆಯ್ವ ನಲ್ಲಳಂತೆ ನನೆಯ ಬಿರಿಮುಗುಳ್ಗಳ ತುಱುಗಲೊಳೆಱಗಿ ತುಱುಗಿದ ಕಲ್ಪಲತೆಗಳುಮಾತನ ಬರವಿಂಗೆ ಬದ್ದವಣಂ ಬಾಜಿಪಂತೆ ಭೋರ್ಗರೆದು ಮೊರೆವ ತುಂಬಿಗಳುಮಾತನ ಬರವಿಂಗೆ ರಂಗವಲಿಯಿಕ್ಕಿದಂತೆ ಪುಳಿನ ಸ್ಥಳಂಗಳೊಳುದಿರ್ದ ಕಱಿವೂಗಳುಮಾತನ ಬರವಿಂಗೆ ವನ ವನಿತೆ ಮೆಚ್ಚಿ ನೆಱೆಯೆ ಕೆಯ್ಗೆಯ್ದಂತೆ ನಿಱಿನಿಱಿಗೊಂಡು ಸೊಗಯಿಸುವ ನಿಱಿಗನ ನಿಱಿದಳಿರ ಗೊಂಚಲ್ಗಳುಮಾತನ ಮೇಲ್ವಾಯೆ ರಾಗಿಸಿ ರೋಮಾಂಕುರಮೊಗೆದಂತೊಗೆದ ಕಳಿಕಾಂಕುರಂಗಳುಮಾತನಂಗಸಂಗದೊಳ್ ಕಾಮುರಸಮುಗುವಂತುಗುವ [5]ಸೊನೆಯ ಸೋ[6]ನೆಗಳುಮನೊಳಕೊಂಡು ತದಾಶ್ರಮುಪನಂದನ ವನಂಗ[7][ಳ್] ಜನಂಗಳನನಂಗಂಗೆ ತೊೞ್ತುವೆಸಂಗೆಯ್ಸಿದುವು—

1. ಸಮಯ ವಯಸದೊಳ್ (ಕ.ಖ.), ವಯಸದೊಳ್ (ಗ.ಘ.); 2. ಯಿಸೆ (ಕ.), ಯಿಕೆ (ಗ.); 3. ಳಿಯು (ಖ.ಘ.); 4. ರುವಿವಂ (ಕ.), ರಸಿವಂ (ಖ.ಘ.): 5. ಸೋಗೆಯ (ಕ.), ಸೊಗೆಯ (ಖ.ಗ.ಘ.); 6, ಗೆ (ಕ.); 7. ಳಸಂಗಂಗೆ (ಕ.), ಳನನಂಗಂಗೆ (ಖ.).

ಚಂ॥ ಬಿರಯಿಯ ವಿೞ್ತು[1][ವೆ]ಂ ವಿದಿದೊಡಲ್ಲದಣಂ ಪುಳಿಸಾಱದೆಂದು ಪ।
ಲ್ಮೊರೆದಪನಿಲ್ಲಿ ಮನ್ಮಥನಿದಂ ಪುಗ[2]ಲಿಂ ಗ[3]ಡಿಮೆಂದು ಜೇಟಕಾ॥
ಱರನಿರದೂಱೆ ಸಾಱೆ ಜಡಿವಂತೆಸೆಗುಂ ಸಹಕಾರ ಕೋಮಳಾಂ।
ಕುರ ಪರಿತುಷ್ಟ ಪುಷ್ಟ ಪರಪುಷ್ಟ ಗಳಧ್ವನಿ ನಂದನಂಗಳೊಳ್ ॥೧೩॥

ಕವಿವ ಮದಾಳಿಯಿಂ ಮುಸುಳನಾಗಿ ಪಯೋಜರಜಂಗಳೊಳ್ ಕವಿ।
ಲ್ಗವಿಲನುವಾಗಿ ಬಂದ ಮಲಯಾನಿಲ[4]ನೂದೆ ತೆರಳ್ವ ಚೂತ ಪ॥
ಲ್ಲವದ ತೆರಳ್ಕೆ ತದ್ವನ ವಿಳಾಸಿನಿಯುಟ್ಟ ದುಕೂಲದೊಂದು ಪ।
ಲ್ಲವದ ತೆರಳ್ಕೆಯಂತೆಸೆಯೆ ಕಣ್ಗೆಸೆದಿರ್ದುವು ನಂದನಾಳಿಗಳ್ ॥೧೪॥

ಉ॥ ಪೋಗದೆ ಪಾಡುತಿರ್ಪಳಿಯೆ ಬೃಂಹಿತಮಾಗಿರೆ ಚಂದ್ರಕಾಂತಿ ಕಾ।
ಯ್ಪಾಗಿರೆ ಬೀಸುವೊಂದೆಲರೆ ಬೀ[5]ಸುವುದಾಗಿರೆ ಕಾಯ್ಗಳಿಂದಮಿಂ॥
ಬಾಗಿರೆ ಸೋರ್ವ ಸೋನೆ ಮದಮಾಗಿರೆ ಪೂವಿನ ಬಂದ ಕೋಡೆ ಕೋ।
ಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ ॥೧೫॥

ವ॥ ಅಂತು ಬಂದ ಬಸಂತದೊಳ್ ಮಾದ್ರಿ ತಾಂ ಗರ್ವ[6]ವ್ಯಾಲೆಯುಂ ಕ್ರೀಡಾನುಶೀಲೆಯುಮಪ್ಪುದಱಿಂ ವನಕ್ರೀಡಾ ನಿಮಿತ್ತದಿಂ ಪೋಗಿ—

ಚಂ॥ ವನ ಕುಸುಮಂಗಳಂ ಬಗೆಗೆವಂದುವನೞ್ತಿಯೊಳಾಯ್ದು ಕೊಯ್ದು ಮೆ।
ಲ್ಲನೆ ವಕುಳಾಳವಾಳ ತಳದೊಳ್ ಸುರಿದಂಬುಜಸೂತ್ರದಿಂದೆ ಮ॥
ತ್ತನಿತಱೊಳಂ ಮುಗುಳ್ಸರಿಗೆ ತೋಳ್ಪಳಿ ಕಂಕಣಹಾರಮೆಂದು [7]ಬೇ।
ಟ್ಪನಿತನೆ ಮಾಡಿ[8]ತೊಟ್ಟು ಕರಮೊಪ್ಪಿದಳಾಕೆ ಬಸಂತ ಕಾಂತೆವೋಲ್॥೧೬॥

ವ॥ ಅಂತು ತೊಟ್ಟ ಪೂದುಡುಗೆ ಮದನನ ತೊಟ್ಟ ಪೂಗಣೆಗೆಣೆಯಾಗಿರೆ—

ಚಂ॥ ಮಿಳಿರ್ವ ಕುರುಳ್ಗಳೊಳ್ ತೊಡರ್ದು ದೇ[9]ಸಿಯನಾವಗಮಿಾವ ಚೆನ್ನ ಪೂ।
ಗಳನವನೊಯ್ಯನೋಸರಿಸುತುಂ ವದನಾಬ್ಜದ ಕಂಪನಾಳ್ದುಣಲ್॥
ಬಳಸುವ ತುಂಬಿಯಂ ಪಿಡಿದ ನೆಯ್ದಿಲೊಳೊಯ್ಯನೆ ಸೋವುತುಂ ಬೆಡಂ।
ಗೊಳಕೊಳೆ ಸೊರ್ಕಿದಂಗಜ ಮತಂಗಜದಂತಿರೆ ಬರ್ಪ ಮಾದ್ರಿಯಂ॥೧೭॥

ವ॥ ತಾಪಸಾಶ್ರಮದಿಂ ಪೊಱಮಟ್ಟಂತೆ ಬನಮಂ ತೊೞಲ್ವ ಪಾಂಡುರಾಜಂ[10] ಕಂಡು—

ಚಂ॥ ಸೊಗಯಿಸೆ ತೊಟ್ಟ ಪೂದುಡುಗೆ ಮೆಲ್ಲೆರ್ದೆಯೊಳ್ ತಡಮಾಡೆ ಗಾಡಿ ದಿ।
ಟ್ಟಿಗಳೊಳನಂಗರಾಗರಸಮುಣ್ಮುವಿನಂ ನಡೆ ನೋಡಿ ನೋ[illegible]॥

1. ವ (ಸ.); 2. ದಿಂ (ಗ.); 3. ಡ (ಕ.); 4. ನೋಡೆ (ಖ.ಘ.), ನೋಡಿ (ಗ); 5. ಗು (ಪ.); 6. ವ್ಯಾಲೋಲೆ (ಕ.); 7. ಚೆಲ್ವ (ಕ. ಖ. ಗ.); 8. ಬಂದು (ಕ. ಖ. ಗ. ಘ.); 9. ಸೆ (ಖ. ಘ.); 10. ಮಾದ್ರಿಯಂ ಕಂಡು (ಸ.).

ಟ್ಟಗೆ ಕೊಳೆ ಮೇಲೆ ಪಾಯ್ದವಳನಪ್ಪಿದನಾ ವಿಭು ತನ್ನ ಶಾಪಮಂ।
ಬಗೆಯದೆ [1]ಮಿಟ್ತುದೇವತೆಯನಟ್ಕಱಿಳುರ್ಕೆಯಿನಪ್ಪುವಂತೆವೋಲ್ ॥೧೮॥

ವ॥ ಅಂತಪ್ಪುವುದುಂ [2]ವಿಷಮ ವಿಷ[3]ವಲ್ಲಿಯನಪ್ಪಿದಂತೆ ತಳ್ತ ನಲ್ಲಳ ಮೃದು ಮೃಣಾಳ ಕೋಮಳ ಬಾಹುಪಾಶಂಗಳೆ ಯಮಪಾಶಂಗಳಾಗೆ—

ಚಂ॥ ಬಿಗಿದಮರ್ದಿರ್ದ ತೋಳ್ ಸಡಿಲೆ ಜೋಲೆ ಮೊಗಂ ಮೊಗದಿಂದ
ಮೊಯ್ಯಗೊ।
ಯ್ಯಗೆ ನಗೆಗಣ್ಗಳಾಲಿ [4]ಮುಗುಳ್ದಂ[5]ತಿರೆ ಮುಚ್ಚಿರೆ ಸುಯ್ಯಡಂಗೆ ಮೆ॥
ಲ್ಲಗೆ ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊ।
ಟ್ಟಗೆ ಕೊಳೆ ನೋಡಿ ಕೆಟ್ಟೆನಿನಿಯಂ ಮಱಸೊಂದಿದನೋ ಬೞಲ್ದನೋ ॥೧೯॥

ವ॥ ಎಂದು [6]ಪಱಿಪಟ್ಟ ಸುಯ್ಯುಮಂ ಕೋಡುವ ಮೆಯ್ಯುಮಂ ಕಂಡು ಪರಲೋಕ ಪ್ರಾಪ್ತನಾದುದನಱಿತು—

ಕಂ॥ ತಾಪಸನ ಶಾಪಮೆಂಬುದು
ಪಾಪದ ರೂಪಱಿತುಮಱಿಯದಂತೇಕೆ ಮನಂ॥
ಗಾಪಟಿದು ಬಂದು ಮುಟ್ಟಿದೆ।
ಯೋಪನೆ ನೀನೆನ್ನ ಪಾಪಕರ್ಮಿಯ ಮೆಯ್ಯಂ ॥ ೨೦ ॥

ನೀನ್ನಿನ್ನ ಸಾವನದ[7]ನೆನ।
ಸುನ್ನೆನೆಯದೆ ನೆರೆವೆನೆಂಬ ಬಗೆಯೊಳ್ ಬಂದೈ॥
ನಿನ್ನೊಡನೆ ವಂದು ದಿವದೊಳ್।
ನಿನ್ನ ಮನೋರಥಮನರಸ ನೆಱಪದೆ ಮಾಣೆಂ ॥ ೨೧ ॥

ಉನ್ನತ ಧವಳಚ್ಛತ್ರ।
ಚ್ಛನ್ನ ವಿಯತ್ತಳನನಿಂದುಕುಳತಿಳಕನನಿಂ॥
ತನ್ನೆಯದಿಂದೀ ಪಟುವಿನೊ।
ಳಿನ್ನರಸನ[8]ನಿಂತು ಬಿದಿಯೆ [9]ತಂದಿಕ್ಕುವುದೇ ॥ ೨೨ ॥

ವ॥ ಎಂದು ವನದೇವತೆಗಳ್ಗೆಲ್ಲಂ ಕರುಣಮಾಗೆ ಪಳಯಿಸುವ ಮಾದ್ರಿಯ ಸರಮಂ ಕುಂತಿ ಕೇಳ್ದು ಭೋಂಕನೆರ್ದೆದೆಱೆದು—

---

1. ಮೃತ್ಯು (ಕ.); 2. ವಿಷಮ (ಕ.ಖ. ದಲ್ಲಿಲ್ಲ); 3. ಮ (ಖ.ಗ.ಘ.); 4. ಮು (ಪ.); 5. ತ (ಪ.); 6. ನೋಡಿ ಪರಿಪಟ್ಟ (ಸ.); 7. ನಿ (ಕ.); 8. ನಿತ್ರ (ಕ.), ನಿತ್ತು (ಖ.), ನಿಂಮ (ಗ.); 9. ವಂ (ಖ.), ಕೊಂ (ಘ§.).

ಕಂ॥ ಆ ದೆಸೆ[1]ಯೊಳ್ ಭೂಭುಜನೋ।
ಆ ದೆಸೆ[1]ಯೊಳ್ ಮಾದ್ರಿ ನೆಗೆವ ಕರುಣಾ ರವಮಂ॥
ತಾ ದೆಸೆ[1]ಯೊಳ್ ಭೂಪತಿಗೇ।
ನಾದುದೊ ಪೇೞಿಮ್ ಬಿದಿಯೆ ಕೆಟ್ಟೆನೞಿದೆನೆನುತ್ತುಂ ॥ ೨೩॥

ಬೞಿಯನೆ ಮಕ್ಕಳ್ ಭೋರ್ಗರೆ।
ದೞುತುಂ ಪೆಱ ಪೆಱಗನಂತೆ ಪರಿತರೆ ಮುಡಿ ಬಿ॥
ಟ್ಟಿಲೆ ನಡು ನಡುಗೆ ಕಣ್ಣೀರ್।
ಗೞಗೞ[2]ನೊರ್ವೊರ್ದಲೆ ಸುರಿಯೆ ಪರಿತಂದಾಗಳ್ ॥ ೨೪॥

ವ॥ ಅಂತು ತನ್ನ ನಲ್ಲನ ಕಳೇವರಮಂ ತೞ್ಕೈಸಿಕೊಂಡು ತನ್ನ ಸಾವಂ ಪರಿಚ್ಛೇದಿಸಿ ಪಲ್ಲಂ ಸುಲಿಯುತ್ತುಮಿ[3]ರ್ದ ಮಾದ್ರಿಯಂ ಕಂಡು ಕುಂತಿ ನೆಲದೊಳ್ ಮೆಯ್ಯನೀಡಾಡಿ ನಾಡಾಡಿಯಲ್ಲದೆ ಪಳಯಿಸಿ—

ಕಂ॥ ಅಡವಿಯೊಳೆನ್ನುಮನೆನ್ನೀ।
ನಡಪಿದ ಶಿಶುಗಳುಮನಿರಿಸಿ ನೀಂ ಪೇೞದೆ ಪೋ॥
ದೊಡಮೇನೊ ನಿನ್ನ ಬೞಿಯನೆ।
ನಡೆತರ್ಪೆಂ ನಿನ್ನರಸ ಬಿಸುಟೆಂತಿರ್ಪೆಂ ॥ ೨೫॥

ವ॥ ಎಂದು ನೀನೀ ಕೂಸುಗಳಂ ಕೈಕೊಂಡು ನಡಪು ನಲ್ಲನನೆನಗೊಪ್ಪಿ ಸಾನಾತನಾದುದನಪ್ಪೆನೆನೆ ಮಾದ್ರಿಯಿಂತೆಂದಳ್—

ಕಂ॥ ಎನಗಿಂದಿನೊಂದು ಸೂೞುಮ।
ನಿನಿಯಂ ದಯೆಗೆಯ್ದನೆನ್ನ ಸೂೞಂ ನಿನಗಾ॥
ನೆನಿತಾದೊಡಮೀವೆನೆ [4]ಮ।
ತ್ತನಯರ್ [5]ಕೆಯ್ಯೆಡೆ ಪಲುಂಬದಿರ್ ಪೆಱಪೆಱವಂ ॥ ೨೬॥

ವ॥ ಎಂದು ತಪೋವನದ ಮುನಿಜನಮುಂ ವನದೇವತಾ ಜನಮುಂ ತನ್ನಣ್ಮಂ ಪೊಗೞೆ[3] ಮಾದ್ರಿ ಪಾಂಡುರಾಜನೊಡನೆ [6] ದಾಹೋತ್ತರದಂತೆ (?) ಕಿ[7]ರ್ಚಿಂಗೆಕುಲದೊಳಂ ಚಲದೊಳಮಾ[8][ವ] ಕಂದುಂ ಕುಂದುಮಿಲ್ಲದೆ ತನ್ನೊರೆಗಂ ದೊರೆಗಮಾರುಮಿಲ್ಲೆನಿಸಿದಾಗಳ್ ಕುಂತಿ ಶೋಕಾಕ್ರಾಂತೆಯಾಗಿರೆ ತಪೋವನದ ತಪೋವೃದ್ಧರಾ ಕಾಂತೆಯನಿಂತೆಂದು ಸಂತೈಸಿದರ್—

ಚಂ॥ ಕೞಿದವರ್ಗಟ್ಟಿದೞ್ತೊಡವರೇೞ್ವೊಡಮಂತವರಿಂ ಒೞಕ್ಕೆ ತಾ।
ಮುೞಿವೊಡಮೇೞರಂತವರಣಂ ತಮಗಂ ಬರ್ದುಕಿಲ್ಲ ಧರ್ಮಮಂ॥

---

1. ಯದೆ (ಕ. ಖ. ಗ.); 2. ನೆದ್ರೊರ್ದವೆ (ಘ.); 3. ಪ್ರ್ಪ (ಕ. ಖ.); 4. ತ. (ಕ.)' ತು (ಖ.); 5. ಕೆಯ್ಗಿಡೆ (ಕ.); 6. ಡಾ (ಖ. ಗ. ಘ.); 7. ರ್ಚಿಂಪುಗೆ (ಪ.); 8. ದ(ಸ.).

ಗಱಿಯಿಸಿಕೊಳ್ವುದೊಂದೆ ಚದುರಿಂತುಟು ಸಂಸೃತಿ ಧರ್ಮಮೇಕೆ ಬಾ।
ಯಱಿವುದಿದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ॥ ೨೭ ॥

ವ॥ ಅಂತುಮಲ್ಲದೆ—

ಕಂ॥ ಬಿಡದ[1]ಟಿಲ್ವ ಬಂಧುಜನದೊ।
ಳ್ಕುಡಿಯುದ ಕಣ್ಣೀರ ಪೂರಮಾ ಪ್ರೇತಮನೋ॥
ಗಡಿಸದೆ ಸುಡುವುದು ಗಡಮಿ।
ನ್ನುಡುಗುವುದೀ ಶೋಕಮಂ ಸರೋಜದಳಾಕ್ಷೀ ॥ ೨೮ ॥

ವ॥ ನೀನಿಂತು ಶೋಕಾಕ್ರಾಂತೆಯಾಗಿ ಸಂಸಾರ ಸ್ಥಿತಿಯನಱಿಯದಜ್ಞಾನಿಗಳಂತೆ ವಿಪ್ರಳಾಪಂಗೆಯ್ದೆಯಪ್ಪೊಡೀ ಕೂಸುಗಳ್ ಮನಮಿಕ್ಕಿಯುಮೆರ್ದೆಯಿಕ್ಕಿಯುಂ ಕಿಡುವರೆಂದನೇಕೋಪಶಾಂತವಚನಂಗಳಿಂದಮಾಕೆಯುಬ್ಬೆಗಮನಾಱಿನುಡಿದುಮಲ್ಲಿಯ ಮುನಿಜನಮೆಲ್ಲಮಾ ಕೂಸುಗಳುಮಂ ಕುಂತಿಯುಮಂ ಮುಂದಿಟ್ಟೊಡಗೊಂಡು ನಾಗಪುರಕ್ಕೆ ವಂದು ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗಮಂಬಾಲೆಗಂ ಪಾಂಡುರಾಜನ ವೃತ್ತಾಂತಮನಱಿಪಿದೊಡಾಗಳ್—

ಕಂ॥ ತುಱುಗಿದ ಹಿಮಬಿಂದುಗಳಿಂ।
ದೆಱಗಿದ ನವ ವನಜವನದವೋಲ್ ಶೋಕದಿನಂ॥
ದೊಱೆವ ನಯನೋದಬಿಂದುವಿ।
ನೆಱಗಿದಃದೊರ್ಮೊದಲೆ ಬಂಧುಮುಖ ವನಜವನಂ ॥ ೨೯ ॥

ವ॥ ಆಗಳ್ ಪುತ್ರ ಸ್ನೇಹದಿಂದತಿ ಪ್ರಳಾಪಂಗೆಯ್ವಂಬಾಲೆಯುಮಂ ಬಂಧುಜನ ನಿರೀಕ್ಷಣದಿಂ ಶೋಕಂ ಮಱು[2]ಕಣಿಸೆ ಬಾಯಱಿದು ಪಳಯಿಸುವ ಕುಂತಿಯುಮಂ ಗಾಂಗೇಯ ಧೃತರಾಷ್ಟ್ರ ವಿದುರರ್ಕಳುಮಂ ಸತ್ಯವತೀದೇವಿಯುಮಂ ಸಂತೈಸಿ ಪಾಂಡುರಾಜಂಗೆ ಜಳದಾನಾದಿಕ್ರಿಯೆಗಳಂ ನಿರ್ವರ್ತಿಸಿ ತದನಂತರದೊಳದುವೆ ನಿರ್ವೇಗಮಾಗೆ ವ್ಯಾಸವಚನದೊಳ್ ಸತ್ಯವತಿಯುಮಂಬಿಕೆಯುಮಂಬಾಲೆಯುಂ ಸಂಸಾರವಿಶೀರ್ಣೆಯರಾಗಿ ಮುನಿವನಮನಾಶ್ರಯಿಸಿದರಿತ್ತ ಗಾಂಗೇಯನಯ್ವರ್ ಕೂಸುಗಳುಮಂ ತನ್ನ ತೊಡೆಯೆ ತೊಟ್ಟಿಲಾಗಿ ನಡಪುತ್ತುಮಿರೆ ದುರ್ಯೋಧನ ಪ್ರಭೃತಿಗಳ್ ನೂರ್ವರುಂ ಧರ್ಮಪುತ್ರಾದಿಗಳಯ್ವರುಂ ಸಹಪಾಂಸುಕ್ರೀಡಿತರಾಗಿ—

ಕಂ॥ ಒಡನಾಡಿಯುಮೊಡನೋದಿಯು।
ಮೊಡವಳೆಮಂ ಗುಳ್ಳೆಗೊಟ್ಟೆ ಬಟ್ಟುಳಿಸೆಂಡುಂ॥
ಪೊಡೆಸೆಂಡೆಂಬಿವನಾಡು।
ತ್ತೊಡವಳೆದರ್ ತಮ್ಮೊಳೆಳಸೆ ತಂಕಂಗೆಡೆಗಳ್ ॥ ೩೦ ॥

1. ಟ್ವಿ (ಪ.); 2. ಕೊಳಸೆ (ಪ.).

ವ॥ ಅಂತಾ ಕೂಸುಗಳ್ ಕೂಸಾಟವಾಡುತ್ತಿರ್ದೊಂದು ದಿವಸಂ ಮರಗೆರಸಿಯಾಡಲೆಂದು ಮುಂದೆ ತಮ್ಮ ಪಗೆ ಪರ್ವುವಂತೆ [1]ಪನ್ನಿರ್ಮತ್ತರ್ ಪರ್ವಿದಾಲದ ಮರದ ಮೊದಲ್ಗೆ ವಂದು ಭೀಮನಂ [2]ಮಱಿ[3]ಮಾಡಿ ಕೋಲನೀಡಾಡಿ ಪಲವು ಸೂೞ್ ಕಾಡಿ—

ಕಂ॥ ಪರಿದನಿಬರುಮೊಡನಡರ್ದಿರೆ।
ಮರನಂ ಮುಟ್ಟಲ್ಕೆ ಪಡೆಯದನಿಬರ್ಗಂ ಕಿಂ॥
ಕಿರಿವೋಗಿ ಭೀಮಸೇನಂ।
ಮರನಂ ಪಿಡಿದ[2]ಲ್ಗೆ ಪಣ್ಬೊಲನಿಬರುಮುದಿರ್ದರ್ ॥೩೧॥

ವ॥ ಅಂತು ಬಿೞ್ದು ಸುಲಿದ ಮೊೞಿಕಾಲ್ಗಳುಂ ಕೞಿಲ್ದ ಪಲ್ಗಳು[4]ಮೆಲ್ಬಡಗಾದ ಮೆಯ್ಗಳುಮುಡಿದ ಕೆಯ್ಗಳುಮಾಗಿ ಬೆರಸೞುತ್ತುಂ ಬಂದು ಗಾಂಗೇಯ ಧೃತರಾಷ್ಟ್ರರ್ಗೆ ಕಾರಣಂಬೇೞ್ದೊಡವರಿಂದಿತ್ತ ಭೀಮನೊಡನಾಡದಿರಿಮೆಂದು ಮುದುಗಣ್ಗಳ್ ಬಾರಿಸೆ ತಮ್ಮ ನೊಂದ ಸಿಗ್ಗಿಂಗನಿಬರುಮೊಂದಾಗಿ ಪೋಗಿ ಪೊಱವೊೞಲ ಮರದ ಕೆಳಗೆ ಮಱಸೊಂದಿದ ಭೀಮನನಡಸಿ ಪಿಡಿದು ನೂರ್ವರುಂ ಗಂಟಲಂ ಮೆಟ್ಟಿ—

ಕಂ॥ ಪಾವುಗಳಂ ಕೊಳಿಸಿ ಮಹಾ।
ಗ್ರಾವಮನುಱದಡಸಿ ಕಟ್ಟಿ ಕೊರಲೊಳ್ ಗಂಗಾ॥
ದೇವಿಯ ಮಡುವಿನೊಳಟ್ಟಿದ।
ರಾವರಿಸದೆ ತಮ್ಮ ಕುಲಮನಡಿಗಟ್ಟುವವೋಲ್ ॥೩೨॥

ವ॥ ಅಂತಟ್ಟುವುದುಂ ಗಂಗಾದೇವಿಯ ವರಪ್ರಸಾದದೊಳ್ ವಿಷಮ ವಿಷಧರಂಗಳ್ ಪಱಿಯೆ ಕೊರಲೊಳ್ ತೊಡರ್ದ ಶಿಲೆಯುಂ ಪಱಿದೀಡಾಡಿ ಗಂಗೆಯ ನೀರಂ ತೋಳೊಳ್ ತುಳುಂಕಿ ಮಗುೞ್ದು ಬಂದಂಗೆ ವಿಷದ ಲಡ್ಡುಗೆಯನಿಕ್ಕಿಯುಮೆನಿತಾನುಮುಪದ್ರವಂಗಳೊಳ್ ತೊಡರಿಕ್ಕಿಯುಂ ಗೆಲಲಾಱದೆ ಮನಮಿಕ್ಕಿಯುಮೆರ್ದೆಯಿಕ್ಕಿಯುಮಿರ್ದರಂತಯ್ವರ್ ಕೂಸುಗಳ್ಗಂ ಗಾಂಗೇಯಂ ಚೌಲೋಪನಯನಾದಿ ಕ್ರಿಯೆಗಳಂ ಮಾಡಿ ಸುಖಮಿರ್ಪನ್ನೆಗಮಿತ್ತ ಗಂಗಾದ್ವಾರದೊಳ್ ಮಾಯಾಪುರಮೆಂಬ ಋಷ್ಯಾಶ್ರಮದೊಳ್ ಗೌತಮನೆಂಬಂ ಬ್ರಹ್ಮಋಷಿ ತಪಂಗೆಯ್ಯುತಿರ್ಪಿನಮಾ ಋಷಿಗೆ ಬಿಲ್ಲುಮಂಬುಂಬೆರಸೊರ್ವ ಮಗಂ ಪುಟ್ಟಿದನಾತಂಗೆ ಶರದ್ವತನೆಂದು ಪೆಸರನಿಟ್ಟು ನಡಪೆ ಬಳೆದು ತಪಂಗೆಯ್ವಾತನಲ್ಲಿಗೆ ಜಲಕ್ರೀಡಾನಿಮಿತ್ತದಿಂದಿಂದ್ರನಚ್ಚರಸೆ ಜಲಚರೆಯೆಂಬವಳ್ ಬಂದೊಡಾಕೆಯುಂ ಕಂಡು ಕಾಮಾಸಕ್ತಚಿತ್ತನಾಗಿ ಕೂಡಿ—

1. ಪಯಿನ್ಪತ್ತರ್ (ಕ.); 2. ಮತ್ತನಿತರೊಳಂ ಮಱಿ[3] (ಕ.ಖ.); 3. ಲುಗೆ (ಕ.)
4. ಮೇಣ್ಬಡವಾದ (ಕ.).

ಕಂ॥ ಒಗೆದ ಶರಸ್ತಂಬದೊಳಿ।
ರ್ಬಗಿಯಾಗಿ ಮನೋಜ ರಾಗರಸಮುಗುತರೆ ತೊ॥
ಟ್ಟಗೆ ಬಿಸುಟು ಬಿಲ್ಲನಂಬುಮ।
ನಗಲ್ದ [1]ನಾಶ್ರಮದಿನುದಿತ ಲಜ್ಜಾವಶದಿಂ ॥ ೩೩ ॥

ವ॥ ಅನ್ನೆಗಮಾ ತಪೋವನಕ್ಕೆ ಬೇಂಟೆಯಾಡಲ್ಬಂದ ಶಂತನುವಿನೊಡನೆಯವರಾ ಶರಸ್ತಂಬದೊಳ್ ಪರಿಕಲಿಸಿರ್ದ ಮುನೀಂದ್ರನಿಂದ್ರಿಯದೊಳೊಗೆದ ಪೆಣ್ಗೂಸುಮಂ ಗಂಡುಗೂಸುಮನವಱ ಕೆಲದೊಳಿರ್ದ ದಿವ್ಯ ಶರಾಸನ ಶರಂಗಳುಮಂ ಕಂಡು ಕೊಂಡುಪೋಗಿ ಶಂತನುಗೆ ತೋಱಿದೊಡಾತನುಮಾ ಶಿಶುದ್ವಯಮಂ ನಿಜ ಗಜಪುರಕ್ಕುಯ್ದು ಕೃಪೆಯಿಂ ನಡಪಿದನಪ್ಪುದಱಿಂ ಕೃಪನುಂ ಕೃಪೆಯುಮೆಂದು ಪೆಸರನಿಟ್ಟು ನಡಪುತ್ತಿರ್ಪನ್ನೆಗಮವರಯ್ಯಂ ಶರದ್ವತನಲ್ಲಿಗೆ ಬಂದು ಕಿಱಿಯಾತಂಗೆ ಚೌಲೋಪನಯನಾದಿ ಕ್ರಿಯೆಗಳಂ ಮಾಡಿ ಧನುರ್ವಿದ್ಯೋಪದೇಶಂಗೆಯ್ಯೆ ಸರ್ವ ವಿದ್ಯಾ ವಿಶಾರದನಾದನಾ ಕೃಪಾಚಾರ್ಯರ ಪಕ್ಕದೊಳ್ ಕೂಸುಗಳಂ ವಿದ್ಯಾಭ್ಯಾಸಂಗೆಯ್ಸೆ—

ಚಂ॥ ಬರೆಯದೆ ಬಂದ ಸುದ್ದಗೆ[2][ಯೆ] ಸೂತ್ರಮನೊಂದೆ ಮುಹೂರ್ತ ಮಾತ್ರದಿಂ।
ಬರಿಸಿದುದಂತು ಸೂತ್ರಿಸಿದ ಸೂತ್ರ[3][ದ] ವೃತ್ತಿ ನಿಜಾತ್ಮ ವೃತ್ತಿವೋಲ್॥
ಪರಿಣಮಿಸಿತ್ತು ಮತ್ತುೞಿದ ವಿದ್ಯೆಗಳೋಜರೆ [4]ಚಟ್ಟರೆಂಬಿನಂ।
ನೆರೆದುವು ತನ್ನೊ[5]ಳಾರ್ ಗಳ ಗುಣಾರ್ಣವನಂತು [6]ಕುಶಾಗ್ರ ಬುದ್ಧಿಗಳ್ ॥ ೩೪ ॥

ವ॥ ಅಂತು ಪಂಚಾಂಗ ವ್ಯಾಕರಣದ ವೃತ್ತಿಭೇದಮಪ್ಪ ಛಂದೋ[7]ವೃತ್ತಿಯೊಳಂ ಶಬ್ದಾಲಂಕಾರ ನಿಶ್ಚಿತಮಪ್ಪಲಂಕಾರದೊಳಂ ವ್ಯಾಸ ವಾಲ್ಮೀಕಿ ಕಶ್ಯಪ ಪ್ರಭೃತಿ ವಿರಚಿತಂಗಳಪ್ಪ ಮಹಾಕಾವ್ಯಂಗಳೊಳಂ ನಾಂದೀ [8]ಪ್ರರೋಚ[ನಾ] ಪ್ರಸ್ತಾವ[9][ನೇ]ತಿವೃ[ತ್ತ] ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕು ವೇದದೊಳಮಾಱಂಗದೊಳಮುಯ್ದು ತೆಱದ ಮಂತ್ರಂಗಳೊ[10]ಳ[ಮಾ]ಱುಂ ದರ್ಶನದೊಳಂ ಪ್ರತ್ಯಕ್ಷಾನುಮಾನ ಪ್ರಮಾಣಂಗಳೊಳಂ ಭರತ ಪ್ರಣೀತ ನೃತ್ಯಶಾ[11]ಸ್ತ್ರದೊಳಂ ನಾರದಾದಿ ಪ್ರಣೀತ ಗಾಂಧರ್ವ ವಿದ್ಯಾ ವಿಶೇಷಂಗಳೊಳಂ ಗಜಾಗಮುಜ್ಞ ರಾಜಪುತ್ರ ಗೌತಮ ವಾದ್ವಾಕಿ [12]ಪಾಳ ಕಶ್ಯಪ [13]ಸುಪತಿ ಶ್ರೀಹರ್ಷಾದಿ ಪುರಾಣ ಪುರುಷ ವಿರಚಿತಂಗಳಪ್ಪ ಹಸ್ತಿಶಾಸ್ತ್ರಂಗಳೊಳಂ ಚಿತ್ರಕರ್ಮ ಪತ್ರಚ್ಛೇದ ಗ್ರಹ ಗಣಿತ

---

1. ಂ ಸ್ವಾ (ಕ.); 2. ಯ (ಸ.); 3. ಮೆ (ಸ.); 4. ಛ (ಕ.ಖ.); 5. ಳಗ್ಗಳ (ಖ.ಗ.ಘ.); 6. ತುಷಾಗ್ರ (ಖ.), ಶುಕಾಗ್ರ (ಗ.); 7. ವಿಚಿತಿ (ಗ.), ವಿಚಿತ್ರ (ಘ.): 8. ಪ್ರರೋಚನ (ಕ.), ಪ್ರವಚನ (ಖ.ಗ.ಘ.); 9. ನಾನಿವೃತ್ತಿ (ಕ.), ನಿವೃತ್ತಿ (ಖ.), ನಿತಿವೃತ್ತಿ (ಗ.ಘ.); 10. ಳಂ ಮೂಱು (ಕ.ಖ.ಘ.); 11. ಸ್ತ್ರಂಗಳೊ (ಕ.ಖ.ಘ.); 12. ಪಾಳಕಾಪ್ಯ (ಕ.), ಪಾಳಕ (ಖ.); 13. ಸುಮತಿ (ಕ.).

ರತ್ನ ಪರೀಕ್ಷೆಗಳೊಳಂ ದಾರುಕರ್ಮ ವಾಸ್ತುವಿದ್ಯಾಪೂರ್ವ [1]ಯಂತ್ರಪ್ರಯೋಗ [2]ವಿ[ಷಾ]ಪಹರಣ [3]ಸರಭೇದ ರತಿತಂತ್ರೇಂದ್ರಜಾಲ ವಿವಿಧ ವಿದ್ಯೆಗಳೊಳಮನೇಕಾಕ್ಷರ ಸ್ವರೂಪಂಗಳೊಳಂ ಚಾಪ ಚಕ್ರ ಪರಶು ಕೃಪಾಣ ಶಕ್ತಿ ತೋಮರ ಮುಸಲ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿ ಪ್ರವೀಣ[4] [ನು]ಮಾರೂಢಸರ್ವಜ್ಞ ಮಹೇಂದ್ರ ಜಾಣ(?)[4][ನು] ಮಾಗಿ—

ಕಂ॥ ಉಳ್ಳೋದುಗ[5]ಳೊಳಗೆನಿತಱ।
ವುಳ್ಳ[6]ರ್ಗಂ ತಿಳಿಪಲರಿಯ[7]ದೆನಿಪೆಡೆಗಳುಮಂ॥
ತೆಳ್ಳ[8]ಗಿರೆ ತಿಳಿಪುಗುಂ ಬೆಸ।
ಗೊಳ್ಳ ಗುಣಾರ್ಣವನ ಲೆಕ್ಕಮಂ [9]ಪೊಕ್ಕಮುಮಂ ॥ ೩೫ ॥

ವ॥ ಎಂದು ಲೋಕಮೆಲ್ಲಂ ಪೊಗೞೆ ನೆಗೞ್ದ ಪೊಗೞ್ತೆಗಂ ನೆಗೞ್ತೆಗಂ ತಾನೆ ಗುಱಿಯಾಗಿ—

ಕಂ॥ ಮಾನಸದೊಳ್ ಹಂಸೆಯುವೋಲ್।
ಮಾನಸ ವಾಗ್ವನಿತೆ ತನ್ನ ಮಾನಸದೊಳಿವಂ॥
ಮಾನಸನೆಂದಗಲದೆ ನಿಲೆ॥
ಮಾನಸನಾದಂ ಸರಸ್ವತೀ ಕಳಹಂಸಂ ॥ ೩೬ ॥

ವ॥ ಅಂತಯ್ವರುಂ ಸಮಸ್ತ ಶಸ್ತ್ರ ಶಾಸ್ತ್ರ ಪ್ರಯೋಗ ಪ್ರವೀಣರಾಗೆ ಧರ್ಮಪುತ್ರಂ ಧರ್ಮಶಾಸ್ತ್ರಂಗಳೊಳಂ ಶ್ರುತಿಸ್ಮೃತಿಗಳೊಳಂ ಪ್ರವೀಣನಾದಂ ಭೀಮಸೇನಂ ವ್ಯಾಕರಣದೊಳಾರಿಂದಮುಗ್ಗಳ[ಂ] ಕುಶಲನಾದಂ ನಕುಲಂ ಕುಂತ ಶಸ್ತ್ರದೊಳತಿ ಪ್ರವೀಣನುಮಾಗಿ ಅಶ್ವವಿದ್ಯೆಯೊಳಾರಿಂದಂ ಪಿರಿಯನಾದಂ ಸಹದೇವಂ ಜ್ಯೋತಿರ್ಜ್ಞಾನದೊಳತಿ ಪರಿಣತನಾದಂ—

ಚಂ॥ ಬಳೆದುವು ತೋಳ್ಗಳಿಕ್ಕೆಯಿನಮಳ್ ಬಳೆವಂತಿರೆ ಮುಯ್ಯುಗಳ್ ಕುಳಾ।
ಚಳ ಶಿಖರಂಗಳಂ ಮಸುಳಿವಂದುವು ಪರ್ವಿದ ವಕ್ಷ[10]ಮಿಾ ಕ್ಷಮಾ॥
ತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಮೆಂದು ಮಹೀತಳಂ ಮನಂ।
ಗೊಳೆ ನೆಱೆದತ್ತುದಾತ್ತ ನವ ಯೌವನಮೊರ್ಮೆಯೆ ಧರ್ಮಪುತ್ರನಾ ॥ ೩೭ ॥

ವ॥ ಅಂತು ಸೊಗಯಿಸುವ ರೂಪಿನೊಳ್ ಪೊನ್ನ ಬಣ್ಣದಂತಪ್ಪ ತನ್ನ ಮೆಯ್ಯ ಬಣ್ಣಮಳವಲ್ಲದೊಪ್ಪೆ—

1. ಮಿಶ್ರಪ್ರಯೋಗ (ಕ.), ಚಿತ್ರಪ್ರಯೋಗ (ಗ.); 2. ಶಾಪ ವಿಶಾಪ (ಕ.), ವಿಶಾಪ (ಖ.ಗ.ಘ.); 3. ಪು (ಕ.), ಸು (ಖ.ಗ.); 4. ರು (ಸ); 5. ಳನಿತುಮನ (ಕ.ಖ.); 6. ವರುಂ (ಕ.ಖ.); 7. ರೆ (ಕ.); 8. ನಿತು (ಕ.ಖ.); 9. ಬಿಂಕ (ಕ.ಖ.); 10. ಮಿಾ ಸುಕುಂ (ಕ.), ವಿಕ್ಷುಕುಂ (ಖ.), ಮಿಕ್ಷಕುಂ (ಗ.ಘ.).

ಚಂ॥ ಕುಳಗಿರಿಯುಂ ಸರೋಜನಿಲಯುಂ ಮನುಜಾಕೃತಿಯಾಗೆ ಮಾಡಿದಂ।
ತೊಳವೆನಿಪಂತುಟಪ್ಪ ಪೊಸ ಬಣ್ಣದೊಳೊಂದಿದ ಪಾರಿಜಾತಮ॥
ಗ್ಗಳಮೆಸೆದೊಪ್ಪುವಂತೆ ತಳಿರಿಂ ಮುಗುಳಿಂ ನವಯೌವನಂ ಮನಂ।
ಗೊಳೆ ಕರಮೊಪ್ಪಿದಂ ದಶ ಸಹಸ್ರ ಮದೇಭ ಬಳಂ ವೃಕೋದರಂ ॥೩೮॥

ವ॥ ಅಂತೊಪ್ಪುವ ಗಂಡ ಗಾಡಿಯೊಳಿಂದ್ರ ನೀಲದಂತಪ್ಪ ಬಣ್ಣಂ ಕಣ್ಗೆವರೆ–

ಚಂ॥ ಶರದದ ಚಂದ್ರನಂ ವಿಮಲ ಚಂದ್ರಿಕೆ ಬಾಳದಿನೇಶನಂ ತಮೋ।
ಹರಕಿರಣಂ ಕಿಶೋರ ಹರಿಯುಂ ನವಕೇಸರ ರಾಜಿ ಮಿಕ್ಕ ದಿ॥
ಕ್ಕರಿಯನನೂನ ದಾನ ಪರಿಶೋಭೆ ಮನಂಗೊಳೆ ಪೊರ್ದುವಂತೆ ಸುಂ।
ದರ ನವಯೌವನಂ ನೆಱೆಯೆ ಪೊರ್ದೆ ಗುಣಾರ್ಣವನೊಪ್ಪಿ ತೋಱಿದಂ ॥೩೯॥

ವ॥ ಅಂತು ನವಯೌವನಂ ನೆಱೆಯೆ ನೆಱೆಯೆ ನಿಱಿ ನಿಱಿಗೊಂಡ ಗುಣಾರ್ಣವನ ತಲೆನವಿರ್ಗಳ್ ಲಾವಣ್ಯರಸಮನಿಡಿದಿಡಿದು ತೀವಿದ ಕಮಲಾಸನನ ಬೆರಲಚ್ಚುಗಳನ್ನವಾದುವು ಮೂಱುಂ ಲೋಕದ ಮೂಱು ಪಟ್ಟಮನಾಳಲ್ಕೆ ತಕ್ಕ ಲಕ್ಷಣ ಸಂಪೂರ್ಣಮಪ್ಪ ಸಹಜಮನೋಜನ ಲಲಾಟ[ಂ] ಪಟ್ಟಂಗಟ್ಟಿದ ನೊಸಲ್ಗೆ ಲಕ್ಷಣಮನಱಿಸಲ್ವೇಡೆಂಬಂತಾದುದು ಕರ್ಬಿನ ಬಿಲ್ಲ ಕೊಂಕಿನಂತೆ ಕೊಂಕಿಯುಂ ಪರವನಿತೆಯ[1]ರೆರ್ದೆಗೆ ಕೊಂಕಿಲ್ಲದೆಯುಂ ಸೊಗಯಿಸುವ ಸುರತ ಮಕರಧ್ವಜನ ಪುರ್ವುಗಳ್ ಕಾಮದೇವನ ವಿಜಯ ವೈಜಯಂತಿಗಳಂತಾದುವು ನೀಳ್ಪುಂ ಬೆಳ್ಪುಮಂ ತಾಳ್ದಿ ಪರವನಿತೆಯರ ದೆಸೆಗೆ ಕಿಸುಗಣ್ಚಿದಂತೆ ಕಿಸು ಸೆರೆವರಿದು ಸೊಗಯಿಸುವ ಶೌಚಾಂಜನೇಯನ ಕಣ್ಗಳಿಂಬರಲಂಬುಗಳ್ ಗಣಿಕಾಜನಂಗಳೆರ್ದೆಯುಂ ನಟ್ಟು ಕೆಂಕಮಾದಂತಾದುವು ರಿಪುಜನದ ಪೆರ್ಚಿಂಗಂ ಪರಾಂಗನಾ ಜನದ [2][ಮೆಚ್ಚಿ]ಂಗಂ ಮೂಗಿಱಿವಂತೆ ಸೊಗಯಿಸುವ ಗಂಧೇಭ ವಿದ್ಯಾಧರನ ಮೂಗು ತನ್ನ ಸುಯ್ಯ ಕಂಪನಲ್ಲದೆ ಪೆಱರ ಕಂಪನಾಸೆವಡದಂತಾದುದು ಪೊಸ ಜವ್ವನದ ಮುಂ[3] ಬಣ್ಣದಂತೆ [4]ಕರ್ಪಂ ಕೈಕೊಂಡು ಕತ್ತುರಿ[5]ಯಲ್ ಬರೆದಂತಪ್ಪ ವಿಕ್ರಾಂತ ತುಂಗನ ಮೀಸೆಗಳಾತನ ತೀವ್ರ ಪ್ರತಾಪಾನಳ ಧೂಮಲೇಖೆಯಂತಾದುವು ಪುಳಿಯೊಳಲಿದ ಪವಳದ ಬಟ್ಟಿನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮನಂಗರಾಗರಸದುರುಳಿಯುಂತಾದುದು ರಸದಾ[6]ಡಿಮದ ಬಿತ್ತುಮಂ ಪೊಸ ಮುತ್ತುಮಂ ಮುಕ್ಕುಳಿಸಿದಂತಪ್ಪ ವಿಬುಧವನಜವನ ಕಳಹಂಸನ ದಂತಪಙ್ಕ್ತಿಗಳಮೃತಕಿರಣನ ಕಾಂತಿಗಳನೀಸುವಂತಾದುವು ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡಂತೆ ನಸುನೇಲ್ವ ಕರ್ಣಾ[7]ಟೀ ಕರ್ಣಪೂರನ [8]ಪಾಲೆಗಳುಂ

---

1. ರ ದೆಸೆ ಕೊಂ (ಗ.ಘ.); 2. ಪೆರ್ಚಿ (ಘ.); 3. ಬಯಣ (ಕ.ಗ.); 4. ಕಪ್ಪಂ (ಗ.), ಕೆಪ್ಪಂ (ಘ.); 5. ಯಿಂ (ಕ.); 6. ಳಿಂಬ (ಕ.ಗ.) ಡಿಂಬ (ಘ.); 7. ಟ (ಕ.ಗ.); 8. ನಾಲಗೆ (ಕ.), ಪಾಲೆಗಳುಂ (ಗ.), ಕರ್ಣಪಾಲೆಗಳುಂ (ಘ.).

ಸರಸ್ವತಿಯಾಡುವ ಲೀಲಾಂದೋಳದಂತಾದುವು ಬಳ್ವಳ ಬೆಳೆದೆಳಗೌಂಗಿನಂತೆ ಲೋಕದ ಚೆಲ್ವೆಲ್ಲಮನೊಳಕೊಂಡು ರೇಖೆಗೊಂಡ ಲಾ[1]ಟೀ ಲಲಾಮನ ಪರಿಣದ್ಧ ಕಂಧರಂ ಯುವರಾಜ ಕಂಠಿಕಾಭರಣಮಂ ಕಟ್ಟುವುದರ್ಕೆ ನೋಂತು ತನ್ನ ಚೆಲ್ವನಲ್ಲದೆ ಪೆಱರ ಚೆಲ್ವನಾಸೆವಡದಂತಾದುದು ಕುಲದ ಚಲದ ವೈಮೆಯೊಳ್ ತನ್ನನೆ ನೋಡಿದ ಸಂತೋಷದೊಳುತ್ಸಾಹವಾದಂತೆ ಸೊಗಯಿಸುವ ಸಮರೈಕಮೇರುವಿನ ಭುಜಶಿಖರಂಗಳ್ ಕುಲ ಶಿಖರಿ [2]ಶಿಖರಂಗಳಂತಾದುವು ವ್ಯಾಳ ಗಜಂಗಳುಮನಂಕದ ಬರ್ದೆಯುಮನುಗಿಬಗಿಮಾಡಿದ ಸಂತೋಷದೊಳ್ ಬಳ್ವಳ ಬಳೆದ ವಿಕ್ರಾಂತತುಂಗನ ನಿಡುದೋಳ್ಗಳ್ ಗಣಿಕಾಜನಕ್ಕೆ ಕಾಮಪಾಶಂಗಳುಮರಾತಿ ಜನಕ್ಕೆ ಯಮಪಾಶಂಗಳುಮಾದುವು ರಕ್ತಾಶೋಕ ಪಲ್ಲವದಂತೆ [3]ತೊಳತೊಳಗುವಾಂಧ್ರೀ ಕುಚಕಲಶ ಪಲ್ಲವನ ಕರತಳಪಲ್ಲವಂಗಳ್ ಸಮದ ಗಜಕುಂಭಸ್ಥಳಾಸ್ಫಾಳನ ಕರ್ಕಶಂಗಳಾದುವು ಪೊಡರ್ವ ಪಗೆವರನುಱದೆ [4]ಕೊಂಡ ಸಂತೋಷದೊಳಂ ಶ್ರೀಯನೊಳಕೊಂಡ ಸಂತೋಷದೊಳಂ ತೆಕ್ಕನೆ ತೀವಿದ ಕೇರ[5]ಳೀ ಕೇಳಿ ಕಂದರ್ಪನಗ[6]ಲುರಂ ಲಕ್ಷ್ಮಿಗೆ ಕುಲಭವನಮುಂ ನಿವಾಸಭವನಮುಮಾದುದು ಪೊಡರ್ವ ಮಂಡಳಿಕರ ಮನದಂತೆ ಕರಮುಸಿದಾದ ಪರಾಕ್ರಮಧವಳನ ಮಧ್ಯಪ್ರದೇಶಂ ನಾರಾಯಣಂ ತನ್ನಾಳ್ದಂ ಮಾಡಿ ತಾನಾಳ್ಮಾಡಿಯುಂ ತಾನಳ್ಕಾಡೆಯುಂ ಬರ್ದೆಯರ ಮನವನಳ್ಕಾಡಿಸುವಂತಾದುದು ಗಂಭೀರಗುಣದೊಳಮಾವರ್ತನ ಸಿದ್ಧಿಯೊಳಂ ಜಳನಿಧಿಯುನೆ ಪೋಲ್ವ ಶರಣಾಗತ ಜಳನಿಧಿಯ ನಿಮ್ನ ನಾಭಿ ಚೆಲ್ವಿಂಗೆ ತಾನೆ ನಾಭಿಯಾದುದು ಸಿಂಹಕಟಿತಟಮನಿಳಿಸುವ ರಿಪುಕುರಂಗ ಕಂಠೀರವನ ಕಟಿತಟಮೊಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮ[7][ನ]ಡ್ಡಣದಂತೆ ದೊಡ್ಡಿತ್ತಾಗಿ ವಿಾಱುವುದ್ವೃತ್ತ ವೃತ್ತತೆಯ [8][ನೀಟ್ಟಿಂ] ಕೊಂಡಂತುದ್ವೃತ್ತಂಗಳಾದುವು ಉದಾತ್ತನಾರಾಯಣನೂರುಯುಗ್ಮಂಗಳ್ ಮಾನಿನಿಯರ ಮನೋಗಜಂಗಳಂ ಕಟ್ಟಲ್ಕಾಲಾನ ಸ್ತಂಭಂಗಳಾದುವು ಅಂತಪೂರ್ವಂಗಳಾಗಿ ತೊಳಗುವ ಕಿಱುದೊಡೆಗಳುಡುವಡ[9]ರ್ದನ್ನ ವಾರೂಢ ಸರ್ವಜ್ಞನ ದೊ[10]ಡ್ಡ ಮಾರ್ಗಂಗಳೆಳವಾೞೆಯ [11]ದಿಂಡಿನೊಳ್ ಸಾಣೆಗಟ್ಟಿದಂತಾದುವು [12]ಗೂ[ಢ]ಗುಲ್ಫಪಾರ್ಷ್ಣಿಗಳನೊಳಕೊಂಡ ಮನುಜ ಮಾಂಧಾತನ ಪೊಱ ಅಡಿಗಳ್ ವಿರೋಧಿ ಭೂಪಾಳರನಡಿಗೆಱಗಿಸಿದ ಸಂತೋಷದೊಳುನ್ನತಂಗಳಾದಂತೆ ಕೂರ್ಮೋನ್ನತಂಗಳಾದುವು ನೊಸಲಂ ಸುಟ್ಟೆ ತೋರ್ಪನ್ನವಪ್ಪುಂಗುಟಂಗಳೊಳ್ ಮಿಂಚಂ ಕೀಲಿಸಿದಂತೆ ತೊಳಗಿ ಪೊಳೆವ ಪ್ರಚಂಡ ಮಾರ್ತಾಂಡನ ಪಾದನಖಂಗಳ್

1. ಟ (ಕ) ; 2. ಯುತ್ತುಂಗ ಶಿಖರಂ (ಫ§) ; 3. ತಳ ತಳ ತೊಳಗು (ಕ.ಗ.) ; 4. ಕೊಂದ (ಕ.) ; 5. ಳ (ಕ) ; 6. ಲ್ದು (ಸ) ; 7. ನೊ (ಕ.ಗ.ಫ.) ; 8. ನೆಳದು (ಫ.) ; 9. ರ್ವ (ಕ.ಗ.) ; 10. ಡ್ಡಿ (ಗ.ಫ.) ; 11. ದಂ (ಗ.ಫ.) . 12. ಗೂಡುಗೊಳ್ವ (ಸ.) ;

ಗಂಡರ ಪೆಂಡಿರಂಜಿದಳ್ಕಿದ ಮೊಗಮಂ ನೋಡಲ್ಕೆ ಕನ್ನಡಿಗಳನ್ನವಾದುವು ಪೊಸ ತಲರ್ದ ಕೆಂದಾವರೆಯ ಕೆಂಪುಮಂ [1]ಮೆಲ್ಪುಮನಿಟ್ಟುಕೊಳಗೊಂಡು ತೊಳಗುವರಿ ಕೇಸರಿಯ ಪಾದತಳಂಗಳಡಿಗೆಱಗಿದರಿ ನರಪಾಲರ ಮುಕುಟಮಾಣಿಕ್ಯ ಮರೀಚಿ ಜಾಲ ಬಾಳಾತಪಂಗಳನಲೆದು ಕೆಂಕಮಾಡಂತಾದುವು ಪೊಸವೆಸಱಗೆಯ ಬಣ್ಣದಂತೆ ಸೊಗಯಿಸುವ ಸಾಮಂತ ಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂ ಗೆಯ್ದ ಕದಳೀಗರ್ಭ ಶ್ಯಾಮಮೆಂಬ ಬಣ್ಣದಂತಾದುದು-

ಚಂ॥ ಮನದೊಳೊಱಲ್ದು ಜೋಲ್ದಳಿಪಿ ನೋಡಲೊಡಂ ಸೆಱ[3]ಗೆಯ್ದು ಕಣ್ಣುಮಂ।
ಮನಮುಮನಂಗಜನ್ಮನರಲಂಬುಗಳಿಂ[2][ದೆ] ಮು[3]ರುಳ್ಚಿ ಬಂದ ಮಾ॥
ವಿನ ಬನದೊಳ್ ತೆರಳ್ಚಿ ಪೊಳೆವಿಂದುಮರೀಚಿಗಳಿಂದುರುಳ್ಚಿ ಪೂ।
ವಿನ ಪಸೆಯೊಳ್ ಪೊರಳ್ಚಿದನಳುರ್ಕೆಯ ಬರ್ದೆಯರಂ ಗುಣಾರ್ಣವಂ ॥೪೦॥

ವ॥ ಅಂತು ನಕುಲ ಸಹದೇವರ್ ಸಹಿತಮಯ್ವರುಂ ನವ ಯೌವನದ ಪರಮ ಸುಖಮನೆಯ್ದಿ ಸಂತೋಷದಿನಿರ್ದರಿತ್ತ ಗಂಗಾದ್ವಾರದೊಳ್ ಭರದ್ವಾಜನೆಂಬ ಬ್ರಹ್ಮಋಷಿ—

ಕಂ॥ ಸ್ನಾನಾರ್ಥಮೊಂದು ಕಳಶಮು।
ನಾ ನಿಯಮ ನಿಧಾನನೆಟಲೆ ಪಿಡಿದಮಳಿನ ಗಂ॥
ಗಾ ನದಿಗೆ ವಂದು ಸುರತ ನಿ।
ಧಾನಿಯನಮರೇಂದ್ರ ಗಣಿಕೆಯಂ ಮುನಿ ಕಂಡಂ ॥೪೧॥

ವ॥ ಅಂತು ಕಾಣ್ಬುದುಮಮೃತಾಬ್ಧಿಯೆಂಬಚ್ಚರಸೆಯ ಕನಕ ಕಾಂಚೀ ಕಳಾಪದೊಳ್ ತೊಡರ್ದ ದೇವಾಂಗ ವಸ್ತ್ರದುಳ್ಳುಡೆಯೊಳುಲಿವ ಸೂಸಕದ ನೂಲ ತೊಂಗಲ್ವೆರಸೆಟಲ್ವ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ-

ಕಂ॥ ಆದೆಲರ ಸೋಂಕಿನೊಳ್ ತೆಱ।
ಪಾದೊಡೆ ಬೆಳ್ಪೆಸೆಯೆ ಮಸೆದ ಮದನನ ಬಾಳಂ॥
ತಾದುವು ಪೊಳೆವೊಳ್ತೊಡೆ [4]ತೆಱ।
ಪಾದೆರ್ದೆಯಂ ನಟ್ಟುವಂದು ತನ್ಮುನಿಪತಿಯಾ ॥೪೨॥

ವ॥ ಅಂತು ಕಂತುಶರಪರವಶನಾಗಿ ಧೈರ್ಯ ಕ್ಷರಣೆಯುಮಿಂದ್ರಿಯ ಕ್ಷರಣೆಯು ಮೊಡನೊಡನಾಗೆ—

1. ಬೆಳ್ಪು (ಕ.ಖ.ಗ.ಘ.). 2. ದ (ಙ); 3. ರ (ಕ.ಗ.); 4 ಗಳೊ। ಳಾದುವು ದಿಟ್ಟೆ ಗಳೊಱಲ್ದು (ಕ.ಖ.ಗ.ಘ.).

ಕಂ॥ ಮಾಣದೆ ಸೋರ್ವಿಂದ್ರಿಯಮಂ।
ದ್ರೋಣದೊಳಾಂತಲ್ಲಿಯೊಗೆದ ಶಿಶುವಂ ಕಂಡೀ॥
ದ್ರೋಣದೊಳೆ ಪುಟ್ಟಿದೀತಂ।
ದ್ರೋಣನೆ ಪೋಗೆಂದು ಪೆಸರನಿಟ್ಟಂ ಮುನಿಪಂ ॥ ೪೩ ॥

ವ॥ ಅಂತು ಭರದ್ವಾಜನಾತ್ಮತನೂಜಂಗೆ ಪೆಸರನಿಟ್ಟು ತನ್ನ ಕೆಳೆಯಂ ಪಾಂಚಾಳ ದೇಶದರಸಂ ಪೃಷತನೆಂಬನಾತನ ಮಗಂ ದ್ರುಪದನುಮಂ ದ್ರೋಣನುಮನೊಡಗೂಡಿ ಯಜ್ಞಸೇನನೆಂಬ ಬ್ರಹ್ಮಋಷಿಯ ಪಕ್ಕದೊಳ್ ಬಿಲ್ವಿದ್ದೆಯಂ ಕಲಲ್ವೇೞ್ದಿಡೆ ದ್ರೋಣನುಂ ದ್ರುಪದನುಂ ಧನುರ್ಧರಾಗ್ರಗಣ್ಯರಾಗೆ ಭರದ್ವಾಜಂ ದ್ರೋಣಂಗೆ ಕೃಪನ ತಂಗೆಯಪ್ಪ ಶಾರದ್ವತೆಯಂ ತಂದು ಮದುವೆಯಂ ಮಾಡಿದೊಡಾತಂಗವಾಕೆಗಂ ತ್ರಿಣೇತ್ರನಂಶದೊಳೊರ್ವ ಮಗಂ ಪುಟ್ಟಿ—

ಕಂ॥ ದಿವಿಜಾಶ್ವತ್ಥಾಮದೊಳೀ।
ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನ॥
ಕ್ಕವಯವದೆ ಕುಂಭಸಂಭವ।
ನಿವನಶ್ವತ್ಥಾಮನೆಂದು ಪೆಸರಿಡೆ ನೆಗೞ್ದಂ ॥ ೪೪ ॥

ವ॥ ಅಂತು ನೆಗೞ್ದ ತಮ್ಮಯ್ಯನ ಕೈಯೊಳ್ ಧನುರ್ವಿದ್ಯೋಪದೇಶದೊಳ್ ಧನುರ್ಧರಾಗ್ರಗಣ್ಯನುಮಾಗಿ ಸಂದ[ಂ] ದ್ರುಪದನುಂ ತನ್ನ ರಾಜ್ಯದೊಳ್ ನಿಂದ[ಂ] ದ್ರೋಣನುಂ ತನಗೆ ಬಡತನಮಡಸೆ ಅಶ್ವತ್ಥಾಮನನೊಡಗೊಂಡು ನಾಡು ನಾಡಂ ತೊೞಲ್ದು ಪರಶುರಾಮನಲ್ಲಿಗೆ ವಂದಂ—

ಚಂ॥ ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಮೇಕವಿಂ।
ಶತಿ ಪರಿಸಂಖ್ಯೆಯಿಂ ತವಿಸಿ ಸರ್ವನಿವೇದಕಮೆಂಬ ಯಜ್ಞ[1][ದೊಳ್]॥
ಕ್ಷಿತಿ ಪೊಗೞ್ವನ್ನಮಿತ್ತು ಗುರುದಕ್ಷಿಣೆಯಾಗಿರೆ ಕಶ್ಯಪ ಪ್ರಜಾ।
ಪತಿಗೆ ಸಮುದ್ರ ಮುದ್ರಿತ ಧರಿತ್ರಿಯನೊಂದೞಿಯೂರನೀವವೋಲ್ ॥ ೪೫ ॥

ವ॥ ಅಂತು ವಲ್ಕಲಾವೃತ ಕಟಿತಟನುಮಾಗಿ[2]ರ್ದ ಜಟಾಕಲಾಪನುಮಾಗಿ ತಪೋವನಕ್ಕೆ ಪೋಪ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕಪಾತ್ರಕ್ಕುಪಾಯಮಿಲ್ಲಪ್ಪುದಱಿಂ ಮೃತ್ಪಾತ್ರದೊಳರ್ಘ್ಯ[3]ಮೆತ್ತಿ ಪೂಜಿಸಿ—

ಚಂ॥ ಒಡಮೆಯನರ್ಥಿಗಿತ್ತೆನವನೀತಳಮಂ ಗುರುಗಿತ್ತೆನೀಗಳೊಂ।
ದಡಕೆಯುಮಿಲ್ಲ ಕೈಯೊಳೆರೆದಂ ಶ್ರುತಪಾರಗನೆಂತು ಸಂತಸಂ॥
ಬಡಿಸುವೆನೆನ್ನಿದೊಂದು ಧನುವಿರ್ದುದು ದಿವ್ಯಶರಾಳಿಯಿರ್ದುದಿ।
ಲ್ಲೊಡಮೆ ಸಮಂತು ಪೇೞಿವಱೊಳಾವುದನೀವುದೊ ಕುಂಭಸಂಭವಾ ॥ ೪೬ ॥

1. ಮಂ (ಸ.); 2. ರ್ದ್ದ (ಕ.); 3. ಮನೆ (ಕ.ಗ.).

ವ॥ ಎಂಬುದುಂ ದ್ರೋಣನೆನಗೆ ವಿದ್ಯಾಧನಮೆ ಧನಮಪ್ಪುದಱಿಂ ದಿವ್ಯಾಸ್ತ್ರಂಗಳಂ ದಯೆಗೆಯ್ವುದೆನೆ ವಾರುಣ ವಾಯವ್ಯಾಗ್ನೇಯ [1]ಪೌರಂದರಾದಿ ಪ್ರಧಾನಾಸ್ತ್ರಂಗಳಂ ಕುಡೆ ಕೊಂಡು ಪರಶುರಾಮನಂ ಬೀೞ್ಕೊಂಡು ತನ್ನೊಡನಾಡಿಯಪ್ಪ ಕೆಳೆಯಂ ದ್ರುಪದಂ ಛತ್ರಾವ[2]ತಿಯೊಳರಸುಗೆಯ್ದಪನೆಂದು ಕೇಳ್ದಾಪೊೞಲ್ಗೆ ವಂದು ದ್ರುಪದನರಮನೆಯ ಬಾಗಿಲೊಳ್ ನಿಂದು ಪಡಿಯಱನಂ ಕರೆದು ನಿಮ್ಮೊಡನಾಡಿದ ಕೆಳೆಯಂ ದ್ರೋಣನೆಂಬ ಪಾರ್ವಂ ಬಂದನೆಂದು ನಿಮ್ಮರಸಂಗಱಿಯೆ ಪೇೞೆಂಬುದುಮಾತನಾ ಮಾೞ್ಕೆಯೊಳೆ ಬಂದಱಿಪುವುದುಂ ದ್ರುಪದಂ ರಾಜ್ಯಮದಿರಾ ಮದೋನ್ಮತ್ತನುಂ ಗರ್ವ[3]ಗ್ರಹ[4]ವ್ಯಗ್ರ ಚಿತ್ತನುಮಾಗಿ ಮೇಗಿಲ್ಲದೆ–

ಕಂ॥ ಅಂತೆಂಬನಾರ್ಗೆ ಪಿರುದುಂ।
ಭ್ರಾಂತು ದಲೇಂ ದ್ರೋಣನೆಂಬನೇಂ ಪಾರ್ವನೆ ಪೇ॥
ೞೆಂತೆನಗೆ ಕೆಳೆಯನೇ ನೂಂ।
ಕಂತಪ್ಪನನಱಿಯೆನೆಂದು ಸಭೆಯೊಳ್ ನುಡಿದಂ ॥ ೪೭ ॥

ವ॥ ಅಂತು ನುಡಿದುದಂ ಪಡಿಯಱಂ ಬಂದಾಮಾೞ್ಕೆಯೊಳಱಿಪೆ ದ್ರೋಣನೊತ್ತಂಬದಿಂದೊಳಗಂ ಪೊಕ್ಕು ದ್ರುಪದನಂ ಕಂಡು—

ಚ॥ ಅಱ[5]ಯಿರೆ ನೀಮುಮಾಮುಮೊಡನೋದಿದೆವೆಂಬುದನಣ್ಣ ನಿನ್ನ ನಾ।
ನಱಿಯೆನದೆಲ್ಲಿ ಕಂಡೆಯೊ ಮಹೀಪತಿಗಂ ದ್ವಿಜವಂಶಜಂಗಮೇ॥
ತಱಿ ಕೆಳೆಯಿಂತು ನಾಣಿಲಿಗರಪ್ಪರೆ ಮಾನಸರೆಂಬ ಮಾತುಗಳ್।
ನೆ[6]ಱಗೊಳೆ ಕುಂಭಸಂಭವನನಾ ದ್ರುಪದಂ ಕಡು ಸಿಗ್ಗು ಮಾಡಿದಂ ॥ ೪೮ ॥

ವ॥ ಅಂತು ಮಾಡಿದುದುಮಲ್ಲದೀ ನಾಣಿಲಿ ಪಾರ್ವನನೆೞೆದು ಕಳೆಯಿಮೆಂಬುದುಂ ದ್ರೋಣನಿಂತೆಂದಂ—

ಚಂ॥ ನುಡಿ ತಡವಪ್ಪುದೊಂದು ಮೊಗದೊಳ್ ಮುಱುಕಂ ದೊರೆಕೊಳ್ವುದೊಂದು ನಾ।
ಣ್ಗೆಡೆಗುಡದಿರ್ಪುದೊಂದು ನುಡಿಗಳ್ ಮೊೞೆಯಂ ಮಱೆಯಿಪ್ಪುದೊಂದು ಕ॥
ಳ್ಗುಡಿದವರಂದಮಿಂತು ಸಿರಿ ಸಾರ್ತರೆ [7]ಸಾರ್ವುದದರ್ಕೆ ಸಂದೆಯಂ।
ಬಡದೆ ಜಲಕ್ಕನೀಗಳಱಿದೆಂ ಸಿರಿ ಕಳ್ಳೊಡವುಟ್ಟಿತೆಂಬುದಂ ॥ ೪೯ ॥

ವ॥ ಎಂದು ಸೈರಿಸದೆ—

---

1. ಪು (ಖ.ಗ.ಘ.); 2. ಳಿ (ಕ.ಖ.ಗ.ಘ.); 3. ಗಳಗ್ರಹ(ಗ.ಘ.); 4. ವ್ಯಗ್ರಹ (ಖ.ಗ.ಘ.); 5. ವಿ (ಖ.ಗ.ಘ.); 6. ಱಃ (ಕ.ಗ.); 7. ಪಾ (ಖ.ಗ.ಘ.).

ಚಂ॥ ಖಳ ನೊಳವಿಂಗೆ [1]ಕುಪ್ಪೆ ವರಮೆಂಬವೊಲಾಂಬರಮುಂಟೆ ನಿನ್ನದೊಂ।
ದಳವೊಡನೋದಿದೊಂದು ಬೆ[2]ರಗಿಂಗೆ ಕೊಲಲ್ಕೆನಗಾಗದೀ ಸಭಾ॥
ವಳಯದೊಳೆನ್ನನೇೞಿಸಿದ ನಿನ್ನನನಾಕುಳಮೆನ್ನ ಚಟ್ಟರಿಂ।
ತಳವೆಳಗಾಗೆ ಕಟ್ಟಿಸದೆ ಮಾಣ್ದೊ[3]ಡೆ ಕೆಮ್ಮ[ನೆ] ಮಿಾಸೆವೊತ್ತೆನೇ ॥ ೫೦ ॥

ವ॥ ಎಂದಾರೂಢಪ್ರತಿಜ್ಞನಾಗಿ ನಾಗಪುರಕ್ಕೆ ವಂದು ತಮ್ಮ ಭಾವಂ ಕೃಪನ ಮನೆಯೊಳಪಗತಪರಿಶ್ರಮನಾಗಿರ್ದೊಂದು ದಿವಸಂ ಪಾಂಡವರುಂ ಕೌರವರುಂ ಪೊಱವೊಟಲೊಳ್–

ಕಂ॥ ನೆರೆದಿಸುತಿರೆ [4]ತೋಲ್ವುಲ್ಲೆಯ।
ನಿರದದು ಬಿೞ್[3]ದೊಡೆ ಪುರಾಣ ಕೂಪದೊಳದನಿ॥
ನ್ನರಿದು ತೆಗೆವಂದವೆಂದವ।
ರಿರೆ ಬಳಸಿಯುಮಲ್ಲಿ ಕಂಡು ನಕ್ಕಂ ದ್ರೋಣಂ ॥ ೫೧ ॥

ಭರತಕುಳತಿಳಕರಿರ್ ವರ।
ಶರಾಸನ ವ್ಯಗ್ರಹಸ್ತರಿರ್ ಬಳಯುತರಿರ್॥
ನೆರೆದಿನಿಬರುಮಿಾ ಲಕ್ಷ್ಯಮ।
ನಿರದಕ್ಕಟ ಸರದೆ ತೆಗೆಯಲಾರ್ತಿರುಮಿಲ್ಲಾ ॥ ೫೨ ॥

ವ॥ ಎಂದು ತನ್ನ ಮಗನಪ್ಪಶ್ವತ್ಥಾಮನಂ ಕರೆದೀ ಲಕ್ಷ್ಯಮಂ ತೆಗೆಯೆಂಬುದುಮಾತನಂತೆಗೆಯ್ವೆನೆಂದು ನೈಷ್ಠಿಕಮೆಂಬ ಮುಷ್ಟಿಯೊಳಂ ಪುಂಖಾನುಪುಂಖಮೆಂಬ ಶರಸಂಧಾನದೊಳವಯವದೊಳೆ ತೆಗೆದೊಡನಿಬರುಂ ಚೋದ್ಯಂಬಟ್ಟು ಗಾಂಗೇಯ ಧೃತರಾಷ್ಟ್ರರ್ಗಱಿಪಿದೊಡೆ ನದೀತನೂಜಂ ಭಾರದ್ವಾಜಂಗೆ ಬೞಿಯನಟ್ಟಿ ಬರಿಸಿ ಪೂರ್ವಸಂಭಾಷಣಾರ್ಘ್ಯಮೆತ್ತಿ ಮಧುಪರ್ಕ ವೇತ್ರಾಸನ ತಾಂಬೂಲದಾನಾದಿಗಳಿಂ ಸಂತಸಂಬಡಿಸಿ ತದೀಯ ಕು[5]ಲ ವಿದ್ಯಾವೃತ್ತಿಗಳಂ ಬೆಸಗೊಂಡು–

ಮ॥ ಮದಮಂ ಮುಕ್ಕುಳಿಸಿರ್ದಿಭಂಗಳನುದಗ್ರಾಶ್ವಂಗಳಂ ತಕ್ಕಿನ।
ಗ್ಗದ ಬಾಡಂಗಳನಾಯ್ದು ಕೊಟ್ಟು ತಣಿದೆಂ ಪೋ ಸಾಲ್ಗುಮೆಂಬನ್ನಮಂ॥
ದಿದಿರೊಳ್ ನೂಱುಱುವರ್ ಕುಮಾರರುಮನಿಟ್ಟೇ ಕೂಸುಗಳ್ ಯೋಗ್ಯರ।
ಪ್ಪುದನಿನ್ನೊಲ್ವೊಡೆ ಶಸ್ತ್ರವಿದ್ಯೆಗೊವಜಂ ನೀನಾಗು ಕುಂಭೋದ್ಭವಾ ॥ ೫೩ ॥

ವ॥ ಎಂಬುದುಮಂತೆಗೆಯ್ವೆನೆಂದು ಕಲಶಜನನಿಬರ ಮೊಗಮಂ ನೋಡಿ–

1. ತಪ್ಪೆ (ಕ. ಖ.), ಮುಪ್ಪೆ (ಘ.), ಕೆನ್ನೆ (ಘ§.); 2. ಱ (ಕ.); 3. ಡವಿನ್ನೆಗ (ಕ.);
4. ಕೋ (ಕ. ಖ.); 5. ಶಲೋದ್ಯೋಗ (ಕ.). ಶಲವೆದ್ಯೊ (ಗ.), ಶಲವಿದ್ಯಾ (ಘ.)-

ಕಂ॥ ಈ ನೆರೆದಿನಿಬರುಮೋದುದ।
ನೇನೀವಿರೆ ಪೇೞೆಮೆಂದೊಡನಿಬರುಮಿರ್ದರ್॥
ಮೌನವ್ರತದೆ ಗುಣಾರ್ಣವ।
ನಾನೀವೆಂ ನಿಮ್ಮ ಬಯಸಿ ಬೇೞ್ಪುದನೆಂದಂ ॥ ೫೪ ॥

ವ॥ ಎಂಬುದುಮಾ ಮಾತಿಂಗೆ ಮೆಚ್ಚಿ ಜಗದೇಕಮಲ್ಲನಂ ತೊಡೆಯನೇಱಿಸಿ ಕೊಂಡು ಕುಂಭಸಂಭವಂ ಗಾಂಗೇಯನ[1]ನಿಂತೆಂದಂ—

ಕಂ॥ ಇನಿಬರೊಳಗೀತನೊರ್ವನೆ।
ಧನುರಾಗಮದೆಡೆಗೆ ಕುಶಲನಕ್ಕುಮದರ್ಕೇಂ॥
ಕಿನಿಸದಿರಿಂ ಮುನ್ನಱಿಪಿದೆ।
ನೆನೆ ಭೀಷ್ಮನಲಂಪು ಮಿಗೆ ಮುಗುಳ್ನಗೆ ನಕ್ಕಂ ॥ ೫೫ ॥

ವ॥ ಅಂತು ದ್ರೋಣಾಚಾರ್ಯನಾಚಾರ್ಯ ಪದವಿಯಂ ಕೈಕೊಂಡು ಪಾಂಡವ ಕೌರವರ್ಗೆ ಚತುರಂಗ ಧನುರ್ವೇದಮುಮಂ ದಿವ್ಯಾಸ್ತ್ರಂಗಳುಮಂ ಶಕ್ತಿ ತೋಮರ ಮುಸಲ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳುಮಂ ಗಜ ರಥ ತುರಗ ಪದಾತಿ ಯುದ್ಧಂಗಳುಮನುಪದೇಶಂ ಗೆಯ್ಯುತ್ತುಮಿರೆಯಿರೆ—

ಕಂ॥ ಯಾದವ ವಂಶಜರುಂ ನಾ।
ನಾ ದೇಶ ನರೇಂದ್ರರುಂ ಘಟೋದ್ಭವನ ಧನು॥
ರ್ವೇದಮನೆ ಕಲಲ್ ಬಂದಾ।
ಳಾದರ್ ವಿದ್ಯಾಪ್ರಭಾವಮಾ ದೊರೆತೆ ವಲಂ ॥ ೫೬ ॥

ದ್ರೋಣಂ ಗಡಮಿಷುವಿದ್ಯೆಗೆ।
ಜಾಣಂ ಗಡಮೆಂದು ಕೇಳ್ದು ಕೌರವರ್ಗೆಲ್ಲಂ॥
ಪ್ರಾಣಂ ಬರ್ಪಾಕೃತಿಯೊಳೆ।
ಬಾಣಾಸನ ಬಾಣಪಾಣಿ ಕರ್ಣಂ ಬಂದಂ ॥ ೫೭ ॥

ವ॥ಅಂತು ಬಂದು ವೈರಿಗಜಘಟಾವಿಘಟನನೊಳ್ ವಿಘಟಿಸಿ ಬಿಲ್ಗಲ್ತು-

ಕಂ॥ ಕೆಳೆಯುಂ ಗುಜ್ಜಿಯುಂ ಗೊಟ್ಟಿಯು।
ಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್॥
ಮುಳಿಸುಂ ನೋವುಂ ಕಲುಷಮು।
ಮಳುಂಬಮೆನೆ ತನಗರಾತಿಕಾಳಾನಳನೊಳ್ ॥ ೫೮ ॥

ವ॥ಅಂತು ಕರ್ಣಂ ಗುಣಾರ್ಣವನೊಳ್ ಸೆಣಸಿ ಪಗೆಯನಭ್ಯಾಸಂಗೆಯ್ವಂತೆ ವಿದ್ಯಾಭ್ಯಾಸಂಗೆಯ್ಯೆ-

---

1. ೞಂ (ಕ.ಖ.ಗ.ಘ.).

ಕಂ|| ಮನದೊಳೊಗೆದನ್ಯಜನ್ಮದ ।
ಮುನಿಸದು ಕಣ್ಣಿಂ ತುಳುಂಕೆ ಸೈರಿಸದವನು ॥
ರ್ವಿನ ಕಲಿತನಕ್ಕೆ ದುರ್ಯೋ ।
ಧನನುಂ ಭೀಮನೊಳೆ ಸೆಣಸಿ ಗದೆಯುಂ ಕಲ್ತಂ ॥ ೫೯ ॥

ವ|| ಅಂತು ಭಾರದ್ವಾಜನಾಗಾಮಿಕ ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂ ಗೆಯ್ಯುತ್ತಿರೆ ದೇಶಾಧೀಶ್ವರರಪ್ಪ ಪಲಂಬರ್ ರಾಜಕುಮಾರರ ನಡುವೆ ತಾರಾಗಣಂಗಳ ನಡುವಣ ಸಕಳ ಕಳಾಧರನಂತೆ ಶಸ್ತ್ರಕಳಾಧರನಾಗಿ ತನ್ನುಮಂ ಗೆಲೆವಂದ ಸಾಮಂತ ಚೂಡಾಮಣಿಯ ಶರಪರಿಣತಿಯನಾರಯಲೆಂದು—

ಕಂ|| ಛಾಯಾ ಲಕ್ಷ್ಯಮನೊಡ್ಡಿಯು ।
ಮಾಯದ ನೀರೊಳಗೆ ತನ್ನನಡಸಿದ ನೆಗಱಿಂ ॥
ಬಾಯಱುವಿನಮಿಸಿಸಿಯುಮರೆ ।
ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗೞ್ದಂ ॥ ೬೦ ॥

ವ|| ಅಂತು ಪೊಗೞ್ದು ತನ್ನ ಪಗೆವನಪ್ಪ ದ್ರುಪದನನೀತನಮೋಘಂ ಗೆಲಲ್ ನೆಱೆಗುಮೆಂದು ನಿಶ್ಚೈಸಿ—

ಚಂ|| ಅಣುಗಿನೊಳೆನ್ನ ಚಟ್ಟರೊಳಗೀತನೆ ಜೆಟ್ಟಿಗನೆಂದು ವಿದ್ದೆಯುಂ ।
ಗುಣಕಱಗೊಂಡು ಕೊಟ್ಟೆನಗೆ ಸಂತಸಮಪ್ಪಿನಮೀವ ನಿನ್ನ ದ ॥
ಕ್ಷಿಣೆಯದು ಬೇಗಮಾ ದ್ರುಪದನಂ ಗಡ ಕೋಡಗಗಟ್ಟುಗಟ್ಟಿ ತಂ ।
ದಣಿಯುರಮೊಪ್ಪಿಸಿಂತಿದನೆ ಬೇಡಿದೆನಾಂ ಪರಸೈನ್ಯಭೈರವಾ ॥ ೬೧ ॥

ವ||ಎಂಬುದುಮಿಾ ಬೆಸನದಾವುದು ಗಹನಮೆಂದು ಪೂಣ್ದು ಪೋಗಿ—

ಮ|| ಒಡವಂದಂಕದ ಕೌರವರ್ ದ್ರುಪದನಂಬೇಱಂಗೆ ಮೆಯ್ಯೊಡ್ಡದೊ ।
ಡ್ಡೊಡೆದೋಡುತ್ತಿರೆ ಸೂಸೆ ಬೀೞ್ವ ತಲೆಗಳ್ [1]ಸೂೞ್ಪಟ್ಟನಾಗಳ್ ಜವಂ ।
ಪಿಡಿದೀಡಾಡುವ ಮಾೞ್ಕೆಯಂತೆ ಪಲರಂ ಕೊಂದಿಕ್ಕಿ ಮೆಯ್ಯುಮ್ಮಟ್ಟೆವಂ ।
ದೆಡೆಯೊಳ್ ಮಾಣದುರುಳ್ಚಿ ಕಟ್ಟಿ ರಿಪುವಂ ಮುಂದಿಕ್ಕಿದಂ ದ್ರೋಣನಾ||೬೨||

ವ||ಆಗಳಾ ಕುಂಭಸಂಭವಂ ಪರಾಕ್ರಮಧವಳನ ಪರಾಕ್ರಮಕ್ಕೆ ಮೆಚ್ಚಿ ಕದಂಪಂ ಕರ್ಚಿ ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟವೇೞ್ದು ತಲೆಯ ಮೇಲೆ ಕಾಲನವಷ್ಟಂಭದಿಂ ನೀಡಿ—

1. ಕೈಪಟ್ಟ (ಕ. ಖ.).

ಕಂ॥ ಸಿರಿಮೆಯ್ಯೊಳಗಂದಱಿವಿರೆ।
ನೆರವಿಯೊಳಾರಱಿವರೊರ್ಮೆ ಕಂಡರನಱಿಯ॥
ಲ್ಕರಿದೆಮ್ಮಂ ಬಡ ಪಾರ್ವರ।
ನರಸರೆ ನೀವಿಗಳಱಿವಿರಱಿಯಿರೊ ಪೇೞಿಂ ॥ ೬೩ ॥

ವ॥ಎಂದು ಸಾಯೆ ಸರಸಂ ನುಡಿದು ಮತ್ತಮಿಂತೆಂದಂ—

ಕಂ॥ ಆದಿ ಕ್ಷತ್ರಿಯರೇ ನೀ।
ಮಾದಿತ್ಯನನಿಳಿಪ ತೇಜ[1]ರಿರ್ ಪಾರ್ವನ ಕಾಲ್॥
ವೋದೆ ನಡುತಲೆಯಲಿರ್ಪುದು।
ಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊಡೆದಂ ॥ ೬೪ ॥

ವ॥ಒಡೆದು ನಿನ್ನನಿನಿತು ಪರಿಭವಂಬಡಿಸಿದುದು ಸಾಲ್ಗುಂ ನಿನ್ನಂ ಕೊಲಲಾಗದು ಕೊಂದೊಡೆ ಮೇಲಪ್ಪ ಪಗೆಗಂಜಿ ಕೊಂದಂತಾಗಿರ್ಕುಮೆಂದು ಕಟ್ಟಿದ ಕಟ್ಟುಗಳೆಲ್ಲಮಂ ತಾನೆ ಬಿಟ್ಟು ಕಳೆದು ಪೋಗೆಂಬುದುಂ ದ್ರುಪದಂ ಪರಿಭವಾನಳನಳವಲ್ಲದಳುರೆ ನಿನ್ನಂ ಕೊಲ್ವನ್ನನೊರ್ವ ಮಗನುಮಂ ವಿಕ್ರಮಾರ್ಜುನಂಗೆ ಪೆಂಡತಿಯಪ್ಪನ್ನಳೊರ್ವ ಮಗಳುಮಂ ಪಡೆದಲ್ಲದಿರೆನೆಂದು ಮಹಾ ಪ್ರತಿಜ್ಞಾರೂಢನಾಗಿ ಪೋದನಿತ್ತ ಭಾರದ್ವಾಜಂ ಪಾಂಡವ ಕೌರವರ್ಕಳ ಮೆಯ್ಯೊಳ್ ವಿದ್ದೆಯಂ ನೆಱೆಯೆ ಸಂಕ್ರಮಿಸಿದ ತನ್ನ ವಿದ್ಯಾಮಹಿಮೆಯಂ ಮೆಱೆಯಲ್ಕೆ ಬಾಹ್ಲೀಕ ಭೂರಿಶ್ರವಸ್ಸೋಮದತ್ತ ಗಾಂಗೇಯ ಧೃತರಾಷ್ಟ್ರ ವಿದುರರ್ಕಳ್ಗಿಂತೆಂದಂ–

ಕ॥ ನೆಱೆಯೆ ಧನುರ್ವಿದ್ಯೆಯು ಕ।
ಣ್ದೆ[2]ಱಿವಿನೆಗಂ ಕಲ್ತ ನಿಮ್ಮ ಮಕ್ಕಳ ಮೆಯ್ಯೊಳ್॥
ಮೆಱೆದಪ್ಪೆನೆನ್ನ ವಿದ್ದೆಯ।
ನಱಿದೊಯ್ಕನೆ ನೆರೆದು ನೋೞ್ಪುದನಿಬರುಮಿಗಳ್ ॥ ೬೫ ॥

ವ॥ ಎಂದೊಡತೆಂಗೆ[3][ಯ್ವ]ಮೆಂದನಿಬರುಮೊಡಂಬಟ್ಟು ಪೊಱವೊೞಲೊಳುತ್ತರ ದಿಶಾಭಾಗದೊಳ್ ಸಮ ಚತುರಸ್ರಮಾಗೆ ನೆಲನನಳೆದು ಕಲ್ಲಂ ಪುಲ್ಲುಮಂ ಸೋದಿಸಿ ಶುಭದಿನ ಶುಭಮುಹೂರ್ತದೊಳ್–

ಕಂ॥ ಗಟ್ಟಿಸಿ ಸಿಂಧುರದೊಳ್ ನೆಲ।
ಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್॥
ಕಟ್ಟಿಸಿ ಪೞಯಿಗೆಗಳನಳ।
ವಟ್ಟರೆ ಬಿಯಮಲ್ಲಿ ಮೊೞಗೆ ಪಲವುಂ ಪಱೆಗಳ್ ॥ ೬೬ ॥

1. ದಿಂ (ಕ. ಗ.); 2. ಱಿವುದುಮಾದತ್ತು (ಕ.); 3. ಯ್ವ (ಸ.).

ವ॥ ಅಂತು ಸಮೆದ ವ್ಯಾಯಾಮ ರಂಗಕ್ಕೆ ಗಾಂಗೇಯ ಧೃತರಾಷ್ಟ್ರ ವಿದುರ ಸೋಮದತ್ತ ಬಾಹ್ಲೀಕ ಭೂರಿಶ್ರವಾದಿ ಕುಲವೃದ್ಧರುಂ ಕುಂತಿ ಗಾಂಧಾರಿಗಳುಂ ವೆರಸು ಬಂದು ಕುಳ್ಳಿರೆ—

ಕಂ॥ ಅರಸಿಯರನಣುಗರಂ ಬೇ।
ಟ್ಪರುಮಂ [1]ವೊನೆಗಾಱರಂ ಪ್ರಗೀತರನಿಂಬಾ॥
ಗಿರೆ ಚೌಪಳಿಗೆಗಳೊಳ್ ಕು।
ಳ್ಳಿರಿಸಿದರೊಡನೆಸೆಯೆ ನೆರೆದ ಪುರಜನ ಸಹಿತಂ ॥ ೬೭ ॥

ವ॥ ಆಗಳ್ ಕುಂಭಸಂಭವಂ—

ಕಂ॥ ಪೊಸ ಮುತ್ತಿನ ತುಡಿಗೆ ಪೊದ।
ಟ್ದಿಸೆಯೆ ದುಕೂಲಾಂಬರಂ ನಿಜಾಂಗದೊಳಂ ಸಂ॥
ದೆಸೆದಿರೆ ಬೆಳ್ಮುಗಿಲಿಂದಂ।
ಮುಸುಕಿದ ನೀಲಾದ್ರಿ ಬರ್ಪ ತೆಱದೊಳ್ ಬಂದಂ ॥ ೬೮ ॥

ವ॥ ಅಂತು ಬಂದು ರಂಗಭೂಮಿಯ ನಡುವೆ ನಿಂದು—

ಕಂ॥ ನೆಗಟ್ದಿರೆ ಪುಣ್ಯಾಹ ಸ್ವರ।
ವೊಗೆದಿರೆ ಪಟು ಪಟಹ ಕಾಹಳಾ ರವವಾಗಳ್॥
ಪುಗವೇಟ್ದಂ ವಿವಿಧಾಸ್ತ್ರ।
ಪ್ರಗಲ್ಭರಂ ತನ್ನ ಚಟ್ಟರಂ ಕಳಶಭವಂ ॥ ೬೯ ॥

ಅಂತು ಪುಗವೇಟ್ಟುದುಂ ದಿ।
ಗ್ದಂತಿಗಳುಂ ಕುಲನಗಂಗಳುಂ ಗಡಣಂಗೊಂ॥
ಡೆಂತು ಕವಿತರ್ಪುಮಂತೆ ನೆ।
ಲಂ ತಳರ್ವಿನೆಗಂ ಪ್ರಚಂಡ ಕೋದಂಡ[2]ಧರರ್ ॥ ೭೦ ॥

ವ॥ ಅಂತು ಧರ್ಮಪುತ್ರನಂ ಮುಂ[3]ತಿಟ್ಟು ಭೀಮಾರ್ಜುನ ನಕುಲ ಸಹದೇವರುಂ ದುರ್ಯೋಧನನಂ ಮುಂತಿಟ್ಟು ಯುಯುತ್ಸು ದುಶ್ಶಾಸನ ದುಸ್ಸಹ ದುಸ್ಸಳ ಜರಾಸಂಧ ಸತ್ಯಸಂಧ ನಿಸ್ಸಹ ರಾಜಸಂಧ ವಿಂದ ಅನುವಿಂದ ದುರ್ಮತಿ ಸುಬಾಹು ದುಸ್ಪರ್ಶನ ದುರ್ಮರ್ಷಣ ದುರ್ಮುಖ ದುಷ್ಕರ್ಣ ವಿಕರ್ಣ ವಿವಿಂಶತಿ ಸುಲೋಚನ ಸುನಾಭ ಚಿತ್ರ ಉಪಚಿತ್ರ ನಂದ ಉಪನಂದ ಸುಚಿತ್ರಾಂಗದ ಚಿತ್ರಕುಂಡಲ ಸುಹಸ್ತ ದೃಢಹಸ್ತ ಪ್ರಮಾಥಿ ದೀರ್ಘಬಾಹು ಮಹಾಬಾಹು ಪ್ರತಿಮ ಸುಪ್ರತಿಮ ಸಪ್ರಮಾಥಿ ದುರ್ಧರ್ಷಣ ದುಷ್ಪರಾಜಯ ಮಿತ್ರ ಉಪಮಿತ್ರ ಚೌಳೋಪ ದೃಢ ಹಸ್ತ ಪ್ರತೀಪ ಸಪ್ರತೀಪ ಪ್ರಹಸ್ತ ಪ್ರತಾಪ ಪ್ರಮುದ ಸದ್ಬಾಹುಗಳ್ ಮೊದಲಾಗಿ ನೂರ್ವರುಂ ಬಂದು—

1. ಪೊಣೆ (ಕ.); 2. ರವರ್ (ಕ.), ರವಂ (ಖ.ಘ.); 3. ದಿ (ಕ.ಖ.ಗ.).

ಕಂ॥ ಗದೆಯೊಳ್ ಬಿಲ್ಲೊಳ್ ಗಜದೊಳ್ ।
ಕುದುರೆಯೊಳಂ [1]ರಥದೊಳಸ್ತ್ರಕೌಶಲದೆ ಬೆಡಂ ॥
ಗೊದವಿರೆ ತೋಱದರವರೊ ।
ರ್ವೊದಲೆ ಜನಂ ಪೊಗೞೆ ನೆಗೞೆ ಜಳನಿಧಿ ನಿನದಂ ॥ ೭೧ ॥

ವ॥ ಅಂತವರಿಂ ಬೞಯಂ—

ಕಂ॥ ಆದ ಮುಳಿಸಿಂದಮಾಗಳ್ ।
ಮೋದುವ ಬಗೆ ಬಳೆಯೆ ಪಿಡಿದ ಗದೆಗಳ[2]ನಿಳಿಪಂ ॥
ತಾದುದು ಸುಯೋಧನೋಗ್ರ ವೃ ।
ಕೋದರರೊರ್ವೊದಲೆ ಶಿಖರಮುಳ್ಳೆರಡಗಮಂ ॥ ೭೨ ॥

ವ॥ ಅಂತಿರ್ವರುಮೊರ್ವರೊರ್ವರೊಳ್ ಸೆಣಸಿ ಬಹುಪ್ರಯೋಗ ಗದಾಕೌಶಲಮಂ ತೋಱಲೆಂದು—

ಕಂ॥ ಗೆಡೆ[3]ವಚ್ಚಿರ್ವರ್ ಮನಗೊಂ ।
ಡೊಡನೊಡನೋರಂತು ತಗುಳ್ದು ಝೋಂಕರಿಸಿದೊಡೆ ॥
ಲ್ವಡಗಾಗೆ ಮೋದಲೆಂದಿ ।
ರ್ದಡೆಯೊಳ್ ಗುರು ತನ್ನ ಮಗನನೆಡೆವುಗವೇೞ್ದಂ ॥ ೭೩ ॥

ವ॥ ಅಂತು ಮೇರೆದಪ್ಪಲ್ ಬಗೆದ ಮಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡಿರ್ವರುಮೆರಡುಂ ದೆಸೆಗೆ ತೊಲಗಿ ನಿಂದಾಗಳ್—

ಕಂ॥ ಆ ದೂರ್ವಾಂಕುರ ವರ್ಣದೊ ।
ಳಾದವೊಡಂಬಟ್ಟ ಕನಕ ಕವಚಂ ರಾಜ ॥
ತ್ಕೋದಂಡಮಮರ್ದ ದೊಣೆ ಕ ।
[4][ಣ್ಣಾದ]ಮೆ ಬರೆ ಬಂದು ಮುಂದೆ ನಿಂದಂ ಹರಿಗಂ ॥ ೭೪ ॥

ವ॥ ಆಗಳ್ ಕುಂಭಸಂಭವನುಲಿವ ಜನದ ಕಳಕಳ ರವಮುಮಂ ಮೊಱಗುವ ಪಱ[3]ಗಳುಮಂ ಬಾರಿಸಿ—

ಕಂ॥ ಈತಂ ಗುಣಾರ್ಣವಂ ವಿ ।
ಖ್ಯಾತ ಯಶಂ ವೈರಿಗಜಘಟಾವಿಘಟನನಿಂ ॥
ತೀತನ ಸಾಸಸಮುಪಮಾ ।
ತೀತಮಿದಂ ನೋಡಿಮೆಂದು ನೆರವಿಗೆ ನುಡಿದಂ ॥ ೭೫ ॥

---

1. ಶಸ್ತ್ರ ಸೌಷ್ಠವದೊಳೆ ಬೆಡಂಗುಂ । ಪುದಿದಿರೆ (ಕ.ಖ.ಗ.ಘ.); 2. ನಿಡುವಂ (ಕ.ಖ.ಗ.); 3. ವೆಚ್ಚಿರ್ (ಕ.); 4. ಣ್ಗೇ. ಯೆ (ಕ.), ಣ್ಗಸೆಯೆ (ಖ.ಗ.ಘ.).

ವ|| ಆ ಪ್ರಸ್ತಾವದೊಳ್—

ಚಂ|| ಒಡೆಗುಮಜಾಂಡಮಿನ್ನಿನಿಸು ಜೇವೊಡೆದಾಗಳೆ ಬೊಮ್ಮನುಂ ಮನಂ|
ಗಿಡುಗುಮದೇವುದೆಂದು ಮಿಡಿದೊಯ್ಯನೆ ಜೇವೊಡೆದಾಗ[1][ಳಂ]ಬನಂ||
[ಬೊ]ಡನೊಡನೀಂಬುವೆಂಬನಿತು ಸಂದೆಯಮಪ್ಪಿನಮಸ್ತ್ರ ಜಾಲದಿಂ|
ತಡೆಯದೆ ಪಂಜರಂಬಡೆದನಂದು ವಿಯತ್ತಳದೊಳ್ ಗುಣಾರ್ಣವಂ || ೭೬ ||

ವ|| ಮತ್ತಮೈಂದ್ರ ವಾರುಣ ವಾಯವ್ಯಾಗ್ನೇಯ ಪಾರ್ವತಾದಿ ಬಾಣಂಗಳಂ ತುಡೆ—

ಚಂ|| ಕವಿದುವು ಕಾಳ ನೀಳ ಜಳದಾವಳಿ ವಾರಿಧಿಗಳ್ ಧರಿತ್ರಿಯಂ|
ಕವಿದುವು ಗಾಳಿಗಳ್ ಪ್ರಳಯಕಾಲಮನಾಗಿಸಲೆಂದೆ ಲೋಕಮಂ||
ಕವಿದುವು ಮೊಕ್ಕಳಂ ಕವಿದುವುಗ್ರ ಲಯಾಗ್ನಿಗಳಂತೆ ಬೆಟ್ಟುಗಳ್|
ಕವಿದುವಿವೆಂಬನಿತ್ತು ಭಯಮಾಯ್ತು ಗುಣಾರ್ಣವನಸ್ತ್ರಕೌಶಲಂ || ೭೭ ||

ವ|| ಆಗಳಾ ಪರಾಕ್ರಮಧವಳನ ಶರಪರಿಣತಿಯಂ ಕಂಡು ದುರ್ಯೋಧನನ ಮೊಗಂ ತಲೆನವಿರ ಗಂಟಿಂ ಕಿಱಿದಾಗೆ ದ್ರೋಣ ಭೀಷ್ಮ ಕೃಪ ವಿದುರ ಪ್ರಭೃತಿಗಳ ಮೊಗಮರಲ್ದ ತಾವರೆಯಿಂ ಪಿರಿದಾಗೆ—

ಕಂ|| ತೊಳಗುವ ತೇಜಂ [2]ತೊಳತೊಳ|
ತೊಳಗುವ ದಿವ್ಯಾಸ್ತ್ರಮಮರ್ದ ಕೋದಂಡಮಸುಂ||
ಗೊಳಿಸೆ [3]ಮನಂಗೊಳಿಸೆ ಭಯಂ|
ಗೊಳಿಸೆ ಸಭಾಸದರನುಱದೆ ಕರ್ಣಂ ಬಂದಂ || ೭೮ ||

ವ|| ಬಂದು ದ್ರೋಣಾಚಾರ್ಯಂಗೆ ಪೊಡಮಟ್ಟು ಶರಧಿಯಿಂ ದಿವ್ಯಾಸ್ತ್ರಂಗಳನುರ್ಚಿಕೊಂಡು—

ಕಂ|| ಅಱಿಗನ ಬಿಲ್ಬಲ್ಮೆಯೊ[4]ಳಂ|
ದೆರಡಿಲ್ಲದೆ ಬಗೆ[5][ದ] ಮುಳಿಸುಮೇವಮುಮೆರ್ದೆಯೊಳ್||
[6]ಬರೆದಿರೆ ತೋಱಿದನಾಯತ|
ಕರ [7]ಪರಿಘಂ ಕರ್ಣನಾತ್ಮ ಶರಪರಿಣತಿ[8]ಯಂ || ೭೯ ||

---

1. ಳುರ್ವ್ವಿಯುಂ || ತೊಡೆದೊಡನಿಂ (ಕ.), ಮುರ್ವ್ವಿಯ || ನಂಬನಂಬುಗಳು ತಳು ದೊಡನಿಂ (ಖ.), ಮುರ್ವಿಯನಂಬನಂಬುಗಳು ತ || ಳ್ತೊಡ ವಿಂ (ಗ.), ಮೌರ್ವ್ವಿಯ ನಂಬನಂಬುಗಳ್ ತ || ಳ್ತೊಡನಿಂ (ಘ.), . . . . . . || . . . ನೊಡನೀದುವೆಂಬ (ಘ§.); 2. ತಳ ತಳ (ಕ.ಗ.); 3. ಜನ ಮನಕೆ ಭಯಮಂ | ಕೊಳಿಸಿ (ಕ.); 4. ಳೆರ | ಡಿರದೇವಲ್ಬಗೆದು (ಕ.), ಳೆರ | ಡಿಲ್ಲದೆ ವಲು ಬಗದು (ಖ.ಗ.), ಲಂ. | ದೆರಡಿಲ್ಲದೆ ವಲ್ (ಘ.); 5. ದು (ಸ.); 6. ಪುದಿದಿರೆ (ಖ.ಗ.ಘ.); 7. ಪರೆಪಂ (ಕ.); 8. ಯಿಂ (ಸ.).

ವ॥ ಅಂತು ತೋಱಿಯುಮೆರ್ದೆಯ ಮುಳಿಸು ನಾಲಗೆಗೆ ವರೆ ಸೈರಿಸಲಾಱದೆ ವಿದ್ವಿಷ್ಟ ವಿದ್ರಾವಣನನಿಂತೆಂದಂ—

ಕಂ॥ ಸಂಗತದಿನೀಗಳಿಂತೀ ।
ರಂಗಮೆ ರಣರಂಗಮಾಗೆ ಕಾದುವಮಳವಂ ॥
ಪೊಂ[1]ಗದಿರಿದಿರ್ಚದೇಂ ಗಳ ।
ರಂಗಂಬೊಕ್ಕಾಡುವಂತೆ ಪೆಂಡಿರೆ ಗಂಡರ್ ॥ ೯೦ ॥

ವ॥ ಎಂಬುದುಮತಿರಥಮಥನನಿಂತೆಂದಂ—

ಕಂ॥ ಈ ನೆರೆದ ಗುರುಜನಂಗಳ ।
ಮಾನಿನಿಯರ ಮುಂದೆ ಕರ್ಣ ಪೊಲ್ಲದು ನುಡಿದೈ ॥
ನೀನೆನ್ನೀ ನಿಡುದೋಳ್ಗಳ ।
ತೀನಂ ಮಾಣ್ಗಿಸುವೆಯಪ್ಪೊಡಾನೊಲ್ಲದನೇ ॥ ೯೧ ॥

ವ॥ ಎಂಬುದುಂ ದ್ರೋಣನುಂ ಕೃಪನುಮೆಡೆಗೆ ವಂದು ಕರ್ಣನನಿಂತೆಂದರ್—

ಕಂ॥ ಏವದ ಮುಳಿಸಿನ ಕಾರಣ ।
ಮಾವುದೊ ನೀಂ ನಿನ್ನ ತಾಯ ತಂದೆಯ ದೆಸೆಯಂ ॥
ಭಾವಿಸದೆ ಕರ್ಣ ನುಡಿವಂ ।
ತಾವುದು ಸಮಕಟ್ಟು ನಿನಗಮರಿಕೇಸರಿಗಂ ॥ ೯೨ ॥

ವ॥ ಎಂಬುದುಮಾ ಮಾತಿಂಗೆ ಮಱುಮಾತುಗುಡಲಱಿಯದೆ ಪಂದೆಯಂ ಪಾವಡರ್ದಂತುಮ್ಮನೆ ಬೆಮರುತ್ತುಮಿರ್ದ ಕರ್ಣನಂ ದುರ್ಯೋಧನಂ [2]ಕಂಡು ದ್ರೋಣನುಮಂ ಕೃಪನುಮನಿಂತೆಂದಂ—

ಕಂ॥ ಕುಲಮೆಂಬುದುಂಟೆ ಬೀರಮೆ ।
ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀ ॥
ಮೊಲಿದೆಲ್ಲಿ ಪುಟ್ಟಿ ಬಳೆದಿರೊ ।
ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ ॥ ೯೩ ॥

ವ॥ ಎಂದು ನುಡಿದು ಕರ್ಣನನೀಗಳೆ ಕುಲಜನಂ ಮಾಡಿ ತೋರ್ಪೆನೆಂದು ಕೆಯ್ಯಂ ಪಿಡಿದೊಡಗೊಂಡು ಪೋಗಿ ಕನಕ ಪೀಠದ ಮೇಲೆ ಕುಳ್ಳಿರಿಸಿ ಕನಕ ಕಳಶದ[3] [ಲ್] ತೀವಿದಗಣ್ಯಪುಣ್ಯ ತೀರ್ಥೋದಕಂಗಳಂ ಚತುರ್ವೇದಪಾರಗರಿಂದಭಿಷೇಕಂಗೆಯ್ಸಿ—

---

1. ಗುವೊಡಿದಿ (ಘ§.); 2. ಕೈಕೊಂಡು (ಕ.ಖ.ಗ.); 3. ಲ್ಲಿ (ಕ.), ಲಿ (ಖ.ಗ.), ಲು (ಘ.).

ಕಂ॥ ಮಂಗಳವಱಿಗಳ್ ಶುಭ ವಚ।
ನಂಗಳ್ ಚಮರೀರುಹಂಗಳಾ ಶ್ವೇತಚ್ಛ॥
ತ್ರಂಗಳಮರ್ದೆಸೆಯೆ ಕರ್ಣಂ।
ಗಂಗ ಮಹೀ[1]ತಳ ವಿಭೂತಿಯಂ ನೆಱಿಯಿತ್ತಂ ॥ ೮೪ ॥

ವ॥ ಅಂತಿತ್ತು ನಿತ್ಯದಾನಕ್ಕೆ ದೇವ ಸಬಳದ ಪದಿನೆಂಟು ಕೋಟಿ ಪೊನ್ನುಮ ನಿತ್ತು ನೀನೆನಗೊಂದನೀಯ[2]ಲ್ವೇಟ್ಪುದೆಂದು—

ಕಂ॥ ಪೊಡಮಡುವರ್ ಜೀಯೆಂಬರ್।
ಕುಡು ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್॥
ನಡೆಗೆಮ್ಮ ನಿನ್ನಯೆಡೆಯೊಳ್।
ನಡೆಯಲ್ವೇಡೆನಗೆ ಕೆಳೆಯನ್ನೆ ರಾಧೇಯಾ ॥ ೮೫ ॥

ವ॥ ಎಂದು ಬೇಡಿಕೊಂಡು ಕರ್ಣನಂ ಮುಂದಿಟ್ಟೊಡಗೊಂಡು ಪೋಗಿ ಧೃತ ರಾಷ್ಟ್ರಂಗಂ ಗಾಂಧಾರಿಗಂ ಪೊಡಮಡಿಸಿದಾಗಳ್—

ಉ॥ ಇಂತು ಸುಯೋಧನಂ ನಿನಗೆ ಮಾಡಿದ ರಾಜ್ಯ ವಿಭೂತಿಗುಂತೆ ಮು।
[3]ಯ್ವಾಂತಿರದಿರ್ ಗುಣಾರ್ಣವನಿನಸ್ತಮಯಕ್ಕಿದು ಸಾಲ್ಗುವಿಾಗಳೆಂ॥
ಬಂತೆವೊಲಂದು ಮುಂದಱಿದು ತನ್ನ ಮಗಂಗೆ ಸಮಂತು ಬುದ್ಧಿವೇ।
ಳ್ವಂತೆವೊ[4][ಲತ್ತ]ಲಸ್ತಗಿರಿಯಂ ಮಱಿಗೊಂಡುದು ಸೂರ್ಯಮಂಡಲಂ ॥ ೮೬ ॥

ವ॥ ಆಗಳ್ ದುರ್ಯೋಧನನಂ ಮುಂದಿಟ್ಟೊಡಗೊಂಡು ಧೃತರಾಷ್ಟ್ರ ಕರ್ಣ ಶಲ್ಯ ಶಕುನಿ ಸೈಂಧವ ಪ್ರಭೃತಿಗ[5]ಳ್ ನೆಲಂ ಮೂರಿವಿಟ್ಟಂತೆ ಸಭಾಕ್ಷೋಭಮಾಗೆ ತಳರ್ದು ನಾನಾ ವಿಧ ವಾಹನಂಗಳನೇಱಿ ನಿಜ ನಿವಾಸಂಗಳ್ಗೆ ಪೋದರಿತ್ತ ಧರ್ಮ ಪುತ್ರನಂ ಮುಂದಿಟ್ಟು ಭೀಮಾರ್ಜುನ ನಕುಲ ಸಹದೇವರುಂ ಗಾಂಗೇಯ ದ್ರೋಣ ಕೃಪ ವಿದುರ ಪ್ರಭೃತಿಗಳ್ ನಾನಾವಿಧ ವಾಹನಂಗಳನೇಱಿ ಬರೆ ಪುರಜನಂಗಳೆಲ್ಲ ಮೋರೊರ್ವರನೆ ಪಿಡಿಯಚ್ಚುವಿಡಿದು ನುಡಿಯೆ ಕೆಲರನಾಗತಮನಱಿವ ಬುದ್ಧಿ ಯೊಡೆಯರಿಂತೆಂಬರ್—

1. ಮಂಡಳಾಧಿಪತ್ಯಮನಿತ್ತಂ (ಕ.), ತಳಾಧಿಪತ್ಯಮನಿತ್ತಂ (ಖ.); 2. ದಿರವೇಟ್ಪ್ಪಿ (ಕ.), ದೆವೆಳ್ಪ್ಪ (ಖ); 3. ಯ್ವಾಂ (ಕ. ಖ. ಗ.); 4. ಲಸ್ತ ಶೈಲಮುಮನೇ (ಕ. ಗ.); 5. ಳೆಲ್ಲಂ ಮೂಲೆ (ಕ.), ಳನೆಲ್ಲಂ ಮೂಲೆ (ಖ.), ಳ ನೆಲಂ ಮೂರಿಟ್ಟಂತೆ (ಗ.).

ಚಂ॥ ಆವರಿವರನ್ನರಿನ್ನರೆನವೇಡರಿಕೇಸರಿಗಾಂಪನಿಲ್ಲ ಮೀ।
ಱುವ ತಲೆದೋರ್ಪ ಗಂಡರಣಮಿಲ್ಲೆಡೆಯೊಳ್ ಗೆಡೆ[1]ವಚ್ಚುಗೊಂಡು ಪಾಂ॥
ಡವರನಕಾರಣಂ ಕೆಣಕಿದೀ ಪೊಸ ಪೊಟ್ಟುೞೊಳಾದ ಕಿರ್ಚು ಕೌ।
ರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ತು ಪೋಕುಮೇ ॥ ೮೭ ॥

ವ॥ ಎಂದೊರ್ವರೊರ್ವರೊಂದೊಂದನೆ ನುಡಿಯುತ್ತುಂ ಪೋಗೆ ಬೆಳಗುವ ಕೈದೀವಿಗೆಗಳ್ ಕಟ್ಟಲೆಯುಂ ತಲೆದೋಱಲೀಯದೆ ಪ್ರಚಂಡ ಮಾರ್ತಾಂಡನ ತೇಜೋಂಕುರಂಗಳ್ ಬೆಳಗುವಂತೆ ಬೆಳಗೆ ಪಾಂಡವರ್ ನಿಜನಿವಾಸಕ್ಕೆ ಪೋದರಾಗಳ್—

ಕಂ॥ ಎಸೆವ ನಿಜವಂಶಮಂ ಪೆ।
ರ್ಚಿಸುವ ಗುಣಾರ್ಣವನೊಳುಂತೆ ಸೆಣಸಲ್ಕೆಂದಿ॥
ರ್ಪ ಸುಯೋಧನಂಗೆ [2]ಮುಳಿಸಿಂ।
ಕಿಸುಗಣ್ಚಿದ ತೆಱದಿನಮೃತಕರನುದಯಿಸಿದಂ ॥ ೮೮ ॥

ವ॥ ಆಗಳ್ ದುರ್ಯೋಧನಂ ಭೀಮಸೇನನ ಬಲ್ಲಾಳ್ತನದಳವುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರ ಕೌಶಳಮುಮಂ ಕಂಡು ತನ್ನೆರ್ದೆಯುಂ ಪೊಳ್ಳುಮರನಂ ಕಿರ್ಚಳುರ್ವಂತೊಳಗೊಳಗಳುರೆ ಸೈರಿಸಲಾಱದೆ ಕರ್ಣನಂ ಕರೆದಾಳೋಚಿಸಿ ತಮ್ಮಯ್ಯನಲ್ಲಿಗೆ ಪೋಗಿ ಪೊಡಮಟ್ಟು ಕಟ್ಟೇಕಾಂತದೊಳಿಂತೆಂದಂ—

ಮ॥ ಪಿರಿಯರ್ ನೀಮಿರೆ ಪಾಂಡುರಾಜನೆ ವಲಂ ಮುಂ ಪಟ್ಟಮಂ ಕಟ್ಟಿ ಭೂ।
ಭರಮಂ ತಾಳ್ದಿದನೀಗಳಾತನ ಸುತರ್ ತಾಮಾಗಳೇ ಯೋಗ್ಯರಾ॥
ಗರೆ ಪಟ್ಟಕ್ಕೆ ತಗುಳ್ದು ಪಾಲನೆೞವಿರ್ ಪಾವಿಂಗೆ ದಾಯಾದ್ಯರಂ।
ಪಿರಿಯುರ್ಮಾಡಿದಿರೆಮ್ಮ ಸಾವುಮುೞವುಂ ದೈವೇಚ್ಛೆಯಾಯ್ತಾಗದೇ॥ ೮೯ ॥

ವ॥ ಅದಲ್ಲದೆಯುಂ—

ಚಂ॥ ಮಲೆ ತಲೆದೋಱಿದೆಂದುದನೆ *ಕೊಟ್ಟುದಡಂಗಮಡಂಗಿ ಬಂದೊಡೊ* ।
ಕ್ಕಲಿಗವೆಸರ್ಗೆ ಪೂಣ್ದುದು ಕುಱುಂಬು ತಱುಂಬದೆ ಮಿಕ್ಕ ಶತ್ರು ಮಂ॥
ಡಳಿಕರೆ ಮಿತ್ರಮಂಡಳಿಕರಾದರನಾಕುಳಮಿಂದು ನಾಳೆ ಮಾ।
ರ್ಮಲೆದರನಿಕ್ಕಿ ನಮ್ಮನೆೞದಿಕ್ಕುಗುಮೀ ನೆಲೆಯಿಂ ಗುಣಾರ್ಣವಂ ॥ ೯೦ ॥

ವ॥ ಅಂತು ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲು ಮಾಂಪುದರಿದುಪಾಂ[3][ಶು]ವ[ಧ]ದೆ ಕೆಯ್ಗೆ ಮಾಡುವುದುತ್ತಮಪಕ್ಷಮಂತುಮಲ್ಲದೆಯುಂ—

---

1. ವೆರ್ಚು (ಕ.), ವರ್ಚು (ಖ.), ವೆಚ್ಚು (ಗ.); 2. ಕಿಸುಗ। ಣ್ಪ ಸರಿಸಿವಾ (ಕ. ಖ.); 3. ಸುವದೆ (ಸ.). *ಕೊಟ್ಟು[ದು] ಡಂಗಮಡಂಗಿ ಬಂ[ದುದೊ] (ಡಿ. ಎಲ್. ಎನ್., ಗ್ರಂಥ ಸಂಪಾದನೆ: ಪುಟ ೧೯೭.)

ಶ್ಲೋ॥ ಸ್ವಾಮ್ಯಾರ್ಥಂ ಸ್ವಾಮ್ಯ ವಿಕ್ರಾಂತಂ ಮರ್ಮಜ್ಞಂ ವ್ಯವಸಾಯಿನಂ।
ಅರ್ಧ ರಾಜ್ಯ ಹರಂ ಭೃತ್ಯಂ ಯೋ ನ ಹನ್ಯಾತ್ಸ ಹನ್ಯತೇ ॥

ಎಂಬುದರ್ಥಶಾಸ್ತ್ರ ಸದ್ಭಾವಂ—

ಉ॥ ಮೇಣ್ಕುಲವಿಲ್ಲೆಯೋ ನಮಗೆ ದಾಯಿಗ[1]ರಲ್ಲರೊ ಶಸ್ತ್ರವಿದ್ಯೆಯೊಳ್ ।
ಪೂಣ್ಕೆಗಳಿಲ್ಲೆಯೋ ಧರೆಗೆ ಮುನ್ನವರಯ್ಯನೆ ಮುಖ್ಯನಲ್ಲನೋ ॥
ಜಾಣ್ಕೆಱದಾಗವೇಡ ಮನದಲ್ ನಿಮಗಯ್ಯ ವಿಧಾತೃಯೋಗದಿಂ ।
ಕಣ್ಕುರುಡಾದೊಡೇನೊ ಕುರುಡಾಗಲೆವೇೞ್ಪುದೆ ನಿಮ್ಮ ಬುದ್ಧಿಯುಂ
॥ ೯೦ ॥

ವ॥ ಎಂದು ತನ್ನ ಮನದೊಳೊಡಂಬಡೆ ನುಡಿದ ಮಗನ ಮಾತಂ ಧೃತರಾಷ್ಟ್ರಂ ಮನದೆಗೊಂಡು—

ಉ॥ ಏನೆರ್ದೆಗೊಂಡ ಕಜ್ಜಮನೆ ಪೇೞ್ದಿಯೊ ಚಿಂತಿಸುತಿರ್ಪೆನಾನುಮೇ ।
ನಾನುಮುಪಾಯಮಂ ಬಗೆವರಂತವರ್ಗಳ್ ನಿನಗೆಂದೆ ಕಂದ ಪೇೞ್ ॥
ನೀನಿರೆ ಪಟ್ಟಮುಂ ನೆಲನುಮಪ್ಪುದನೊಲ್ವೆನೆ ವೈರಿಗಳ್ಗೆ ನೀ ।
ನೇನುಮದರ್ಕೆ ಚಿಂತಿಸದಿರಿಲ್ಲಿರಲೀವೆನೆ ಪಾಂಡುಪುತ್ರರಂ ॥ ೯೧ ॥

ವ॥ ಎಂದು ದುರ್ಯೋಧನನಂ ಬೀಡಿಂಗೆ ಪೋಗಲ್ವೇೞ್ದು ಪಾಂಡವರಯ್ವರುಮಂ ಬರಿಸಿ ಧೃತರಾಷ್ಟ್ರಂ ತೊಡೆಯನೇಱಿಸಿಕೊಂಡು ದುರ್ಯೋಧನನಪ್ಪೊಡೆ ಪೊಲ್ಲ ಮಾನಸನಾತನುಂ ನೀಮುಮೊಂದೆಡೆಯೊಳಿರೆ ಕಿಸುಱುಂ ಕಲಹಮುಮೆಂದುಂ ಕುಂದದದುಕಾರಣಂ ಗಂಗಾನದಿಯ ದಕ್ಷಿಣ ತಟದೊಳ್ ವಾರಣಾವತಮೆಂಬುದು ಪೊೞಲ್ ಕುರುಜಾಂಗಣ ವಿಷಯಕ್ಕೆ ತಿಳಕಮಪ್ಪಂತಿರ್ದುದಲ್ಲಿಗೆ ಪೋಗಿ ಸುಖಮಿರಿಮೆಂದೊಡಂತೆಗೆಯ್ವೆಮೆಂದು ಬೀೞ್ಕೊಂಡು ಬೀಡಿಂಗೆವಂದು ಗಾಂಗೇಯ ದ್ರೋಣ ಕೃಪ ವಿದುರರ್ಕಳ್ಗಂ ಕುಂತಿಗಂ ತದ್ವೃತ್ತಾಂತಮನಱಿಪಿದರನನ್ನೆಗಮಿತ್ತ ದುರ್ಯೋಧನನವರ ಪೋಗನಱಿದು ಪುರೋಚನನೆಂಬ ತನ್ನ ಮನದನ್ನನಪ್ಪ ಪೆರ್ಗಡೆಯೊಳ್ ಲಾಕ್ಷಾಗೃಹೋಪಾಯಮಂ ಚರ್ಚಿಸಿ ವಾರಣಾವತಮನೊಂದೇ ದಿವಸದೊಳೆಯ್ದುವಂತಾಗೆ ರಥಮಂ ಸಮಕಟ್ಟಿ ನಾಲ್ಕು ಲಕ್ಕ ಬಲಮಂ ನೆರಂಬೇೞ್ದು ಕಳಿಪಿದನಾಗಳ್—

ಕಂ॥ ಉದಿತೋದಿತನೈ ನೀಂ ನಿನ ।
ಗುದಯುದಮೇಲುದಯಮೆಂದು ನೆಗೞ್ದರಿಗಂಗ ॥
ಭ್ಯುದಯಮನಱಿಪುವ ತೆಱದಿಂ ।
ದುದಯಾಚಳ ಚುಂಬಿ ಬಿಂಬನಿನನುದಯಿಸಿದಂ ॥ ೯೨ ॥

---

1. ರೊಲ್ಲರೊ (ಕ. ಖ.), ರೊಲ್ಲದ (ಗ.), ರೊಲ್ವರ (ಘ.).

ವ|| ಆ ಪ್ರಸ್ತಾವದೊಳ್ ಮಂಗಳ ಪಾಠಕರ ಮಂಗಳ ಪೃಶ್ನೋಚ್ಚಾರಣೆಗಳಿಂದಂ ಪಾಂಡವರಯ್ವರುಮುನ್ಮೀಲಿತ ನಯನರಾಗಿ ನಿತ್ಯ ನಿಯಮಂಗಳಂ ನಿರ್ವರ್ತಿಸಿ ಮಂಗಳವಸದನಂಗೊಂಡು ಮಹಾಬ್ರಾಹ್ಮಣರ್ ಪರಸುವ ಪರಕೆಗಳುಮ ನಿಕ್ಕುವ ಸೇಸೆಗಳುಮನಾಂತುಕೊಳುತ್ತುಂ ಪಲವುಂ ತೆಱದ ಪ್ರಯಾಣ ಪಟಹಂಗಳೆಸೆಯೆ ಶುಭ ಲಕ್ಷಣ ಲಕ್ಷಿತಂಗಳಪ್ಪಾಜಾನೇಯ ಕಾಂಭೋಜ ವಾಜಿರಾಜಿಗಳೊಳ್ ಪೂಡಿದ ದಿವ್ಯರಥಂಗಳನೇಱಿ ದಿವ್ಯಬಾಣಾಸನ ಬಾಣಪಾಣಿಗಳಾಗಿ ನಿಜ ಪರಿಜನಂ ಬೆರಸು ಗಾಂಗೇಯ ದ್ರೋಣ ಕೃಪ ವಿದುರರ್ ಕಳಿಪುತ್ತುಂ ಬರೆ ಪುರ ಜನಂಗಳೆಲ್ಲಂ ನೆರೆದವರ ಪೋಗಿಂಗಟಿಲ್ದು ಸೈರಿಸಲಾಱದೆ—

ಚಂ|| ಮನದೊಳಲಂಪು ಪೊಣ್ಮೆ ನುಡಿದುಂ ನಡೆ ನೋಡಿಯುಮಾಟ ಪಾಟಮುಂ।
ಬಿನದಮುಮಾರುಮಂ ಮಱೆಯಿಸುತ್ತಿರೆ ಬೀದಿಗಳೊಳ್ ವಿಳಾಸದೊ||
ಡ್ಡೆನಿಸಿ ತೊಟಲ್ವ ಪಾಂಡವರ ಪೋಗಿನೊಳುಂತೆ ಬೆಡಂಗುಗೆಟ್ಟು ಹ।
ಸ್ತಿನಪುರ[1][ಮಿಂ]ದು ರಕ್ಕಸನ ತಿಂದ ಪೊಟಲ್ಗೆಣೆಯಾಗದಿರ್ಕುಮೇ ||೯೪||

ವ|| ಎಂದು ಕಣ್ಣ ನೀರಂ ನೆಗಪೆ—

ಚಂ|| ಪರಸುವ ಪೌರವೃದ್ಧರ ಕುಲಾಂಗನೆಯರ್ಕಳ ಸಾಧು ವಾದದೊಳ್।
ಬೆರಸಿ ಸಮಂತು ಸೂಸುವ ಜಲಾರ್ದ್ರ ಲಸದ್ಧವಳಾಕ್ಷತಂಗಳೊಳ್||
ಬೆರಸಿದ ತಣ್ಪನೆತ್ತಿ ಕವಿದೆತ್ತಿದ ಬಾಸಿಗದೊಂದು ಕಂಪಿನೊಳ್।
ಪೊರೆದು ಮದಾಳಿಗಳ್ವೆರಸು ಬಂದುದದೊಂದನುಕೂಲ ಮಾರುತಂ ||೯೫||

ವ|| ಅಂತು ಪೊಟಲಂ ಪೊಱಮಡೆ ಬೞಿಯನೆ ತಗುಳ್ದು ಬರ್ಪ ತಮ್ಮೊಡನಾಡಿಗಳಪ್ಪ ಮೇಳ[2]ದ ಸಬ್ಬವದ ನಗೆಯ ತೆಗೞನವರನೆಮ್ಮ ಬೞಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ ಕಿಱಿದಂತರಂ ಬಂದೊಂದು ತಾವರೆಗೆಱೆಯ ಮೊದಲೊಳ್ ನಿಂದು ಭೀಷ್ಮ ದ್ರೋಣ ಕೃಪ ವಿದುರರ್ಕಳನೆಮಗೆ ತಕ್ಕ ಬುದ್ಧಿಯಂ ಪೇೞ್ದು ಮಗುೞಿಮೆನೆ—

ಕಂ|| ನಡಪಿಯುಮೋದಿಸಿಯುಂ ಬಿ।
ಲ್ವಿಡಿಯಿಸಿಯುಂ ಕೆಚ್ಚುವಿರ್ದ ಕೂರ್ಮೆಗಳೆರ್ದೆಯಂ||
ನ[3]ಡೆ ಪಾಂಡುಸುತರಗಲ್ಕೆಗೆ।
ನಿಡುಸುಯ್ದರ್ ದ್ರೋಣ ಭೀಷ್ಮ ಕೃಪ ವಿದುರರ್ಕಳ್ ||೯೬||

ವ|| ಆಗಳ್ ವಿದುರಂ ಕೆಲನಱಿಯದಂತುಮವರಱಿವಂತು[ಂ] ಸಾಮಾನ್ಯ ಸ್ಥಿತಿಯೊಳೆ ಬಟ್ಟೆಯ ನಂಜಿನ ಕಿರ್ಚಿನ ದೆಸೆಗೆ ಕರಂ ಪ್ರಯತ್ನಪರರಾಗಿಮೆಂದೊಡಂತೆಗೆಯ್ವೆಮೆಂದವರನಿರಲ್ವೇೞ್ದು ಪಯಣಂಬೋಗಿ—

---

[1]. ಮಂ (ಸ.) ; [2]. ವದ (ಕ.ಖ.) ; [3]. ಡ ಪಾಡೆ (ಕ.), ಡೆ ಪಾಡಿ (ಖ.), ಡೆ ಪಾಡು (ಗ.), ಡ ಪಾಂಡು (ಘ.).

ಕಂ ॥ ಪೊಳಪಿನ ಕಿರಣದ ಗಾಳಿಯ ।
ಪೊಳಪನೆ ಸೈರಿಸ[1]ದ [2]ಕುಸುಮ ದಳ ಸುಕುಮಾರರ್ ॥
ತಳರ್ದು ನೆಲೆಯಿಂದವರಾಗಳ್ ।
ಕೊಳದಿಂ ಪೊಱಮಟ್ಟ ಹಂಸೆಗಳ್ಗೆಣೆಯಾದರ್ ॥೯೭॥

ವ ॥ ಆಗಿ ತಾವಾದಿಗರ್ಭೇಶ್ವರರಪ್ಪುದಱಿಂ ತಳರ್ದೆಡೆಯೆಡೆಯ ಮರಂಗಳ ತೊಱೆಗಳ ಬಾಡಂಗಳ ಪೆಸರ್ಗಳಂ ಬೆಸಗೊಳುತ್ತುಂ ಮಹಾಗ್ರಹಾರಂಗಳ ಮಹಾಜನಂಗಳ ಕೊಟ್ಟ ಪೊನ್ನ ಜನ್ನವಿರಂಗಳುಮನವರ ಪರಕೆಯುಮಂ ಕೆಯ್ಕೊಳುತ್ತುಮವರ್ಗೆ ಬಾಧೆಯಾಗದಂತು ಕಾಪಂ ನಿಯಮಿಸುತ್ತುಂ ಕಾಲೂರ್ಗಳ ಗಂಡರ ಪೆಂಡಿರ ನಡೆಯುಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಗುತ್ತುಮಲ್ಲಿಗಲ್ಲಿಗೊಡೆದ ಕೆಱೆಗಮುೞಿದಾಯತನಕ್ಕಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ ಬೀಡುದಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತುಂ ಬಂದು—

ಚಂ॥ ಎಡಱುೞಿದೀವ ಕಲ್ಪತರುವೆಂದು ವನೀಪಕ ಕೋಟಿ ಸಂತಸಂ।
ಬಡೆ ಪೊಡೆವೊಂದಕಾಳ ವಿಳಯಾಶನಿಯೆಂದು ವಿರೋಧಿಗಳ್ ಮನಂ॥
ಗಿಡೆ ಬಿಯಮುಂ ಪರಾಕ್ರಮಮುಮೊಪ್ಪಿರೆ ತನ್ನೊಡವುಟ್ಟಿದರ್ ಸಮಂ।
ತೊಡವರೆ ವಾರಣಾವತಮನೆಯ್ದಿದನಮ್ಮನ ಗಂಧವಾರಣಂ ॥೯೮॥

ಇದು ವಿವಿಧ ವಿಬುಧ ಜನ ವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ದ್ವಿತೀಯಾಶ್ವಾಸಂ

---

[1] ದೆ(ಖ. ಗ. ಘ.) ; [2]. ಮಂಡಳಿಕ ( ಕ. ), ಸತ್ಸಮಂದಳಕ( ಗ. ).

# ತೃತೀಯಾಶ್ವಾಸಂ

ಕಂ॥ ಶ್ರೀಯನರಾತಿ[1]ಬಳಾಸ್ಯ।
ಕ್ರೋಧಿಯೊಳ್ ಪಡೆದ ವೀರ[2]ನುಱಿದರಿಗಳನಾ॥
ತ್ಮೀಯ ಪದಸ್ಫುರಿತ ನಖ।
ಚ್ಛಾಯೆಗಳೊಳ್ ನಿಱಿಸಿ ನಿಂದ ಗಂಡಂ ಹರಿಗಂ ॥೧॥

ವ॥ ಆ ಪೊೞಲ ಪೊೞವೊೞಲನೆಯ್ದೆ ವರ್ಪಾಗಳ್—

ಕಂ॥ ಕತ್ತುರಿಯ ಸಗಣ ನೀರ್ ಬಿಡು।
ಮುತ್ತಿನ ರಂಗವಲಿ ಮಿಳಿರ್ವ ದುಗುಲದ ಗುಡಿ ಸಂ॥
ಪತ್ತಿನ ಬಿತ್ತರ[3]ದೆತ್ತಿದ।
ಮುತ್ತಿನ ಮಂಡವಿಗೆ ಪೊೞಲ ಮನೆಗಳೊಳೆಲ್ಲಂ ॥೨॥

ವ॥ ಅಂತಾಗಳೊಂದುತ್ತರಂ ಬಳೆಯೆ ಸೊಗಯಿಸುವ ಪೊೞಲೊಳಷ್ಟ ಶೋಭೆಯಂ ಮಾಡಿ ದುರ್ಯೋಧನನ ಸಂಕೇತದೊಳ್ ಮುನ್ನಮೆ ಸಮೆದಿರ್ದ ಪುರೋಚನಂ ಗೋರೋಚನಾ ಸಿದ್ಧಾರ್ಥ ದೂರ್ವಾಂಕುರ ಮಾತುಳುಂಗ [4]ಶೃಂಗಾರದರ್ಪಣ ಪೂರ್ಣಕಳಶ [5]ಕಳಮಾವೃತ ಕರಪಲ್ಲವೆಯರಪ್ಪ ಪುರಂಧ್ರಿಯರುಂ ಬದ್ಧವಣದ ಪಱೆ[3]ಗಳುಂ ಬೆರಸಿದಿರ್ವಂದು ಮೆಯ್ಯಿಕ್ಕಿ ಪೊಡಮಟ್ಟು ಪಾಂಡವರುಮಂ ಮುಂದಿಟ್ಟೊಡಗೊಂಡು ಬಂದು ಪೊೞಲಂ ಪುಗಿಸೆ ಪೊಕ್ಕು ಬೀಡನೆಲ್ಲಿ ಬಿಡುವಮೆನೆ ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆದಿಟ್ಟೆನಲ್ಲಿಗೆ ಬಿಜಯಂಗೆಯ್ಯಿಮೆನೆ—

ಕಂ॥ ಅರಗು ಮೊದಲಾಗೆ ಘೃತ ಸ।
ಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿ॥
ಸ್ತರಿಸಿ ಸಮೆದಿಂದ್ರ ಭವನಮೆ।
ಧರೆಗವತರಿಸಿರ್ದುದೆನಿಸುವರಗಿನ ಮನೆಯಂ ॥೩॥

ವ॥ತಾನೆ ಮುಂದಿಟ್ಟೊಡಂಗೊಂಡು ಬಂದು ಪುಗಿಸೆ ಪಾಂಡವರಯ್ವರುಂ ಕೊಂತಿವೆರಸು ಕಿಱಿದಾನುಂ ಬೇಗಮಿರ್ದು ದಾನ ಸನ್ಮಾನಾದಿಗಳಿಂ ಸಂತಸಂಬಡಿಸಿ

---

[1]. ಬಲಶ್ರೀ।ತೋ (ಕ.), ಖಳಶ್ರೀಯ।ತೋ (ಖ.), ಬಳಶ್ರೀಯಂ।ತೋ (ಗ); [2]. ನುಡಿದರಿಯಱನಾ (ಕ.), ದವಿರಂ ಮುೞಿದರಿನಾ (ಖ.), ದವಿರಂ ಮುೞಿದರಿಯಱನಾ (ಗ.ಘ.); [3]. ವೆ (ಕ.); [4]. ಭೃಂ (ಕ. ಖ. ಗ.); [5]. ಘನ ಕುಚ ಪಲ್ಲವೆ (ಕ. ಖ. ಗ. ಘ.)

ಪುರೋಚನನಂ ಬೀಡಿಂಗೆ ಪೋಗಲ್ವೇೞ್ದು ಧರ್ಮಪುತ್ರನಾ ಮನೆಯಂ ಪರೀಕ್ಷಿಸಿ ನೋಡಲೊಡಮಱಿದು ನಿಜಾನುಜ ಸಹಿತಂ ಕೊಂತಿವೆರಸೇಕಾಂತದೊಳಿಂತೆಂದಂ—

ಚಂ॥ ಇದು ಮನೆಯಂದಮಲ್ತುರಿವ ದಳ್ಳುರಿಯುಗ್ಗಡದಂದಮಾಗಿ ತೋ।
ಱದಪುದು ಕಣ್ಗೆ ಸಜ್ಜರಸದೆಣ್ಣೆಯ ತುಪ್ಪದ ಕಂಪಿ[1]ದೆಲ್ಲ [ವೆ]ಂ॥
ಬುದೆ ಬಗೆದಲ್ಲಿ ನೋಡುವೊಡಮಿಟ್ಟಗೆ ಕಲ್ಮರನೆಂಬುದಿಲ್ಲ ಕೂ।
ರದನಿದನೊಡ್ಡಿದಂ ಪಗೆಗೆ ಸಂತಸಮಾಗಿರೆ ಮಾರಿ ಸುಯ್ಯುಗಮೇ ॥೪॥

ವ॥ ಅದಲ್ಲದೆಯುಮತ್ಯಾದರ[2]ಸ್ಸಂಭ್ರಮಮುತ್ಪಾದಯತಿಯೆಂಬುದೀ ಪುರೋಚನನೆಂಬ ಬೂತು ಸುಯೋಧನನ ಬೆಸದಿಂ ನಮಗಿನಿತಾದರಂ ಗೆಯ್ವುದೆಲ್ಲಂ ನಮ್ಮಂ ಮೆಳ್ಪಡಿಸಲೆಂದೆ ಮಾಡಿದಂ ನಾಮಿದನಱಿಯದಂತು ಬೇಂಟೆಯ ನೆವದೊಳ್ ಬಟ್ಟೆಗಳಂ ಸೋದಿಸುವಮೆಂದು ನಿಚ್ಚಂ ಬೇಂಟೆವೋಗೆ ಪುರೋಚನನುಂ ಪೆಱಗಣ ಕಾಪಂ ಕಣ್ಣಾಗಿಪಿನಲೆ ಕಾದಿರ್ಪನ್ನೆಗಂ ವಿದುರನ ವಿಶ್ವಾಸ ದಾ[3]ಸಂ ಕನಕನೆಂಬಂ ಬಂದು ಪಾಂಡವರಂ ಕಂಡೇಕಾಂತದೊಳ್ ವಿದುರನಟ್ಟಿದವಿನ್ನಾಣಂಗಳಂ ಪೇೞ್ದು ನಂಬಿಸಿ ನೀಮೆಂತುಂ ಬಲ್ಲಿರಂತೆ ಪೊಱಮಟ್ಟು ಪೋಗಿ[4]ಮೆಂದು ಜತುಗೃಹ ಕವಾಟ ಪುಟ ಸಂಧಿ[5]ಗಳೊಳ್ ಸುರಂಗಮಂ ಗಂಗೆಯೊಳ್ ಮೂಡುವಂತಾಗೆ ಸಮೆದು ಪೇೞ್ದು ಪೋಪುದುಂ ಪಾಂಡವರುಂ ಪುರೋಚನಂ ತಮ್ಮಂ ಮಱುದಿವಸಂ ಛಿದ್ರಿಸುವೆನೆನಲುಂ ಮುನ್ನಿನ ದಿವಸಮೊಳಗಣ ಪರಿಜನಮೆಲ್ಲಮಂ ಪಾರ್ವರನೂಡುವ ನೆವದೊಳೆ ಪೊಱಮಡಿಸಿ ಸೂರ್ಯಾಸ್ತಮಯದೊಳ್ ಪಾರ್ವರನೂಡಿ ನಿಷಾದಿತಿಯೆಂಬ ಬೇಡಿತಿಗಮಯ್ವರ್ ಮಗಂದಿರ್ಗಮುಣಲಿಕ್ಕಿದೊಡೆ ತಣಿಯುಂಡು ಬೆಂಡು ಮರಲ್ದು ಮಱ[6]ಸುಂದಿದರ್ ಪುರೋಚನನುಮಾ ಮನೆಯೆಳೊಂದೋವರಿಯೊಳ್ ಮಱಕೆಂದಿದನಾ ಪ್ರಸ್ತಾವದೊಳರ್ಧ ರಾತ್ರಿಯಾದಾಗಳ್ ಕೊಂತಿವೆರಸಯ್ವರುಮಂ ಮುನ್ನಮೊಯ್ಯನೊಯ್ಯನೆ ಸುರಂಗದಿಂ ಪೊಱಮಡಿಸಿ ಭೀಮಸೇನಂ ಪುರೋಚನಂ ಮಱಕೆಂದಿರ್ದೋವರಿಯೊಳ್ ಕಿಚ್ಚಂ ಕೊಳಿಸಲೊಡಂ—

ಕಂ॥ [7]ಅಡೆವೊತ್ತದೆ ಕಿಱಿಕಿಱದನೆ।
ಸುಡದಿನಿಸರೆ ಪೊ[8]ರೆಕೆನಾಗದೆ[ಯೆ] ಸಸಿದಂದೊಂ॥
ದೆಡೆಯೊಳಗೊಟ್ಟಿರ್ದರಳೆಯ।
ನೊಡನಳುರ್ವಂತಳುರ್ದನನಲನರಗಿನ ಮನೆಯಂ ॥೫॥

---

1. ದೆಲ್ಲೆ ದೆಂ (ಕ.), ದಲ್ಲದೆ (ಖ. ಗ. ಘ.); 2. ಶಂಕಾಸಂಭಳಿವ (ಘ.); 3. ತಂ (ಗ. ಘ.); 4. ಮೆಂದುಂ (ಕ.); ಮೆಂಬುದುಂ (ಖ. ಗ. ಘ.); 5. ಗಳು (ಖ. ಗ.), ಗಳ (ಘ.); 6. ಲುಂ (ಗ. ಘ.); 7. ಎಡೆವೊ (ಕ.), ಅದೆವೊ (ಖ.), ಅಡಿಗೆ (ಘ.), ಅಡೆಯೊ (ಘ§.); 8. ರಿ (ಕ. ಖ.).

ಕಂ॥ ಮೇಲಾದ ಪಾಂಡುಸುತರನು।
ಪಾಲಂಭಂಗೆಯ್ಯುತಿರ್ಪ ದುರ್ಯೋಧನನಂ॥
ಲೀಲೆಯೆ ನುಂಗುವ ಮೃತ್ಯುವ।
ನಾಲಗೆಯೆನೆ ನೆಗೆದುವುರಿಯ ನಾಲಗೆ ಪಲವುಂ ॥ ೬ ॥

ವ॥ ಆಗಳ್ ಭೀಮಸೇನಂ ತನ್ನ ತಲೆಯೊಳಂ ಮೆಯ್ಯೊಳಂ ಕರಗಿ ಸುರಿವರಗಿನುರಿಯ ಬಂಬಲ್ಗಳಂ ಪೊಸೆದು ಬಿದಿರ್ದು ಕಳೆದು ಸುರಂಗದೊಳಗಣಿಂದಮೆ ತನ್ನೊಡವುಟ್ಟಿದರ್ ಕೂಡೆ ವಂದನನ್ನೆಗಮಿತ್ತಂ—

ಕಂ॥ ಅರಗಿನ ಮನೆಯೊಳ್ ಪಾಂಡವ।
ರುರಿದಱ್ಗಿದರಕ್ಕಟಯ್ಯೊ ದುರ್ಯೋಧನನೆಂ॥
ಬೆರಲೆಯಿನೆಂದಱುತುಂ ತ।
ತ್ಪುರಜನಮಱಲೊದವೆ ಪರಿದು ನೋಡಿತ್ತಾಗಳ್ ॥ ೭ ॥

ವ॥ ನೋಡಿ ರೂಪಱಿಯಲಾಗದಂತು ಕರಿಮುರಿಕನಾಗಿರ್ದ ಬೇಡಿತಿಯುಮನವಳಯ್ವರ್ ಮಕ್ಕಳುಮಂ ಕೊಂತಿಯುಂ ಪಾಂಡವರುಮಪ್ಪರೆನುಂ ತ[1]ಪ್ಪಲ್ಲೆಂದು ಪುರಪ್ರಧಾನರ್ಕಳ್ ತದ್ವೃತ್ತಾಂತಮೆಲ್ಲಮಂ ಪೇೞ್ದು ಧೃತರಾಷ್ಟ್ರಂಗಂ ಪೇೞಲಟ್ಟಿದೊಡೆ—

ಕಂ॥ ಮನದೊಳ್ ತ್ರೈಭುವನಮುನಾ।
ಳ್ದನಿತುವರಂ ತನಗೆ ಸಂತಸಂ ಪೆರ್ಚಿಯುಮುಂ॥
ದಿನಿಸಂಥ ನೃಪಂ ತನ್ನಯ।
[2][ಜ]ನದೊಳ್ ಕೆಲನಱಿಯೆ ಕೃತಕ ಶೋಕಂ ಗೆಯ್ದಂ ॥ ೫ ॥

ವ॥ ಆಗಳ್ ನದೀತನೂಜ ಭಾರದ್ವಾಜ ಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನಱಿದುಮಱಿಯದಂತೆ ಶೋಕಾಕ್ರಾಂತನಾಗಿ ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧ ದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ ಮಗುೞ್[3] ವಂದನನ್ನೆಗಮಿತ್ತ ಪಾಂಡವರ್ ಸುರಂಗದಿಂ ಪೊಱಮಟ್ಟು ತಾರಾಗಣಂಗಳ್ ನಿಂದ ನೆಲೆಯಿಂ ದೆಸೆಯಂ ಪೊೞ್ತುಮನಱಿದು ತೆಂಕ ಮೊಗದೆ ಪಯಣಂಬೋಗಿ—

ಮ॥ [3]ತಡಕುಂ [4]ಪಿಟ್ಟಿಯುಮೊತ್ತೆ ಮೆಲ್ಲಡಿಗಳಂ ಬಳ್ಕು[5]ತ್ತುಮಳ್ಕುತ್ತುಮೋ।
ರಡಿಗೊರ್ವೊರ್ಮೆ ಕುಳುತ್ತುಮೇೞುತಿರೆ ಕಂಡಿಂತಾಗದಿನ್ನೇೞಮೆಂ॥

---

1. ಪ್ಪಿ (ಕ.); 2. ಮ (ಕ.ಖ.); 3. ಕ (ಗ.ಘ.); 4. ಪೆ (ಘ.); 5. ತ್ತಿ ಸುಕ್ಕುರ್ತು, (ತ್ತಿ) (ಕ.ಖ).

ದೊಡನಂದಯ್ವರುಮಂ ನಿಜಾಂಸ ಯುಗದೊಳ್ ಪೊತ್ತೆತ್ತಿ ತಳ್ತೊಳ್ಪ ಸೀ।
ಱುಡುವಿಂದದ್ಭುತದಾ ಹಿಡಿಂಬ ವನಮಂ ಪೊಕ್ಕಂ ಮರುನ್ನಂದನಂ ॥೯॥

ಚಂ॥ ಅದು ಮದದಂತಿ ದಂತ ಮುಸಲ ಪ್ರವಿಭಗ್ನ ಮಹಾ ಮಹೀರುಹಾ।
ಸ್ಪದಮದು ಸಿಂಹನಾದ ಜನಿತ ಪ್ರತಿಶಬ್ದ [1]ಮಹಾ ಭಯಾನಕ ॥
ಪ್ರದಮದು ನಿರ್ಝರೋಚ್ಚಳಿತ ಶೀಕರ ಶೀತಳ ವಾತ ನರ್ತಿತೋ।
ನ್ಮದ ಶಬರೀ ಜನಾಳಕಮ[2][ದಾ]ಯತ ವೇತ್ರ ಲತಾ ವಿತಾನಕಂ ॥೧೦॥

ವ॥ ಆ ವನಾಂತರಾಳ ಮಧ್ಯಸ್ಥಿತ ವಿಶಾಳ ವಟ ವಿಟಪಿಯನೆಯ್ತಂದದಱ ಕೆೞಗಯ್ವರುಮನಿೞಪಿದೊಡಧ್ವಾನ ಪದ ಪರಿಶ್ರಮ ಶ್ರಾಂತರ್ ನಿದ್ರಾ [3][ಭ]ರ ಪರವಶರಾಗಿರೆ ಭೀಮಂ ಜಾವವಿರ್ದು ತನ್ನೊಡವುಟ್ಟಿದರ್ಗಾದ ಪ್ರವಾಸಾಯಾಸಂಗಳ್ಗಂ ದೆಸೆಗಂ [4]ಮ[ನ್ಯು] ಮಿಕ್ಕು ಬರೆ ಕಣ್ಣ ನೀರಂ ತುಂಬಿ—

ಚಂ॥ ಭರತನ ವಂಶದೊಳ್ ನೆಗೞ್ದ ಪಾಂಡುಗೆ ಪುಟ್ಟಿಯುಮಿಾ ಸಮಸ್ತ ಸಾ।
ಗರ ಪರಿವೇಷ್ಟಿತಾವನಿಗೆ ವಲ್ಲಭನಾಗಿಯುಮಿಾ ಮಹೋಗ್ರ ಕೇ॥
ಸರಿ ಕರಿ ಕಂಠ ಗರ್ಜಿತ ಮಹಾಟವಿಯೊಳ್ ಮಱಕೆಂದಿ ನೀಮುಮಿಾ।
ಮರದಡಿಯೊಳ್ ಶಿವಾಶಿವ ರವಂಗಳಿನೆೞ್ಚಱುವಂತುಟಾದುದೇ ॥೧೧॥

ವ॥ ಎಂದು ನುಡಿಯುತ್ತಿರ್ಪನ್ನೆಗಂ ಕೋಕನದ ಬಾಂಧವನುದಯಾಚಳ ಶಿಖರ ಶೇಖರನಾದನಾಗಳಾ ಬನಮನಾಳ್ವ ಹಿಡಿಂಬನೆಂಬನವರ ಬರವನಱಿದು ತನ್ನ ತಂಗೆ ಹಿಡಿಂಬೆಯೆಂಬಳಂ ಕರೆದು—

ಕಂ॥[5]ನಿಡಿಯರ್ ಬಲ್ಲಾಯುದ ಬ।
ಲ್ಲಡಿಗರ್ ವಂದಿರ್ದರಯ್ವರಾಲದ ಕೆೞಗಿಂ॥
ತೊಡರ್ದರ್ ನಮ್ಮಯ ಭಕ್ಷದೊ।
ಳಡು ಪಣ್ಣಿಡು ಪೋಗು ನೀನುಮಾನುಂ ತಿಂಬಂ ॥೧೨॥

ವ॥ ಎಂಬುದುಮಂತೆಗೆಯ್ವೆನೆಂದು—

ಕಂ॥ ಆಗಸದೊಳಗೊಂದು ಮಹೀ।
ಭಾಗದೊಳಿನ್ನೊಂದು ದಾಡೆಯಾಗಿರೆ ಮನದಿಂ॥
ಬೇಗಂ ಬರ್ಪಳ ದಿಟ್ಟಿಗ।
ಳಾಗಳೆ ಪತ್ತಿದುವು ಗೆಂಟಱೊಳ್ ಮಾರುತಿಯಂ ॥೧೩॥

---

1. ಮಹದ್ಭ (ಕ. ಗ.), ಮಹಾದ್ಭ (ಖ. ಘ.); 2. ಳಾ (ಸ.); 3. ಚರಣ (ಕ.), ಚರ (ಖ. ಗ.), ಲಸ (ಘ.); 4. ಮನಂ (ಕ. ಖ.), ಮಂನು (ಗ.); 5. ನಿಡಿಯರ್ಕಳ್ ಬಲ್ಲಡಿಗರ್। (ಕ. ಖ. ಗ. ಘ.), ಕಡುಗಲಿಗಳ್ ಬಂದು ಕುಳ್ತ (ಕ. ಖ.).

ವ॥ ಅಂತೊಂದಂಬುವೀಡಿನೆಡೆಯೊಳ್ ಕಾ[1]ಮನಂಬುವೀಡಿಂಗೊಳಗಾಗಿ ತಾಂ ಕಾಮರೂಪೆಯಪ್ಪುದಱಿಂ ದಿವ್ಯ ಕನ್ಯಕಾ ಸ್ವರೂಪಮಂ ಕೆಯ್ಕೊಂಡು ತನ್ನತ್ತ ಮೊಗದೆ ಬರ್ಪಳಂ ಕಂಡು —

ಕಂ॥ ಖೇಚರಿಯೋ ಭೂಚರಿಯೊ ನಿ।
ಶಾಚರಿಯೋ ರೂಪು ಬಣ್ಣಿಸಲ್ಕಾರ್ಗಮವಾ॥
ಗೋಗ್ಚರಮಿಾ ಕಾನನಮುಮ।
ಗೋಚರಮಿವಳಿಲ್ಲಿಗೇಕೆ ಬಂದಳೊ ಪೇೞಿಂ ॥ ೧೪ ॥

ವ॥ ಎಂಬನ್ನೆಗಮಾಕೆ ಮದನನ ಕೆಯ್ಯಿಂ ಬರ್ದುಂಕಿದರಲಂಬು ಬರ್ಪಂತೆ ಬಂದು ಭೀಮಸೇನನ ಕೆಲದೊಳ್ ಕುಳ್ಳಿರೆ ನೀನಾರ್ಗೇನೆಂಬೆಯೇಕೆ ಬಂದೆಯೆಂದೊಡಾಕೆಯೆಂದಳೆರಡಱಿಯದೊಲ್ದು ನಿನ್ನೊಳೆರಡಂ ನುಡಿಯಲಾಗದೆನಗೆಯಿಾ ಬನಂ ಹಿಡಿಂಬ ವನಮೆಂಬುದಿದನಾಳ್ವಂ ಹಿಡಿಂಬನೆಂಬಸುರನೆಮ್ಮಣ್ಣ ನಾನುಂ ಹಿಡಿಂಬೆಯೆನೆಂಬೆನಾತನ ಬೆಸದಿಂ ನಿಮ್ಮನಿಬರುಮಂ —

ಕಂ॥ ಪಿಡಿದಡಸಿ ತಿನಲ್ ಬಂದಿ।
ರ್ದೆಡೆಯೊಳ್ ನಿನಗಾಗಿ ಮದನನೆನ್ನನೆ ತಿನೆ ಕೇಳ್॥
ಪಡೆನೋಡಲ್ ಬಂದವರಂ।
ಗುಡಿವೊಱಿಸಿದರೆಂಬುದಾಯ್ತು [2]ನಿನ್ನೆನ್ನೆಡೆಯೊಳ್ ॥ ೧೫ ॥

ವ॥ ಎಂದೀ ಮಱಲುಂದಿದರಾರ್ಗೆಂದೊಡೆನ್ನ ತಾಯ್ವಿರುಮೊಡವುಟ್ಟಿದರೆಂದೊಡೆ ಹಿಡಿಂಬಂ ಬಂದವರಂ ತಿಂದೊಡಂ ತಿನ್ಗೆ ನೀನೆನ್ನ ಪೆಗಲನೇಱು ಗಗನತಳಕ್ಕುಯ್ವೆನೆನೆ ಭೀಮಸೇನನಾ ಮಾತಿಂಗೆ ಮುಗುಳ್ನಗೆ ನಕ್ಕು —

ಚಂ॥ ಅೞಿಪಿದೆಯಂತುಮಲ್ಲದೆ ನಿಶಾಚರಿಯ್ಕೆ ನಿನಗಪ್ಪುದಪ್ಪುದೀ।
ಯೞಿನುಡಿ [3]ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋೞ್ಪಮಾತನೊ॥
ಡ್ಡೞಿಯುದ ಗಂಡವಾತನೆನುತಂತಿರೆ ತಂಗೆ[ಯು] ಮಾಣ್ದುದರ್ಕಮಂ
ಮೊಱಗಿ ಸಿಡಿಲ್ದದೊಂದು ಸಿಡಿಲೇೞ್ಗಿಯಿನೆಯ್ತರೆ ವಂದು ಭೀಮನಂ॥ ೧೬॥

ವ॥ ಕಂಡು ಕಣ್ಗ[4]ಳಿಂ ಕೆಂಡದ ತಂಡಂಗಳುಮುರಿಯ ತಂಡಂಗಳುಂ ಸೂಸೆ ನೀನೊರ್ವಯೆನ್ನೊಳಗೇಂ ಕಾದುವೆ ಈ ಮಱಲುಂದಿದರನೆತ್ತಿನಿಬರುಮನೊರ್ವೆಯೆ ಪೊಸೆದು ಮುಕ್ಕುವೆನೆನೆ ಸಾಹಸ ಭೀಮಂ ಮಲ್ಲಂ[5]ತಿಗೆಯನಪ್ಪೊಡಂ ಸಡಲಿಸದವನವಯವದೊಳಿಂತೆಂದಂ —

---

1. ವನಂಬಿನಿಂಬಿಂ (ಕ. ಖ.); 2. ನಿನ್ನಿಂದೆನ್ನ (ಕ. ಖ. ಗ. ಘ.); 3. ಯಕ್ಕೆ (ಖ.), ಯಲ್ಕೆ (ಗ.); 4. ಳೊಳ್ (ಕ. ಖ.); 5. ತೆಗೆಯ (ಕ. ಖ.), ತಿಯ (ಘ.).

ಕಂ॥ ಏಂ ಗಾವಿಲನಯೊ ನಿನ್ನಂ।
ನುಂಗುವುದರ್ಕಿವರನೆತ್ತ ವೇಟ್ಟುಮೆ ನೆರಮಂ॥
ಸಂಗಳಿಸಲ್ವೇಟ್ಟುಮೆ ವಾ।
ತಂಗ ವಿರೋಧಿಗೆ ಕುರಂಗ ಸಂಗರ ಧರೆಯೊಳ್ ॥೧೭॥

ವ॥ ಎಂಬುದುಂ ಹಿಡಿಂಬನಾಡಂಬರಂಗೆಯ್ದು ತುಂಬುರುಕೊಳ್ಳಿಯಂತಂಬರಂಬರಂ ಸಿಡಿಲ್ದು—

ಚಂ॥ ಕಡುಪಿನೆ ಪೊತ್ತು ಪಾಸಱೆಯನೆಯ್ತರೆ ಭೀಮನುಮೊತ್ತಿ ಕಿಟ್ಟು ಬೇ।
ರೊಡನೆ ಮಹೀಜಮೊಂದನಿಡೆಯುಂ ಬಿಡೆ ಪೊಯ್ಯೆಯುಮಾ ಬನಂ ಪಡ॥
ಲ್ವಡುತಿರೆ ಕಲ್ಲೊಳಂ ಮರೆದೊಳಂ ಬಡಿದೊಯ್ಯನೆ ಜೋಲ್ದ ದೈತ್ಯನಂ।
ಪಿಡಿದು ಮೃಣಾಳ ನಾಳಮನೆ ಸೀಳ್ವವೊಲೊರ್ಮೆಯೆ ಸೀಳ್ದು ಬೀಸಿದಂ ॥೧೮॥

ವ॥ ಆಗಳಾ ಕಳಕಳಕ್ಕೆ ಮಱಲುಂದಿದಯ್ವರುಮೆಟ್ಟುತ್ತಿದೇನೆಂದು ಬೆಸಗೊಳೆ ತದ್ವೃತ್ತಾಂತಮೆಲ್ಲಮನಱಪಿ ಹಿಡಿಂಬೆ ಡಂಬಮಿಲ್ಲದೆ ಭೀಮಸೇನನೊಳಪ್ಪೊಡಂಬಡಂ ನುಡಿಯೆ ಕೊಂತಿಯುಂ ಧರ್ಮಪುತ್ರನುಮಿಾಕೆ ಸಾಮಾನ್ಯ ವನಿತೆಯಲ್ಲಿವಳ್ ರಾಕ್ಷಸ ಸ್ತ್ರೀಯೆಂದು ಭಾವಿಸಲ್ವೇಡೀಕೆಯಂ ಕೆಯ್ಕೊಳ್ವುದೆ ಕಜ್ಜಮೆಂದಾಕೆಗಂ ಭೀಮಸೇನಂಗಂ ಗಂಧರ್ವ ವಿವಾಹಮಂ ಮಾಡಿದೊಡೆ ಹಿಡಿಂಬೆ ನೀಮಿಲ್ಲಿರಲ್ವೇಡ ಪರ್ವತದ ಮೇಲೆ ಕಱಂಗಿ ಕಟ್ಟಲಿಸಿದ ಮರದುಱುಗಲ ನಡುವೆ ಸುಧಾ ಧವಳಿತೋತ್ತುಂಗ ರಮ್ಯ ಹರ್ಮ್ಯಂಗಳಂ ಕಾಣ್ಬೆರಪ್ಪೊಡದು ಹಿಡಿಂಬಪುರಮೆಂಬುದೆಮ್ಮ ಪುರಮಲ್ಲಿಗೆ ಪೋಪಂ ಬನ್ನಿಮೆಂದು ಮುಂದಿಟ್ಟೊಡಗೊಂಡು ಪೋಗಿ ಮಹಾವಿಭೂತಿಯಿಂ ಪೊಬಲಂ ಪುಗಿಸಿ ತನ್ನ ಸಂಪತ್ತುಮಂ ಶ್ರೀಯುಮಂ ಮೆಱೆದು ಮಜ್ಜನ ಭೋಜನ ತಾಂಬೂಲ ಲೇಪನಂಗಳಿಂ ಪಥ ಪರಿಶ್ರಮಮೆಲ್ಲಮಂ ಕಳೆದು ಭೀಮಸೇನನುಂ ತಾನುಂ—

ಕಂ॥ ಎಲ್ಲಿ ಕೊಳನೆಲ್ಲಿ ತಣ್ಬುಱೆ।
ಲೆಲ್ಲಿ ಲತಾ ಭವನಮೆಲ್ಲಿ ಧಾರಾಗೃಹಮಂ॥
ತಲ್ಲಿಯೆ ತೊಡರ್ದಲ್ಲಿಯೆ ನಿಂ।
ದಲ್ಲಿಯೆ ರಮಿಯಿಸಿದಳಾಕೆ ಮರು[1][ದಾ]ತ್ಮಜನೊಳ್ ॥೧೯॥

ವ॥ ಅಂತು ರಮಿಯಿಸಿ ಪೊಬಲ್ಗೆ ಮಗುಟ್ದು ಬಂದೊಡಾಕೆಗಂ ಭೀಮಂಗಂ—

ಕಂ॥ ಕಾರಿರುಳ ತಿರುಳ ಬಣ್ಣಂ।
ಕೂರಿದುವೆನೆ ತೊಳಪ ದಾಡೆ ಮಿಳಿರ್ವುರಿಗೇಸಂ॥
ಪೇರೊಡಲೆಸೆದಿರೆ ಪುಟ್ಟಿದ।
ನಾರುಮುಗುರ್ವಿಸೆ ಮಗಂ ಘಟೋತ್ಕಚನೆಂಬಂ ॥೨೦॥

---

1. ತಾ (ಸ).

ವ|| ಅಂತು ಪುಟ್ಟುವುದುಮಿಾಶ್ವರ ಕಲ್ಪಿತದಿಂ ರಾಕ್ಷಸರ್ಗೆ ಸದ್ಯೋಗರ್ಭಮುಂ ಸದ್ಯಃಪ್ರಸೂತಿಯುಂ ಸದ್ಯೋಯೌವನಮುಮುಳ್ಳ ಕಾರಣದಿಂದಾಗಳೆ ಷೋಡಶ ವರ್ಷದ ಕುಮಾರನಾಗಿರೆ ಪಾಂಡವರುಮಲ್ಲಿ ಮೂಱು ವರುಷಮಿರ್ದು ಕೃಷ್ಣ ದ್ವೈಪಾಯನೋಪದೇಶದಿಂದೇಕಚಕ್ರಕ್ಕೆ ಪೋಪ ಕಜ್ಜಮನಾಳೋಚಿಸಿ—

ಚಂ|| ಬರಿಸಿ ಹಿಡಿಂಬೆಯಂ ಕರೆದು ಸಾರೆ ಘಟೋತ್ಕಚನಂ ಮನೋಮುದಂ|
ಬೆರಸೊಸೆದಿರ್ದೆವಿನ್ನೆವರಮಿನ್ನಿರಲಾಗದು ಪೋಪೆವೆಂದೊಡಾ||
ದರದೊಳೆ ಕೊಟ್ಟ ವಸ್ತುಗಳನೊಂದುಮನೊಲ್ಲದೆ ಕೂರ್ತು ಬುದ್ಧಿವೇ|
ಳ್ದಿರಿಸಿ ಸುಖ ಪ್ರಯಾಣದೊಳೆ ಪಾಂಡವರೆಯ್ದಿದರೇಕಚಕ್ರಮಂ ||೨೧||

ರಗಳೆ|| ಅಲ್ಲಿ ಸೊಗಯಿಸುವ ಕೃತಕ ಗಿರಿಗಳಿಂ
ಕಲ್ಪತರುಗಳನೆ ಪೋಲ್ವ ಮರಗಳಿಂ|
ನಂದನಂಗಳೊಳ್ ಸುೞಿವ ಬಿರಯಿಯಿಂ
ಕಂಪು ಕಣ್ಮಲೆಯೆ ಪೂತ ಸುರಯಿಯಿಂ|
ಸುತ್ತಲುಂ ಪರಿವ ಜರಿವೊನಲ್ಗಳಿಂ|
ದೆತ್ತಲುಂ ನಲಿವ ಪೊಸ ನವಿಲ್ಗಳಿಂ|
ಬೆಳೆದು ಮಗಮಗಿಪ ಗಂಧ ಶಾಳಿಯಿಂ
ದಲ್ಲಿ ಸುೞಿವ ಗಿಳಿವಿಂಡಿನೋಳಿಯಿಂ|
ಈಂಟು ಜಳಧಿಯೆನಿಪಗೞ ನೀಳ್ಪಿನಿಂ
ನೆಗೆದು ಸೊಗಯಿಸುವ ಕೋಂಟೆಯೊಳ್ಪಿನಿಂ|
ವಿವಿಧ ದೇವ ಗೃಹದಾಟ ಪಾಟದಿಂ
ಮಱುಗಿ ಬಟ್ಟೆಯರ ನೋಟ್ಪ ನೋಟದಿಂ||
ಪಂಚ ರತುನದೊಳೆ ನೆಱೆದ ಪಸರದಿಂ
ತೋರಣಂಗಳೊಳೆ ತೊಡರ್ದ ತಿಸರದಿಂ|
ಧನದರನ್ನರಿವರೆನಿಪ ಪರದರಿಂ
ದೇವರನ್ನರಿವರೆನಿಪ ಬಿರುದರಿಂ|
ನೆಱೆಯೆ ಸೊಗಯಿಪಾ ಯೇಕಚಕ್ರಮಂ
ಮೆಚ್ಚಿದಂ ಹರಿಗನಮಿತ ವಿಕ್ರಮಂ ||೨೨||

ವ|| ಅಂತು ಮೆಚ್ಚಿ ತಮ್ಮುತಯ್ವರುಮಿನ್ನವು ಪೊೞಲ್ಗಳಿಲ್ಲೀ ಪೊೞಲ್ಗೆ ನಾಲ್ಕು ಯುಗದೊಳಂ ವಸುಮತಿ ಪದ್ಮನಗರಮೇಕಚಕ್ರಂ ಬಹುಧಾನ್ಯಮೆಂಬ ನಾಲ್ಕು ಪೆಸರಾದುದೆಂದು ಮನಂಗೊಂಡು ನೋಡುತ್ತುಂ ಬಂದು ಚತುರ್ವೇದ ಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು ಧರಾಮರ ವೇಷದೊಳೊಂದು ವರುಷಮಿರ್ಪನ್ನೆಗಮೊಂದು ದಿವಸಂ—

ಕಂ॥ ತುಂಬಿ[1]ದ ರಕ್ತತೆಯಿಂ ನಿಜ।
ಬಿಂಬಂ ವಾರುಣಿಯನೊಸೆದು ಸೇವಿಸೆ ನಾಣ್ಗೆ॥
ಟಂಬೋಲ್ ತೇಜಂ ಮಸುಳ್ವಿನ।
ಮಂಬರಮಂ ಬಿಸುಟನಾಗಳಂಬುಜ ಮಿತ್ರಂ ॥ ೨೩ ॥

ವ॥ ಆಗಳ್ ಸಂಧ್ಯಾವಂದನೆಗೆ ಧರ್ಮಪುತ್ರಾರ್ಜುನ ನಕುಲ ಸಹದೇವರ್ ಪೋದರನ್ನೆಗಮಿತ್ತ ಬೀಡಿನೊಳಿರ್ದ ಕೊಂತಿಯ ಭೀಮನ ಕರ್ಣೋಪಾಂತದೊಳ್

ಕಂ॥ ಸಾರೆ[2]ಯೊಳಟ್ವ ಮಹಾ ದ್ವಿಜ।
ನಾರಿಯ ಮಮತಾ[ವಿಪೂರಿತೋ]ರ್ಜಿತ ರವದಿಂ॥
ಕಾರುಣ್ಯಾಕ್ರಂದನಮನಿ।
ವಾರಿತಮೊರ್ಮೊದಲೆ ಬಂದು ತೀಡಿತ್ತಾಗಳ್ ॥ ೨೪ ॥

ವ॥ ಅದಂ ಕೇಳ್ದೀನಾನುಮೊಂದು ಕಾರಣಮಾಗಲೆವೇೞ್ಕುಮೀ ಪುಯ್ಯಲ ನಾರಯ್ದು ಬರ್ಪೆನೆಂದು ಭೀಮನನಿರಿಸಿ ಕೊಂತಿ ತಾನೆ ಪೋಗಿ—

ಚಂ॥ ಅ[3]ಱಿ[3] ಕುಡಲಾದ ಕೂಸು ನೆಲದೊಳ್ ಪೊರಳುತ್ತಿರೆ ಧರ್ಮಪತ್ನಿ ಬಾ।
ಯಱಿದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ॥
ಗೞಗೞ ಕಣ್ಣನೀರ್ ಸುರಿಯೆ ಚಿಂತಿಪ ಪಾರ್ವನ ಶೋಕದೊಂದು ಪೊಂ।
ಪುಱಿಯನೆ ನೋಡಿ ನಾಡೆ ಕರುಣಂ ತನಗಾಗಿರೆ ಕೊಂತಿ ಚಿಂತೆಯಿಂ॥ ೨೫ ॥

ವ॥ ನಿನಗಿಂತೀ ಪಿರಿದು ಶೋಕಮೆಂತಾದುದೆಂಬುದುಮಾ ಪಾರ್ವಂ ಕೊಂತಿಗಿಂತೆಂದಂ ಬಕನೆಂಬನೊರ್ವಸುರನೀ ಪೊೞಲ ತೆಂಕಣ ಬೆಟ್ಟದೊಳಿರ್ಪನಾತಂಗೆ ನಿಚ್ಚಮೊಂದು ಮನೆಯೊಳಿರಡೆಮ್ಮೆವೋಱಿಯೊಳ್ ಪೂಡಿದ ಪನ್ನಿರ್ಕಂಡುಗದಕ್ಕಿಯ ಕೂೞುಮ[ನ]ದರ್ಕೆ ತಕ್ಕ ಪರಿಕರಮುಮನೊರ್ವ ಮಾನಸಂ ಕೊಂಡು ಪೋಪನಂತಾತಂ ಬೆರಸದೆಲ್ಲಮಂ ತಿಂದು ತಣಿಯದೆ ಪಲ್ಲಂ ತಿಂಬನದೊಂದು ದಿವಸಂ ತಪ್ಪಿದೊಡೀ ಪೊೞಲನಿತುಮಂ ತಿಂಬಂ ನಾಳಿನ ಬಾರಿಯೆಮ್ಮ ಮೇಲೆ ಬಂದುದೆಮ್ಮ ಮನೆಯೊಳಾನುಮೆಮ್ಮ ಧರ್ಮಪತ್ನಿಯುಂ ಮಗನುಂ ಮಗಳುಮಿಂತೀ ನಾಲ್ವರೆ ಮಾನಸರೆಮ್ಮ [4]ಪೆಂಡತಿಯನೀವೆನಪ್ಪೊಡಾಕೆಯಿಂ ಬೞಿಯಮೀ ಕೂಸುಗಳಂ ನಡಪುವರಿಲ್ಲ ಮಗಳನೀವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮಕ್ಕುಮದಱಿಂದೆನ್ನನೆ ಕುಡಲ್ವೇೞ್ಕುಮೆಂಬುದುಂ ಕೊಂತಿಯಿಂತೆಂದಳ್—

---

1. ರೆ ಕಟ್ತಿಲೆ (ಕ.), ದ ಕತ್ತಲೆ (ಖ.); 2. ಬರೆ ತದ್ವಿಜನ್ಮಾಗಾರದೊಳತಿ ವಿಪುಳಮಮಳ ಕೂಜಿತ ರವದಿಂ (ಕ. ಖ.), ಯೊಳಳುವ ಮಹಾ ದ್ವಿಜ ಪಾರವಮೆ ಸಕಳ ವಿಕಳ ಪೂರಿತ ದಾರಂ (ಗ.), ಯೊಳಳುವ ಮಹಾ ದ್ವಿಜ ನಾರಿಯ ಮಮತಾ ಹರ್ಜಿತ ರವದಿಂ (ಘ.); 3. ಟಿ (ಕ.) ೞಿ (ಗ.); 4. ಪಾರ್ವಂತಿಯ (ಗ. ಘ.).

ಕಂ|| ನಿವಿಶ್ಮಾ ನಾಲ್ವರೊಳೊರ್ವರು।
ಮಿವಿಶ್ಮಿಡುಕಲ್ವೇಡ ಮಕ್ಕಳೊಳರೆನಗಯ್ವರ್||
ತಮ್ಮೊಳಗೆಸೆವಯ್ವರೊಳಂ।
ನಾವಮ್ಮಾಣದೆ ಬಕನ ಬಾರಿಗೊರ್ವನನೀವೆಂ ||೨೬||

ವ|| ಎಂಬುದುಂ ಪಾರ್ವನಿಂತೆನಲ್ವೇಡ ಮಕ್ಕಳೊಳಾದ ಮೋಹಮೆಲ್ಲಾ ಜೀವಕ್ಕಂ ಸಮಾನಮೆಂಬುದುಂ ನೀಮಱಿಯಿರುಸಿರದಿರಿಮದರ್ಕೆ ತಕ್ಕ ಸವಕಟ್ಟಂ ಮಾಡಿಮೆಂದು ಬಂದು ತದ್ವೃತ್ತಾಂತಮೆಲ್ಲಮಂ ಭೀಮಸೇನಂಗಱಿಪಿದೊಡೆ ನಾಳಿ ನುಣಿಸನೆನಗೆ ದೊರೆಕೊಳಿಸಿ [1]ಬಂದುದು ಕರಮೊಳ್ಳಿತಾಯ್ತೆಂದು ನಗುತಿರ್ಪನ್ನೆಗಂ ಮತ್ತಿನ ನಾಲ್ವರುಂ ಬಂದು ತದ್ವೃತ್ತಾಂತಮೆಲ್ಲಮಂ ಕೇಳ್ದು ನಮಗೀ ಪೊೞ ಲೊಳೊಂದು ಪರೋಪಕಾರಾರ್ಥಂ ಸಯ್ಪಿನಿಂ ದೊರೆಕೊಂಡುದೆಂದಿರುಳೆಲ್ಲಂ ಬಕನ ಪಡೆಮಾತನೆ ನುಡಿಯುತ್ತಿರ್ಪನ್ನೆಗಂ—

ಕಂ|| ಓಡೆ ತಮೋಬಳಮುಗಿದ।
ಳ್ಳಾಡೆ ನಿಶಾಚರ ಬಲಂ ರಥಾಂಗ ಯುಗಂಗಳ್||
ಕೂಡೆ ಬಗೆ ಕೂಡೆ ನೇಸಱ್।
ಮೂಡಿದುದು ಬಕಂಗೆ ಮಿೞ್ತು ಮೂಡುವ ತೆಱದಿಂ ||೨೭||

ವ|| ಆಗಳ್ ಸಾಹಸ ಭೀಮಂ ತನ್ನ ಸಾಹಸಮಂ ತೋಱಲೆಂದು ಬಂದು ಪಾರ್ವನ ಮನೆಯ ಮುಂದಣ ಬಂಡಿಯ ಕೂೞಂ ಕೆಯ್ಕೊಂಡು ನಿಲ್ವುದುಂ ಪಾರ್ವಂತಿಯುಂ ಪಾರ್ವನುಂ ಪರಸಿ ಸೇಸೆಯನಿಕ್ಕಿ ಕಳಿಪೆ ಪೊೞಲಿಂ ಬಂಡಿಯ ನಟ್ಟಿಕೊಂಡು ರಕ್ಕಸನಿರ್ದೆಡೆಗೆಯ್ತಂದು—

*ಕಂ|| ದಾಡೆಗಳನಱಿಯೊಳಿಂಬಿಂ।
ತೀಡುತ್ತುಂ ತೀವ್ರಮಾಗೆ ಬಂಡಿಯ ಬರವಂ||
ನೋಡುತ್ತಿರ್ದಾ ಬಕನಂ।
ನಾಡೆಯೆ [2][ಅ]ಂತರದೆ ಕಂಡು ಮುಳಿದಂ ಭೀಮಂ ||೨೮||

ಕಡೆಗಣ್ಣೊಳೆ ರಕ್ಕಸನಂ।
ನಡೆ ನೋಡಿ ಕೊಲಲ್ಕೆ ಸತ್ತ್ವಮುಪ್ಪಂತಿರೆ ಮುಂ||
ಪೊಡೆವೆಂ ಕೂೞಂ ಬೞಿಯಂ।
ಪೊಡೆವೆಂ ರಕ್ಕಸನನೆಂದು ಸಾಹಸ ಭೀಮಂ ||೨೯||

ವ|| ಅಂತು ತನ್ನ ತಂದ ಬಂಡಿಯ ಕೂೞೆಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು ರಕ್ಕಸನಿವನ ಪಾಂಗಂ ಮೆಚ್ಚಲಾಱೆನೆನ್ನುಮ

[1]. ಬಂದು ಕರಮೊಳ್ಳಿಕೆಯ್ದುರೆಂದು (ಕ. ಖ. ಗ.); [2]. ಯ (ಘ.).
* ಈ ಪದ್ಯವು ಘ. ಪ್ರತಿಯಲ್ಲಿ ಮಾತ್ರವಿದೆ.

ನಿಂತು ಸಮೆಯೆ ತುತ್ತುಗುಮೆಂದು ಬಕಂ ಬಕವೇಷದಿಂ ಪೆಱಗಣ ದೆಸೆಗೆ ಮೆಲ್ಲ ನೋಸರಿಸಿ ಬಂದು—

ಕಂ॥ ಎರಡುಂ ಕೆಲನುಮನೆರಡುಂ।
ಕರ ಪರಿಘದಿನಡಸಿ ಗುರ್ದಿ ಪೆಱಪಿಂಗುವನಂ॥
ಮುರಿದಡಿಸಿ ಪಿಡಿದು ಘಟ್ಟಿಸಿ।
ಪಿರಿಯಱೆಯೊಳ್ ಪೊಯ್ದನಸಗವೊಯ್ಲಂ ಭೀಮಂ ॥೩೦॥

ವ॥ ಅಂತು ಪೊಯ್ದೊಡೆ ಪೊಡೆಸೆಂಡಂ ಪೊಯ್ದಂತೆ ಮೇಗೊಗೆದು ಸೆಣಸೆ—

ಉ॥ ಬಾರಿಯನಿಟ್ಟು ಕೂಡೆ ಪೊಟಿಲಂ ತವೆ ತಿಂದ[1]ನನಾರ್ತರಿಲ್ಲಣಂ।
ಬಾರಿಸಲಾರುಮಿನ್ ಜವನ ಬಾರಿಯೊಳಿಕ್ಕುವೆನೆಂದು ಪರ್ವೆ ಭೋ॥
ರ್ಭೋರೆನೆ ಬೀಸೆ ತದ್ವದನ ಗಹ್ವರದಿಂ ಬಿಸುನೆತ್ತರುಣ್ಮೆ ಭೋ।
ರ್ಭೋರೆನೆ ಕೊಂದನಂಕದ ಬಳಾಧಿಕನಂ ಬಕನಂ ವೃಕೋದರಂ ॥೩೧॥

ವ॥ ಅಂತು ಕೊಂದು ನೀಲಗಿರಿಯನೆ ಪಿಡಿದೆೞೆವಂತೆ ರಕ್ಕಸನ ಕರಿಯ ಪಿರಿಯೊಡಲನೆೞೆದು ತಂದು ಪೊೞಲ ನಡುವಿಕ್ಕಿದಾಗಳ್ ಪೊೞಲೆಲ್ಲಂ ಚೋದ್ಯಂ ಬಟ್ಟು ಬದ್ದವಣದ ಪಱೆಗಳಂ ಪೊಯ್ಸಿ ಸಾಹಸ ಭೀಮನ ಸಾಹಸಮನಳವಲ್ಲದೆ ಪೊಗೞ್ದು ತಮ್ಮಾಳ್ದನುಮನಿಷ್ಟ ದೈವಮುಮಂ ಕೊಂಡಾಡುವಂತಯ್ವರುಮಂ ಕೊಂಡಾಡೆ ಕೆಲವು ದಿವಸಮಿರ್ಪನ್ನೆಗಮೊಂದು ದಿವ[2]ಸ[ಮ]ಶಿಶಿರ ಕಿರಣ[3]ನಪರ ಜಲನಿಧಿ ತಟ ನಿಕಟ ವರ್ತಿಯಾದನಾಗಳೊರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿ ತಟನುಮಾಗಿ ಬಂದು ಕಣ್ಮುಚ್ಚಲೆಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ ಧರ್ಮಪುತ್ರನಾವ ನಾಡಿಂ ಬಂದಿರೆಲ್ಲಿಗೆ ಪೋದಪಿರೆಂದೊಡುತ್ತರಾಪಥದ ಹಸ್ತಿ[4]ನಪುರದಿಂ ಬಂದೆಮೆಂದೊಡಲ್ಲಿ ಪಾಂಡವರ ಪಡೆಮಾತಾವುದು ಧೃತರಾಷ್ಟ್ರ ಸುಯೋಧನರಿರ್ಪಂದಮಾವುದೆಂದು ಬೆಸಗೊಳೆ—

ಮ॥ ಮನದೊಳ್ ಕೂರದ ಪಾಂಡುರಾಜ ಸುತರುಂ ಲಾಕ್ಷಾ ಗೃಹೋಗ್ರಾಗ್ನಿ [5][ಯಾ]।
ನನದೊಳ್ ಮುೞ್ಗಿದರೆನ್ನ ಪುಣ್ಯಮಱಿಯರ್ ವೇಮಾಱ(?)ರಿನ್ನಾರೊ ಬೇ॥
ರನೆ ಕಿೞ್ತಿಕ್ಕಿದೆನೀಗಳಾಯ್ತು ಧರೆ ನಿರ್ದಾಯಾದ್ಯಮೆಂದಾ ಸುಯೋ।
ಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ ಕರಂ ॥೩೨॥

1. ಪೆ ಬಾೞ್ತಿಗೆಲ್ಲರುಂ। ಬಾರಿಸಲಾಂಜವಂ (ಕ.), ವಾರ್ತೆಗಿಲ್ಲಾರುಂ....(ಖ.),. ವಾರ್ತೆ ದಿಟ್ಟರುಂ। ಬಾರಿಸಲಾಂ ಜವಂ (ಗ); 2. ಸಂ ಶಿ (ಸ.); 3. ನುದಯ ಗಿರಿ ತಟ (ಕ.); 4. ನಾ (ಕ. ಖ. ಘ.); 5. ಯೊ। ಳ್ಮುನಿದರ್ ತೀಱಿಂದರ್ (ಕ. ಖ.), ಯೊ। ಳ್ಮುಳಿಗಿರ್ದನ್ನಯ (ಗ), ಯೊಳ್ ಮುಗ್ಗಿದ (ಘ.), ಧಾ। ನನದೊಳ್ (ಘ§.).

ವ|| ಅದಲ್ಲದೆಯುಂ ಯಜ್ಞಸೇನನೆಂಬ ಮೊದಲ ಪೆಸರ ಪಾಂಚಾಳದೇಶದರಸಂ ದ್ರುಪದನೆಂಬಂ ದ್ರೋಣನೊಳಾದ ಪರಿಭವಮಂ ನೆನೆದಾತನಂ ಕೊಲ್ವನ್ನನೊರ್ವ ಮಗನುಮಂ ವಿಕ್ರಮಾರ್ಜುನಂಗೆ ಪೆಂಡತಿಯಪ್ಪನ್ನಳೊರ್ವ ಮಗಳುಮಂ ಪಡೆದಲ್ಲದಿರೆನೆಂದು ಪೂಣ್ದು ಪೋಗಿ ಪಯೋವ್ರತನೆಂಬ ದಿವ್ಯ ಮುನಿಪತಿಯಿಂ ಪುತ್ರಕಾಮೇಷ್ಟಿಗೆಯ್ಸೆ ಹೋಮಕುಂಡದಲ್ಲಿ ಧಗಧಗಿಸುವ ಜ್ವಾಲಾ ಮಾಲೆಗಳೊಳ್ ಕಿೞ್ತ ಬಾಳುಮತ್ತಪರಮುಮಭೇದ್ಯ ಕವಚಮುಂ ಬೆರಸೊಗೆದ ಧೃಷ್ಟದ್ಯುಮ್ನನೆಂಬ ಮಗನುಮಂ ಜ್ವಾಳಾಮಾಳಿನಿಯೊಗೆವಂತೊಗೆದ ಕೃಷ್ಣೆಯೆಂಬ ಮಗಳುಮಂ ಪಡೆದನಾ ಹೋಮಾಗ್ನಿಯೊಳ್ ಪುಟ್ಟಿದೊಂದು ದಿವ್ಯ ಚಾಪಮುಮಯ್ದು ದಿವ್ಯ ಶರಮೊಳವಾ ಬಿಲ್ಲನೇಱಿಸಿ ಆ ಸರಲ್ಗಳಿಂದಾತನ ಮನೆಯ ಮುಂದೆ ನಭದೊಳ್ ನಲಿ[1]ನಲಿದಾಡುವ ಜಂತ್ರದ ಮೀನನೆಚ್ಚನುಮಾಕೆಗೆ ಗಂಡನಕ್ಕುಮೆಂದಾದೇಶಮಂತಪ್ಪ ಸಾಹಸ ಪುರುಷಂ ವಿಕ್ರಮಾರ್ಜುನನಲ್ಲದೆ ಪೆಱರಿಲ್ಲೆಂಬರದಱಿಂದಿನ್ನುಂ ಪಾಂಡವರೊಳರೆಂಬ ಮಾತುಗಳಂ ಬುದ್ಧಿಯೊಡೆಯರಾರಾನುಂ ನುಡಿವರ್ ದ್ರುಪದನುಮೀಗಳಾ ಕೂಸಿಂಗೆ ಸಯಂಬರಮಂ ಮಾಡಲೆಂದು ನೆಲದೊಳುಳ್ಳರಸುಮಕ್ಕಳೆಲ್ಲರ್ಗಂ ಬೞಿಯನಟ್ಟಿದೊಡೆ ದುರ್ಯೋಧನಾದಿಗಳ್ ಮೊದಲಾದನೇಕ ದೇಶಾಧೀಶ್ವರರೆಲ್ಲಂ ಛತ್ರವತಿಯೆಂಬುದು ದ್ರುಪದನ ಪೊೞಲಾ ಪೊೞಲ್ಗೆ ವಂದಿರ್ದರಾನಲ್ಲಿಂದಂ ಬಂದೆನೆಂದು ಪೇೞೆ[3] ತದ್ವೃತ್ತಾಂತಮೆಲ್ಲಮಂ ಕೇಳ್ದು ತಮ್ಮೊಳಾಳೋಚಿಸಿ—

ಮ|| ತಲೆಯೊಳ್ ಸೀರೆಯನಿಕ್ಕಿ ಕೆಮ್ಮ[2][ನೆ]ನಿತಂ ಪೂಣ್ದಿರ್ಪಮುಗ್ರಾರಿ ವಂ|
ಶ ಲತಾ ವಲ್ಲರಿಗಳ್ಗೆ ದಾವಶಿಖಿವೋಲ್ ಮೆಯ್ದೋಱೆ [3]ತದ್ದ್ರೌಪದೀ ||
ಲಲನಾ ವ್ಯಾಜದಿನೀಗಳೊಂದೆ ಪೊೞಲೊಳ್ ಸಂದಿರ್ದ ಭಾಸ್ವತ್ಸಹ|
ದ್ಬಲಕಂ ಮಾರ್ವಲಕಂ ಗುಣಾರ್ಣವ ಶರಪ್ರಾಗಲ್ಭ್ಯಮಂ ತೋಱುವಂ
|| ೩೩ ||

ವ|| ಎಂದು ನಿಶ್ಚಯಿಸಿ ತಮ್ಮ ಬಗೆದ ಬಗೆಯೊಳ್ ಪರಾಶರ ಮುನೀಂದ್ರೋಪದೇಶಮೊಡಂಬಡೆ ಪಾಂಡವರೇಕಚಕ್ರದಿಂ ಪೊಱಮಟ್ಟು ಶಕುನಂಗಳೆಲ್ಲಮುತ್ತರೋತ್ತರಂ ತಿರ್ದುವಿನಮುತ್ತರಾಭಿಮುಖರಾಗಿ ಪಯಣಂಬೋಗಿ ಕೆಲವಾನುಂ ದಿವಸಕ್ಕೆ ಯಮುನಾ ನದೀ ತಟನಿಕಟ ವರ್ತಿಯಪ್ಪಂ[4][ಗ]ದಪರ್ಣ[5]ವೆಂಬಡವಿಯೊಳಗನೆ ಬರೆವರೆ ದಿನಕರ ಬಿಂಬಾಂಬುಜಮಂಬರ ಸರೋವರದಿಂ ಪತ್ತುವಿಡುವುದುಂ ಕವಿದ ಕೞ್ತಲೆಯಗುರ್ವಾಗೆ ತಮೋಪಶಮನ ನಿಮಿತ್ತಮುರಿವ ಕೊಳ್ಳಿಯುಂ ಪಿಡಿದು ಜಗುನೆಯುಂ ಪಾಯ್ವಾಗಳಾ ಬನಮನಾಳ್ವ ಕುಬೇರನಾಯಕನಂಗ[6]ದಪರ್ಣನೆಂಬ

---

1. ವರಿ (ಕ. ಗ.); 2. ನಿ (ಸ.); 3. ದೀ (ಖ.), ದಾ (ಘ,); 4. ಗಾರವರ್ಣ (ಕ. ಖ.), ಗಾದಪರ್ಣ್ಣ (ಗ.), ಗಾದಪ್ರ್ಣ (ಘ.); 5. ನೆಂ (ಖ. ಗ. ಘ.); 6, ರವರ್ಣ (ಕ.), ದಪ್ರ್ಣ (ಖ.).

ಗಂಧರ್ವಂ ಜಳಕ್ರೀಡೆಯಾಡುತಿರ್ದನಿಬರಿಂ ಮುಂದೆ ಬರ್ಪ ವಿಕ್ರಮಾರ್ಜುನನ ಪಾದಾಭಿಘಾತದೊಳುಚ್ಚಳಿಸುವ ನೀರ ಸಪ್ಪುಳುಮಂ ಕೇಳ್ದು ಪಿಡಿದ ಕೊಳ್ಳಿಯ ಬೆಳಗುಮಂ ಕಂಡು ಬೆಳಗಂ ಕಂಡ ಪತಂಗದಂತೆ ಮಾಣದೆಯ್ತಂದು—

ಮ॥ ಬನಮೆನ್ನಾಳ್ವ ಬನಂ ನಿಶಾಬಲಮಿದಿಂತಸ್ಮದ್ಬಲಂ ಧೂರ್ತನಯ್ ।
ನಿನಗೀ ಪೊಟ್ತುಱೊಳಿತ್ತ ಬರ್ಪದಟನಿಂತಾರಿತ್ತರೆಂದಾಂತೊಡಾ ॥
ತನನಾ ಕೊಳ್ಳಿಯೊಳಿಟ್ಟೊಡಂತದು ಲಯಾಂತೋಗ್ರಾಗ್ನಿಯಂತಟ್ಟೆ ಬಂ ।
ದೆನಸುಂ ಮಾಣದೆ ಬಾಗಿದಂ ಪದಯುಗಕ್ಕಾರೂಢ ಸರ್ವಜ್ಞನಾ ॥ ೩೪ ॥

ವ॥ ಅಂತು ತಾಗಿ ಬಾಗಿದಂತಾಗಿ ಗಂಧರ್ವಂ ಕೊಂತಿವೆರಸಱುವರುಮಂ ತನ್ನ ಬೀಡಿಂಗೊಡಗೊಂಡೊಯ್ದತಿ ಪ್ರೀತಿಯಿಂ ಬಿರ್ದನಿಕ್ಕಿ—

ಕಂ॥ ಇದು ನಿನ್ನ ಕೊಟ್ಟ ತಲೆ ನಿನ ।
ಗಿದನಿತ್ತಪೆನೆಂದು ನುಡಿಯಲಾಗದು ಮಾರ್ಕೊ ।
ಳ್ಳದಿರೆಂದು ಗಿಳಿಯ ಬಣ್ಣದ ।
ಕುದುರೆಯನಯ್ನೂರನಿತ್ತನಂಗ[1]ದಪರ್ಣಂ ॥ ೩೫ ॥

ವ॥ ಇತ್ತೊಡಿವನ್ನೆಗಮೆಮಗಾಗಿರ್ಕೆಂದು ಪ್ರಿಯಂ ನುಡಿದಂಗ[1]ದಪರ್ಣನನಿರವೇೞ್ದು ಮಾರ್ತಾಂಡೋದಯಮೆ ನಿಜೋದಯಮಾಗೆ ಪಯಣಂಬೋಗಿ—

ಕಂ॥ ಪುಣ್ಯನದೀ[2]ನದ ನಗ [ಲಾ]
ವಣ್ಯ ವಿಭೂಷಣೆಯನೊಲ್ದು ನೋಡುತ್ತುಮಿಳಾ ॥
ಪುಣ್ಯ ಸ್ತ್ರೀಯಂ ಸಂಚಿತ ।
ಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ ॥ ೩೬ ॥

ವ॥ ಅಂತು ತದ್ವಿಷಯ ವಿಳಾಸಿನಿಗೆ ಪಿಡಿದ ಕನಕಚ್ಛತ್ರದಂತೆ ಸೊಗಯಿಸುವ ಛತ್ರವತೀ ಪುರದ ಪೊಱವೊೞಲನೆಯ್ತಪ್ಪಾಗಳ್—

ಉ॥ ಪಾಡುವ ತುಂಬಿ ಕೋಡುವ ಪುೞಿಲ್ ನಡಪಾಡುವ ರಾಜಹಂಸೆ ಬಂ।
ದಾಡುವ ತೊಂಡುವೆಣ್ಬುರುಳಿ ತೀಡುವ [3]ತೆಂಬೆರಲೊಲ್ದು ನಲ್ಲರೊಳ್ ॥
ಕೂಡುವ ನಲ್ಲರಾರೆರ್ದೆಗಮಾರ ಮನಕ್ಕಮನಂಗ ರಾಗಮಂ ।
ಮಾಡೆ ಮನಕ್ಕೆ ಬಂದುವರಿಕೇಸರಿಗಲ್ಲಿಯ ನಂದನಾಳಿಗಳ್ ॥ ೩೭ ॥

ವ॥ ಅಂತು ನೋಡುತ್ತುಂ ಬರೆವರೆ—

---

1. ರವಣ್ಣಂ (ಕ.) ; 2. ನಗರೀ ಲಾ (ಕ.), ನಗರಾ (ಗ.), ನದ ನಗರಾ (ಘ.) ; 3. ತಂ (ಘ.).

ಚಂ॥ ಮದ ಗಜ ಬೃಂಹಿತ ಧ್ವನಿ ತುರಂಗಮ ಹೇಷಿತ ಘೋಷ[1][ಮಾ]ದಮೊ।
ರ್ಮೊರ್ದಲೆ ಪಯೋಧಿ ಮಂಥನ ಮಹಾ ರವಮಂ ಗೆಲೆ ತಳ್ತ ಬಣ್ಣವ॥
ಣ್ಣದ ಗುಡಿ ತೊಂಬೆ[2]ಗೊಂಚ[ಲೆಲೆ]ಯಿಕ್ಕಿದ ಕಾವಣಮೆಲ್ಲಿಯುಂ ಪೊದ।
ಟೞ್ದದವಿರೆ ಕಣ್ಗೆ ಕಂಡುವಖಿಳಾವನಿಪಾಳರ ಬಿಟ್ಟ ಬೀಡುಗಳ್ ॥ ೩೮ ॥

ವ॥ ಅಂತು ನೋಡುತ್ತುಂ ಮೆಚ್ಚುತ್ತುಂ ಬರೆವರೆ—

ಉ॥ ಈ ತ್ರಿಜಗಂಗಳೊಳ್ ನೆಗಟ್ದ ಪೆಂಡಿರುಮಂ ಗೆಲೆವಂದ ಪದ್ಮಿನೀ।
ಪತ್ರ ವಿಚಿತ್ರ ನೇತ್ರೆಗೆ ಸಯಂಬರದೊಳ್ ವರನಪ್ಪೆವಾದೊಡೀ॥
ಧಾತ್ರಿಯನಾಳ್ವೆಮಾಮೆ ವಲಮೆಂದು ತೆರಳ್ದ ಸಮಸ್ತ ರಾಜಕ।
ಚ್ಛತ್ರದಿನಂದು ಛತ್ರವತಿಯೆಂಬಭಿಧಾನಮನಾಳ್ದುದಾ ಪೊಟಲ್ ॥ ೩೯ ॥

ವ॥ ಅಂತು ಸೊಗಯಿಸುವ ಪೊೞಲಂ ಪೊಕ್ಕೆಲ್ಲಿಯುಂ ಬೀಡು ಬಿಡಲೆಡೆ ವಡೆಯದೊಂದು ಭಾರ್ಗವ ಪರ್ಣಶಾಲೆಯೊಳೆಡೆಮಾಡಿಕೊಂಡು ಬ್ರಹ್ಮಲೋಕ ಮಿರ್ಪಂತಿರ್ದ ಬ್ರಹ್ಮ ಸಭೆಯೊಳಗೆ ದೇವ ಬ್ರಾಹ್ಮಣರಾಗಿರ್ದರನ್ನೆಗಂ ದ್ರುಪದ ನಿತ್ತಲ್—

ಚಂ॥ ನೆರೆದ ಸಮಸ್ತ ರಾಜಕಮನಾದರದಿಂದಿದಿರ್ಗೊಂಡನೇಕ ರ।
ತ್ನ ರಚಿತಮಾಗೆ ಮಾಡಿಸಿ [3]ಸಯಂಬರ[ಸಾ]ಲೆಯನೋಳಿಯಿಂ ನರೇ॥
ಶ್ವರರ್ಗಿರಲೆಂದು ಚೌಪಳಿಗೆಗಳ್ ಪಲವಂ ಸಮೆದಲ್ಲಿ ರತ್ನದಿಂ।
ಬೆರಸಿದ ಬಣ್ಣದೊಳ್ ಮೆಱೆಯೆ ಕಟ್ಟಿಸಿ ಪುಟ್ಟಿಸಿ ರಂಗಭೂಮಿಯಂ ॥ ೪೦ ॥

ವ॥ ಆ ನೆಲೆಯ ಚೌಪಳಿಗೆಗಳೊಳನೇಕ ಪ್ರಾಸಾದದ ಮೇಲೆ ಚಿತ್ರದ ಪಟವಿಗೆ ಗಳಂ ತುಱುಗಲುಂ ಬಂಬಲ್ಗಳುಮಾಗೆ ಕಟ್ಟಿಸಿ ಪಚ್ಚೆಯ ಹಾರದ ತೋರಣಂ ಗಳಂ ದುಗುಲದ ಗುಡಿಗಳಂ ಕಟ್ಟಿ[ಸಿ] ಕಂಭಂಗಳೊಳೆಲ್ಲಂ ಸುಯ್ಯಾಣದ ಚಿನ್ನದ ಪಟಿ[4]ಯ ಸಕಳವಟ್ಟೆಗಳಂ ಸುತ್ತಿ[ಸಿ] ಮುತ್ತಿನ ಮಂಡವಿಗೆಗಳನೆಡೆಯಱಿದೆತ್ತಿಸಿ ಪೊನ್ನ ಮಾಂಗಾಯ ಗೊಂಚಲ್ಗಳುಮಂ ಮುತ್ತಿನ ಬುಂಭುಕಂಗಳುಮನೆಟಲೆ ಕಟ್ಟಿಸಿ ಮತ್ತಮಾ ಪ್ರಾಸಾದಂಗಳ ಚೌಪಳಿಗೆಗಳ ಪೊನ್ನ ಪೊಂ[5]ಗಱಿಗೆ ನೀಳ್ಪುಂ ಬೆಳ್ಪುಮಂ ತಾಳ್ದಿ ಕರ್ಪಿನೊಳುಪಾಶ್ರಯಂಬಡೆದು—

ಕಂ॥ ತುಱುಗಿದ ಪೂಗೊಂಚಲ ಕಾ।
ಯ್ತೆಱಗಿದ ಮಾವುಗಳ ಬೆಳೆದ ಕೌಂಗಿನ ಗೊನೆ ತ॥
ಳ್ತೆಱಗಿರೆ ಮಾಡದೊಳಲ್ಲಿಯೆ।
ತಿಱಿದುಕೊಳ[6]ಲ್ಕಿಂಬಿನೆಸಕಮೆಸೆದುದುಪವನಂ ॥ ೪೧ ॥

---

[1]. ನಾ (ಸ); [2]. ಕೊಂಬೆಯೆಸೆಯಿ (ಕ.), ಕೊಂಚಯಶಮಿ (ಖ.), ರೊಂಬೆಯುಸಮಿ (ಗ.); [3]. ಸಯಂಬರಶಾಲೆ (ಕ.), ಸ್ವಯಂಬರಶಾಲೆ (ಖ. ಗ. ಘ.); [4]. ಯೆಸಕದ (ಕ.); [5]. ಗೆಱಿ (ಕ.), ಗೆರ (ಖ. ಘ.); [6]. ಲಿಂಬಿನೆ ಸಮೆದುದು (ಖ).

ಕಂ|| ನಾಳೆ ಸಯಂಬರಮೆನೆ ಪಾಂ |
ಚಾಳ ಮಹೀಪಾಳನಖಿಳ ಭೂಭೃನ್ನಿಕರ ||
ಕ್ಕೋಳಿಯೆ ಸಾಱಿದೊಡವನೀ |
ಪಾಲರ್ ಕೆಯ್ಗೆಯ್ಯಲೆಂದು [1]ಪಱಿವಱಿಯಾದರ್ || ೪೨ ||

ವ|| ಆಗಿ ಮಱುದಿವಸಂ ನೇಸಱ್ ಮೂಡೆ—

ಕಂ|| ತಂತಮ್ಮ ರಾಜ್ಯ ಚಿಹ್ನಂ |
ತಂತಮ್ಮ ಮಹಾ ವಿಭೂತಿ ತಂತಮ್ಮ ಬಲಂ ||
ತಂತಮ್ಮೆಸೆವ ವಿಳಾಸಂ |
ತಂತಮ್ಮಿರ್ಪೆಡೆಯೊಳೋಳಿಯಿಂ ಕುಳ್ಳಿರ್ದರ್ || ೪೩ ||

ವ|| ಆಗಳ್ ದ್ರುಪದಂ ತನ್ನ ಪುರಕ್ಕಮಂತಃಪುರಕ್ಕಂ ಪರಿವಾರಕ್ಕಂ—

ಕಂ|| ಸಾಸಿರ ಪೊಂ[2]ಗೆಯ್ದುಂ ಚಿಃ |
[3]ಕಾಸಟಮೆಂದೊಂದು ಲಕ್ಕಗೆಯ್ವುದಿದರ್ಕಂ ||
ಮಾಸರಮುಡಲೆಂದಧಿಕ ವಿ |
ಳಾಸದಿನುಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ || ೪೪ ||

ವ|| ಅಂತು ಮೆಱೆದು ಕೂಸಂ ನೆಱೆಯೆ ಕೆಯ್ಗೆಯ್ಸಿಮೆಂದು ಮುನ್ನ[ಂ] ಕೆಯ್ಗೆ[4] [ಯ್ಸುತಿರ್ದ] ತಱಿದ ಗುಱುಗೆಯರಪ್ಪಂತಃಪುರ ಪುರಂಧ್ರಿಯರಂ ಕರೆದು ಪೇೞ್ವುದುಮಂತೆಗೆಯ್ವೆಮೆಂದು—

ಕಂ|| ಈ ಪೊೞ್ತಿಂಗೀ [5]ರುತುವಿಂ |
ಗೀ ಪಸದನಮಿಂತುಟಪ್ಪ ಮೆಯ್ವಣ್ಣಕ್ಕಂ ||
ತೀ ಪೂವಿನೊಳೀ ತುಡುಗೆಯೊ |
ಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ಕುಂ || ೪೫ ||

ವ|| ಎಂದು ನೆಱೆಯೆ ಪಸದನಂಗೊಳಿಸಿ—

ಚಂ|| ತುಡಿ[6][ಸದೆ] ಹಾರ[7]ಮುಂ ಮೊಲೆಯ ಬಿಣ್ಪಿನೊಳಂ ನಡು ಬಳ್ಕಿದಪ್ಪುದೀ |
ನಡುಗುವುವಲ್ಲವೇ ತೊಡೆ ನಿತಂಬದ ಬಿಣ್ಪಿನೊಳೇವುದಕ್ಕ ಪೋ ||
ಬಿಡು ಕಟಿ ಸೂತ್ರಮುಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಮೇಂ |
ತುಡಿಸುವುದಕ್ಕ ನೂಪುರಮನೀ ತೊಡವೇವುದೊ ರೂಪೆ ಸಾಲದೇ || ೪೬ ||

1. ಪಱಿಮಱಿ (ಕ.); 2: ಗೆಯ್ವುದು (ಘ§.); 3. ಪಾ (ಘ.); 4. ಯ್ಸಿ ತರ್ಪ ....(ಕ.), ಯ್ಸಿ ತಪ್ಪ ತರದ ಗುಡಿಗೆ (ಖ.), ಯ್ಸಿ ತಪ್ಪು ಕರಿದ ಗುಱುಗೆ (ಗ.), ಯ್ಸಿ ತಪ್ಪು ತರಿದ ಗುರಿಗೆ (ಘ.); 5. ವೀವಿಂ¦ ನೀ (ಕ.ಖ.); 6. ಸಿದ (ಸ); 7. ಮುಂ (ಖ.), ದಿಂ (ಘ.).

ವ|| ಎಂದೆಂದೋರೊರ್ವರಾಕೆಯ ರೂಪಂ ವಕ್ರೋಕ್ತಿಯೊಳೆ ಪೊಗೞ್ದು
ಮಂಗಳವಸದನಮಿಕ್ಕಿಯುಂ ಪೊಸ ಮದವಳಿಗೆಯಪ್ಪುದಱಿಂ ತುಡಿಸಲೆವೇೞ್ಕು
ಮೆಂದು ನೆಱೆಯೆ ಪಸದನಂಗೊಳಿಸೆ—

ಕಂ|| ಮಸೆದುದು ಮದನನ ಬಾಳ್ ಕೂ।
ರ್ಮಸೆಯಿಟ್ಟುದು ಕಾಮನಂಬು ಬಾಯ್ಗೂಡಿದುದಾ॥
ಕುಸುಮಾಸ್ತ್ರನ ಚಕ್ರಮಿದೆಂ।
ಬೆಸಕಮನಾಳ್ದತ್ತು ಪಸದನಂ ದ್ರೌಪದಿಯಾ ॥ ೪೭ ॥

ವ|| ಅಂತು ನೆಱೆಯೆ ಪಸದನಂಗೊಳಿಸಿ ಬಿಡುಮುತ್ತಿನ ಸೇಸೆಯನಿಕ್ಕಿ
ತಾಯ್ಗಂ ತಂದೆಗಂ ಪೊಡಮಡಿಸಿ—

ಕಂ|| ನಿಟ್ಟಿಸೆ ಹೋಮಾನಲನೊಳ್।
ಪುಟ್ಟಿದ ನಿನಗಕ್ಕ ಪರಕೆ ಯಾವುದೊ ನಿನ್ನಂ॥
ಪುಟ್ಟಿಸಿದ ಬಿದಿ ನೆಗೞ್ತೆಯ।
ಜೆಟ್ಟಿಗನೊಳ್ ನೆರಪುಗೀಗಳರಿಕೇಸರಿಯೊಳ್ ॥ ೪೮ ॥

ವ|| ಎಂದು ಪರಸಿ ಕನತ್ಕನಕ ಖಚಿತಮುಂ ಮೌಕ್ತಿಕ ಸ್ತಂಭಮುಮಪ್ಪ
ಸರ್ವತೋಭದ್ರಮೆಂಬ ಸಿವಿಗೆಯನೇಱಿಸಿ ಚಾಮರದ ಕುಂಚದಡಪದ ಡವಕೆಯ
ವಾರ ವಿಳಾಸಿನಿಯರೆರಡುಂ ಕೆಲದೊಳ್ ಸುತ್ತಿಱಿದು ಬಳಸಿ ಬರೆ ತಲೆವರಿದೋಜೆಯ
ಪಿಡಿಯನೇಱಿ ಪೆಂಡವಾಸದೊಳ್ವೆಂಡಿರ್ ಬಳಸಿ ಬರೆ ತಳ್ತು ಪಿಡಿದ ಕನಕ ಪದ್ಮದ
ಸೀಗುರಿಗಳ ನೆೞಲೆಡೆವಱಿಯದೆ ಬರೆ ದ್ರುಪದನುಂ ಧೃಷ್ಟದ್ಯುಮ್ನನುಂ ಮುತ್ತಿನ
ಮಾಣಿಕದ ಮಂಡನಾಯೋಗಂಗಳೊಳ್ ನೆಱೆಯೆ ಪಣ್ಣಿದ ಮದಾಂಧ ಗಂಧ
ಸಿಂಧುರಂಗಳನೇಱಿ ಬರೆ ಮುಂದೆ ಪರಿವ ಧವಳಚ್ಛತ್ರ ಚಂದ್ರಾದಿತ್ಯ ಪಾಳಿಕೇತನಾದಿ
ರಾಜ್ಯ ಚಿಹ್ನಂಗಳುಂ ಮೊೞಗುವ ಮಂಗಳ ತೂರ್ಯಂಗಳೆಸೆಯೆ ಪೆಱಪೆಱಗನೆ ದ್ರೌಪದಿ
ಶೃಂಗಾರ ಸಾಗರಮೆ ಮೇರೆದಪ್ಪಿ ಬರ್ಪಂತೆ ಬರೆ—

ಕಂ|| ಪರೆದುಗುವ ಪಂಚ ರತ್ನದ।
ಪರಲ್ಗಳುದಿರ್ದೆಸೆಯೆ ಸೌಧದೊಳೆ ಕೆದಱಿದ ಕ॥
ರ್ಪ್ಪುರವಳ್ಕುಗಳೆಸೆಯೆ ಸಯಂ।
ಬರ ಸಾಲೆಯನೆಸೆವ ಲೀಲೆಯಿಂ ಪುಗುತಂದಳ್ ॥ ೪೯ ॥

ವ|| ಆಗಳ್—

ಕಂ॥ ನುಡಿವುದನೆ ಮೆಱೆದು ಪೆಱತಂ।
ನುಡಿಯೆ ಕೆಲರ್ ನೋಡದಂತೆ ನೋಡೆ ಕೆಲರ್ ಪಾ॥
ವಡರ್ದವೊಲಿರೆ ಕೆಲರೊಯ್ಯನೆ।
ತುಡುಗೆಯನೋಸರಿಸೆ ಕೆಲರುದಗ್ರಾವನಿಪರ್ ॥ ೫೦ ॥

ಒಡನೆ ನೆರೆದರಸುಮಕ್ಕಳ।
ನಿಡುಗಣ್ಗಳ ಬಳಗವೆಱಗೆ ತನ್ನಯ ಮೆಯ್ಯೊಳ್॥
ನಡೆ ಬಳಸಿ ಪಲರುಮಂಬಂ।
ತುಡೆ ನಡುವಿರ್ದೊಂದು ಪುಲ್ಲೆಯಿರ್ಪಂತಿರ್ದಳ್ ॥ ೫೧ ॥

ಮೊನೆಯಂಬುಗಳೊಳೆ ಪೂಣ್ದಪ।
ನನಿಬರುಮಂ ಕಿಱಿದು ಬೇಗದಿಂ ಹರಿಗನದ॥
ರ್ಕೆನ[1]ಗೆಡೆವೇಟ್ಟುಮೆ ಎಂಬವೊ।
ಲನಿಬರುಮಂ ಪೂಣ್ದ[2]ನ[ತನು] ನನೆಯಂಬುಗಳಿಂ ॥ ೫೨ ॥

ವ॥ ಆಗಳ್ ಪಾಂಡವರ್ ತಮ್ಮಂ ಪೆಱರಱಿಯದಂತು ಬ್ರಾಹ್ಮಣ ವೇಷದೊಳೆ ಬ್ರಹ್ಮಸಭೆಯೊಳ್ ಬಂದಿರೆ—

ಚಂ॥ ಇಳೆಯೊಳುದಗ್ರ ವೀರ ಭಟ ತುಂಗ ಮತಂಗಜ ವಾಜಿ ರಾಜಿ ಚೌ।
ಪಳಿಗೆಗಳೊಳ್ ಧರಾಧರ ಧುರಂಧರ ಬಂಧುರ ರಾಜಕಂ ವಿಯ॥
ತ್ತಳದೊಳನೇಕ ಕಿಂಪುರುಷ ಕಿನ್ನರ ಖೇಚರ ಸಿದ್ಧ ಬೃಂದಮು।
ಜ್ವಳಿಸಿರೆ ಮೂಱು ಲೋಕಮನೆ ಪೋಲ್ತುದು ಮೂನೆಲೆಯಿಂ ಸ್ವಯಂಬರಂ ॥ ೫೩ ॥

ವ॥ ಆಗಳ್ ವಿದಿತ ವೃತ್ತಾಂತೆಯಾಗಿ ದ್ರೌಪದಿಯ ಕೆಲದೊಳಿರ್ದ ಸುಂದರ ಮಾಲೆಯೆಂಬ ಚೇಟಿ—

ಮ॥ ಕನಕೋಚ್ಚಾಸನ ಸಂಸ್ಥಿತಂ ನೃಪನವಂ ಬೆಂಗೀಶನುತ್ತುಂಗ ಪೀ।
ನ ನಿಜಾಂಸಾರ್ಪಿತ ಲಂಬ[3]ಹಾರನವನಾ ಪಾಂಡ್ಯಂ ಮನಂಗೊಂಡು ನಿ॥
ನ್ನನೆ ಕಿಟ್ಟಿಗಣ್ಣೊಳೆ ನೋಡುತಿರ್ಪವನವಂ ಚೇರಮ್ಮನಾದಿತ್ಯ ತೇ।
ಜನವಂ ನೋಡು ಕಳಿಂಗ ದೇಶದರಸಂ ಪಂಕೇಜ ಪತ್ರೇಕ್ಷಣೇ ॥ ೫೪ ॥

ವ॥ ಮತ್ತಿತ್ತ ಬೀಸುವ ಚಾಮರಂಗಳ ಪೊಳಪಿನೊಳಮೆತ್ತಿದ ಬೆಳ್ಗೊಡೆಗಳ ಬೆಳ್ಪಿನೊಳಂ ದೆಸೆಗಳೆಲ್ಲಂ ಧವಳಿಸಿದನ್ನವಾಗೆ ಪೊಗಱುತೆ ವರ್ಪವರ ಸರಂಗಳೊಳಂ ಪಾಡುವ ಪಾಠಕಾಱಿರಿಂಚರಂಗಳೊಳೆಲ್ಲಂ ದಿಗ್ಭಿತ್ತಿಗಳ್ ತೆಕ್ಕನೆ ತೀವೆ ಮಣಿಮಯ ಪೀಠದ ಮೇಲೆ ಕಾಲನವಷ್ಟಂಭದಿಂ ನೀಡಿ—

---

1. ಗೆ ಗೆಡೆವೇಟ್ಟುಮೆಂ (ಖ.ಘ.); 2. ನಂತು (ಸ.); 3. ಬಾಹುವ (ಕ.ಖ.ಗ.).

ಮ ॥ ಅಲರಂಬಿಂ[1]ದುಱಿದೆನ್ನ ಮೆಲ್ಲೆರ್ದೆಯನಿಂ[2][ತುರ್ಚಿ]ತ್ತಿದೆಂಬಂತೆ ನೆ।
ಯ್ದಿಲ ಕಾವಂ ತಿರುಪುತ್ತು[3]ಮೊ[ಂ]ದನನಿಬರ್ ತಮ್ಮಂದಿರುಂ ತನ್ನೆರ ॥
ಟ್ಟೆಲದೊಳ್ ಬಂದಿರೆ ನೋಡಿ ಸೋಲ್ತು ನಿನಗಾ ಗೇಯಕ್ಕೆ ಸೋಲ್ತಂತೆ ಪೋಲ್ ।
ತಲೆಯಂ ತೂಗುವವಂ ಸುಯೋಧನ ನೃಪಂ ನೀನಾತನಂ ನೋಡುಗೇ ॥ ೫೫ ॥

ವ॥ ಮತ್ತಿತ್ತ ಮಿಂಚಂ [4]ತಟ್ಟೆ ಮೆಡಱಿದಂತೆ ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ ಬಳಸಿದಗಣ್ಯ ಪಣ್ಯಾಂಗನಾ ಜನದ ನಡುವೆ ಮಣಿಮಯ ಪೀಠಂಗಳನೇಱಿ—

ಕಂ॥ ಆಯ[5]ತ ಯದುವಂಶ ಕುಲ।
ಶ್ರೀಯಂ ತಱಿಸಿದದಟರತಿರಥರವರ ॥
ತ್ಯಾಯತ ಭುಜ ಪರಿಘರ್ ನಾ।
ರಾಯಣ ಬಲದೇವರೆಂಬರಂಬುಜ ವದನೇ ॥ ೫೬ ॥

ವ॥ ಎಂದು ಕೆಱಿದಂತರಂ ಪೋಗಿ—

ಉ॥ ಇಂತಿವರಿನ್ನರೀ ದೊರೆಯರೆಂದಱಿವಂತಿರೆ ಪೇೞ್ದುವೇೞ್ದು ರಾ।
ಜಾಂತರದಿಂದೆ ರಾಜಸುತೆಯಂ ನಯದಿಂದವಳುಯ್ದಳಂತು ಸ ॥
ದ್ಭ್ರಾಂತ ಸಮೀರಣೋತ್ಥಿತ ವಿಶಾಳ ವಿಳೋಳ ತರಂಗ ರೇಖೆ ಪ।
ದ್ಮಾಂತರದಿಂದಮಿಂಬಱಿದು ಮಾನ[6]ಸ ಹಂಸಿಯನುಯ್ವಮಾರ್ಗದಿಂ ॥೫೭॥

ವ॥ ಅಂತು ನೆರೆದರಸುಮಕ್ಕಳಾರುಮಂ ಮೆಚ್ಚದೆ ಮಗುೞ್ವರೆ ದ್ರುಪದನಿದಱೊಳೆಲ್ಲಮೇನೀ ಹೋಮಾಗ್ನಿ ಸಂಭವಮಪ್ಪ ದಿವ್ಯ ಚಾಪಮನೇಱಿಸಿಯುಮಿಾಯಯ್ದು ಶರದೊಳಾಕಾಶದೊಳ್ ನಲಿದು ಪೊಳೆಯುತ್ತಿರ್ಪ ಜಂತ್ರದ ಮಿಾನನಿಸಲಾರ್ಪೊಡೆ ಬಂದೇಱಿಸಿಯುಮೆಚ್ಚು ಗೆಲ್ಲಂಗೊಂಡೆನ್ನ ಮಗಳಂ ಮದುವೆಯಪ್ಪುದೆಂಬುದುಮಾಮಾಮೆ ಬಿಲ್ಲನೇಱಿಸಿದಪೆವೆಂದೆನಿಬರಾನುಮರಸುಮಕ್ಕಳ್ ಬಂದು—

ಉ॥ ಏಱಿಪೆವೆಂದವರ್ ನೆಲದಿನೆತ್ತಲುಮಾಱದೆ ಬಿೞ್ದು ನೆತ್ತರಂ।
ಕಾಱಿಯುಮೆತ್ತಿ ಕಯ್ಯುಡಿದುಮಾಗಳೆ ಕಾಲುಡಿದುಂ ಬೞಲ್ದು ಪ ॥
ಲ್ಲಾಱಿ ಪೊಡರ್ಪುಗೆಟ್ಟುಸಿರಲಪ್ಪೊಡಮಾಱದೆ ಪೋದೊಡಾಗಳಾ।
ನೇಱಿಪೆನೆಂದು ಪೊಚ್ಚಱಿಸಿ ಬಂದು ಸುಯೋಧನನುಗ್ರ ಚಾಪಮಂ ॥ ೫೮ ॥

ವ॥ ಮೂಱು ಸೂೞ್ ಬಲವಂದು ಪೊಡಮಟ್ಟು—

---

1. ದೊರಸೆ (ಕ.ಗ.); 2. ದುರ್ಬ್ಬೆಱಿತೆಂ (ಕ.), ದುರ್ಬ್ಬೆತ್ತಿದೆಂ (ಖ.ಘ.), ದುಬ್ಬೇಱಿದೆಂ (ಗ.); 3. ಮಾದಮ (ಕ.), ಮೊಡನ (ಖ.ಘ.), ಮೋದನ (ಗ); 4. ಕ (ಸ.); 5. ತಿ (ಖ.ಗ.ಘ.); 6. ವ (ಖ.ಗ.ಘ.).

ಕಂ॥ ಪಿಡಿದಾರ್ಪ ಭರದಿನೆತ್ತ।
ಲ್ಕೊಡರಿಸಿದೊಡೆ ನೆಲದಿನಣಮೆ ತಳರದೆ ಬಿಲ್ ನಿ॥
ಲ್ತೊಡೆ ಗುಡು ಗುಡು ಗುಡು ಗೊಳ್ಳಿಂ।
ದೊಡನಾರೆ ಸುಯೋಧನಂ ಕರಂ ಸಿಗ್ಗಾದಂ ॥೫೯॥

ವ॥ ಆಗಿ ಪೋಗಿ ಕರ್ಣನ ಮೊಗಮಂ ನೋಡಿದೊಡೆ ಕರ್ಣನಾಳ್ದನ ಸಿಗ್ಗಾದ ಮೊಗಮಂ ಕಂಡು—

ಕ॥ ಆನೇಱಪೆನೆಂದಾ ಕಾ।
ನೀನಂ ಬಂದೆತ್ತಿ ಬಿಲ್ಲನೇಱಿಸಿ ತೆಗೆಯಲ್॥
ತಾನಾರ್ತನಿಲ್ಲ ತೆಗೆವಂ।
ತಾ ನೃಪತಿಗಳರಿಗನಿದಿರೊಳೀಂ ಪುಟ್ಟಿದರೇ ॥೬೦॥

ವ॥ ಅಂತಾ ಬಿಲ್ಲಂ ಪಿಡಿದವರೆಲ್ಲಂ ಬಿಲ್ಲುಂಬೆಱಗುಮಾಗಿ ಸಿಗ್ಗಾಗಿ ಪೋಗಿ ತಂತಮ್ಮಿರ್ಪೆಡೆಯೊಳಿರೆ ಪಾಂಚಾಳ ರಾಜನೀ ನೆರೆದರಸುಮಕ್ಕಳೊಳಾರುಮೀ ಬಿಲ್ಲ ನೇಱಿಸಲಾರ್ತರಿಲ್ಲಮೀ ಜನವಡೆಯೊಳಾರಾನುಮೀ ಬಿಲ್ಲನೇಱಿಸಲಾರ್ಪೊಡೆ ಬನ್ನಿಮೆಂದು ಸಾಱುವುದುಂ—

ಚಂ॥ ಮುಸುಕಿದ ನೀರದಾವಳಿಗಳಂ ಕಿರಣಂಗಳೊಳೊತ್ತಿ ತೇಜಮು।
ರ್ವಿಸುವಿನಮಾಗಳೊರ್ಮೊದಲೆ ಮೂಡುವ ಬಾಳ ದಿನೇಶ ಬಿಂಬದೊಂ॥
ದೆಸಕದಿನಾ ದ್ವಿಜನ್ಮ ಸಭೆಯಂ ಪೊಱಮಟ್ಟೊಡೆ ಮಾಸಿದಂದಮುಂ।
ಪಸದನದಂತೆ ಕಣ್ಗೆಸೆದು ತೋಱದುದಾ ಕದನತ್ರಿಣೇತ್ರನಾ ॥೬೧॥

ವ॥ ಅಂತು ಪೊಱಮಡುವರಾತಿಕಾಲಾನಲನಂ ಕಂಡು [1]ಕಡ್ಡುವಂದ ದೊಡ್ಡರೆಲ್ಲಂ ಮುಸುಱೆ—

ಕಂ॥ ಸಂಗತ[2]ಸತ್ವರ್ ಕುರು ರಾ।
ಜಂಗಂ ಕರ್ಣಂಗಮೇಱಿಸಲ್ಕರಿದನಿದಂ॥
ತಾಂ ಗಡಮೇಱಪನೀ ಪಾ।
ರ್ವಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ ॥೬೨॥

ವ॥ ಎಂದು ಬಾಯ್ಗೆ ವಂದುದನೆ ನುಡಿಯೆ ರಂಗಭೂಮಿಯ ನಡುವೆ ನಿಂದು ದಿವ್ಯ ಚಾಪಕ್ಕೆ ಪೊಡವಟ್ಟದನವಯವದಿನೆಡಗೆಯ್ಯೊಳೆತ್ತಿಕೊಂಡು ತನ್ನ ಬಗೆದ ಕಜ್ಜಮಂ ಗೊಲೆಗೊಳಿಸುವಂತಾ ಬಿಲ್ಲ ಗೊಲೆಯನೇಱೆ[3] ನೂಂಕಿ—

1. ಕಂಡುವಂದ ದೊಡ್ಡ (ಕ.); 2. ಸತ್ವಂ (ಕ.).

ಮ॥ ದೆಸೆ ಕಂಪಂಗೊಳೆ ಕೊಂಡು ದಿವ್ಯ ಶರಮಂ ಕರ್ಣಾದಿಗಳ್ ಕಂಡು ಬೆ।
ಕ್ಕಸಮಾಗಿರ್ಪಿನಮೊಂದೆ ಸೂಟಿ ತೆಗೆದಾಕರ್ಣಾಂತಮಂ ತಾಗೆ ಸಿ॥
ಟ್ಟಿಸಲಾರ್ಗಾರ್ಗಿಸಲಕ್ಕುಮೆಂಬೆಸಕದಾ ಮೀನಂ ಸಮಂತೆಚ್ಚು ಮೆ।
ಚ್ಚಿಸಿದಂ ದೇವರುಮಂ ಧನುರ್ಧರರುಮಂ ವಿದ್ವಿಷ್ಟ ವಿದ್ರಾವಣಂ ॥೯೩॥

ವ॥ ಆಗಳಾ ಪಿಡಿದ ಬಿಲ್ಲೆ ಕರ್ಬಿನ ಬಿಲ್ಲಾಗೆಯುಮಂಬುಗಳೆ ಪೂವಿನಂಬುಗಳಾಗೆಯುಮೆಚ್ಚ ಮೀನೆ [ಮೀನ]ಕೇತನಮಾಗೆಯುಂ ಸಹಜಮನೋಜನಂ ಮನೋಜನೆಂದೆ ಬಗೆದು—

ಚಂ॥ ನಡೆ ಕಡೆಗಣ್ ಮನಂ ಬಯಸೆ ತಳ್ತಮರ್ದಪ್ಪಲೆ ತೋಳ್ಗಳಾಸೆಯೊಳ್।
ತೊಡರ್ದಿರೆ [1]ಪೊಣ್ಮೆ ಘರ್ಮಜಲಮುಣ್ಮೆ ಭಯಂ ಕಿಡೆ ನಾಣ್ ವಿಕಾರದೊಳ್॥
ತೊಡರ್ದಿರೆ ಕೆಯ್ತವುಮ್ಮಳಿಪ ಕನ್ನೆಗೆ ಸುಂದರಮಾಲೆ ಮಾಲೆಯಂ।
ತಡೆಯದೆ ನೀಡೆ ಮಾಣದೆ ಗುಣಾರ್ಣವನಂ ಸತಿ ಮಾಲೆ ಸೂಡಿದಳ್ ॥೯೪॥

ವ॥ ಆಗಳ್ ದ್ರುಪದಂ ಬದ್ಧವಣದ ಪಱೆಗಳಂ ಬಾಜಿಸಲ್ವೇಳ್ದು ಸುರತಮಕರಧ್ವಜನಂ ದ್ರೌಪದಿಯೊಡನೆ ಸಿವಿಗೆಯನೇಱಿಸಿ ಧೃಷ್ಟದ್ಯುಮ್ನ ಯುಧಾಮನ್ಯೂತ್ತಮೌಜಶ್ಶಿಖಂಡಿಚೇಕಿತಾನರೆಂಬ ತನ್ನ ಮಗಂದಿರುಂ ತಮ್ಮಂದಿರುಂ ಬೆರಸು ನೆಲಂ ಮೂರಿವಿಟ್ಟಂತೆ ಬರೆ ಮುಂದಿಟ್ಟು ಪೊೞಲ್ಗೊಡಗೊಂಡುವರ್ಪುದುಮಿತ್ತ ದುರ್ಯೋಧನಂ ಕರ್ಣ ಶಲ್ಯ ಶಕುನಿ ದುಶ್ಶಾಸನಾದಿಗಳೊಳಾಲೋಚಿಸಿ ಪೇೞಿಮೇ ಗೆಯ್ವಮೆನೆ ಕರ್ಣನಿಂತೆಂದಂ—

ಮ॥ ಜನಮೆಲ್ಲಂ ನೆರೆದಕ್ಕಟಣ್ಣರಿವರಿಂದೇಮಂದರೇವೋದರೆಂ।
ಬಿನಮೇಂ ಪೋಪಮೆ ನಾಡ ಕೂಟಕುಳಿಗಳ್ಗೀದೋಸ[2]ಮೇಂ ಬನ್ನ[3]ಮೊಂ॥
ದನೆ ಕೇಳಾಂತರನಿಕ್ಕಿ ಮಿಕ್ಕ ವಿಜಯಶ್ರೀಕಾಂತೆಗಂ ಕಾಂತೆಗಂ।
ನಿಸಗಂ ದೋರ್ವಲದಿಂದಮೊಂದೆ ಪಸೆಯೊಳ್ ಪಾಣಿಗ್ರಹಂ ಗೆಯ್ಯೆನೇ ॥೯೫॥

ವ॥ ಎನೆ ಶಲ್ಯನಿಂತೆಂದಂ—

ಚಂ॥ ಕುಡುವೊಡೆ [4]ನಿಸ್ತ್ರಪಂ ಕುಡುವುದೇಱಿಸಿದಂ ಬೆಸೆಕೋಲನೆಂದು ಪೇೞ್।
ಕುಡುವುದೆ ಕನ್ನೆಯಂ ದ್ವಿಜಕುಲಂಗಿದು ವಿಶ್ವನರೇಂದ್ರ ವೃಂದದೊಳ್॥
ತೊಡರ್ದ ಪರಾಭವಂ ದ್ರುಪದನಂ ತಱಿದೊಟ್ಟದೆ ಕೆಮ್ಮಗಾಸಿದಂ।
ಕಡೆಗಣಿಸಿರ್ದೊಡೆನ್ನ ಕಡುಗೊರ್ವಿದ ತೋಳ್ಗಳ ಕೊರ್ವದೇವುದೋ ॥೯೬॥

---

[1]. ಸೋರೆ (ಕ), ಸೂಳೆ (ಖ.ಗ); [2]. ಮೊಂ (ಕ); [3]. ಮೆನ್ನದೆ (ಘ); [4]. ನಿಶ್ಶ್ರವಂ (ಕ), ನಿಸ್ರವಂ (ಖ), ನಿಸ್ರುಹಂ (ಗ).

ವ || ಎಂದು ಕೆಳರ್ದು ನುಡಿದು ಸಯಂಬರಕೆ ನೆರೆದರಸುಮಕ್ಕಳೆಲ್ಲ[1][ರನು]ತ್ಸಾಹಿಸಿ ನೋಡೆ ನೋಡೆ—

ಉ || ಪಕ್ಕರೆಯಿಕ್ಕಿ ಬಂದುವು ಹಯಂ ಘಟೆ ಪಣ್ಣಿದುವಾಯುಧಂಗಳಿಂ |
ತೆಕ್ಕನೆ ತೀವಿ ಬಂದುವು ರಥಂ ಪುಲಿವಿಂಡುವೊಲಾದಳುರ್ಕೆ ಕೈ ||
ಮಿಕ್ಕಿರೆ ಬಂದುದೊಂದಣಿ ರಣಾನಕ ರಾವಮಳುಂಬಮಾದುದಾರ್ |
ಮಿಕ್ಕು ಬರ್ದುಂಕುವನ್ನರಿವರ್ಗೆಂಬಿನೆಗಂ ಮಸಗಿತ್ತು ರಾಜಕಂ ||೬೭||

ವ || ಅಂತು ನೆಲಂ ಮೂರಿವಿಟ್ಟಂತೆ ತಳರ್ದು—

ಚಂ || ತೆರೆಗಳ ಬಂಬಲಂ ಮಿಳಿರ್ವ ಕೇತನ[2][ರಾ]ಜಿಗಳೋಳಿವಟ್ಟ ಬೆ |
ಳ್ನೊರೆಗಳ ಪಿಂಡನೆತ್ತಿಸಿದ ಬೆಳ್ಗೊಡೆಗಳ್ ಮಕರಂಗಳಂ ಭಯಂ ||
ಕರ ಕರಿಗಳ್ ತೆಱಂಬೊಳೆವ ಮೀಂಗಳನುಳ್ಕುವ ಕೈದುಗಳ್ ನಿರಾ |
ಕರಿಸಿರೆ ಮೇರೆದಪ್ಪಿ ಕವಿದತ್ತು ನರಾಧಿಪ ಸೈನ್ಯ ಸಾಗರಂ ||೬೮||

ವ || ಅಂತು ಕವಿದ ರಿಪು ಬಳ ಜಳನಿಧಿಯ ಕಳಕಳ ರವಮಂ ಕೇಳ್ದು ಪೊೞಲಂ ಪುಗಲೊಲ್ಲದೆ ನಿಂದ ಮನುಜಮಾಂಧಾತನಂ ಪಾಂಚಾಳರಾಜನಿಂತೆಂದಂ—

ಮ || ಧನುವಂ ನೀಂ ತೆಗೆದೆಚ್ಚು ಮೀನನಳವಂ ಕೆಯ್ಕೊಂಡುದರ್ಕಂ ಕರಂ |
ನಿನಗೀ ಕನ್ನಿಕೆ ಸೋಲ್ತುದರ್ಕಮೆರ್ದೆಯೊಳ್ ಕೋಪಾಗ್ನಿ ಕೈಗಣ್ಮೆ ಬಂ ||
ದಿನಿತುಂ ರಾಜಕುಲಂ ಸಮಸ್ತಭರದಿಂ ಮೇಲೆಟ್ಟಿದಿನ್ ಕಾವನಾ |
ವನೊ ನೀನಲ್ಲದೆ ಕಾವುದೆನ್ನ ತಲೆಯಂ ವಿದ್ವಿಷ್ಟವಿದ್ರಾವಣಾ ||೬೯||

ವ || ಎಂಬುದುಮರಾತಿ ಕಾಳಾನಳನಿದರ್ಕೇನುಂ ಚಿಂತಿಸಲ್ವೇಡ ನೀಮೆನ್ನ ಕಾಳೆಗಮಂ ಪೆಱಗಿರ್ದು ನೋಡಿಮೆಂದು ತಾನುಂ ಭೀಮಸೇನನುಂ ದಿವ್ಯಶರಾಸನಂಗಳಂ ಕೊಂಡು ಪೂಣೆ ಪುಗುವರಾತಿ ಬಲಮಂ ಮಾರ್ಕೊಂಡು ತೆಗೆ ನೆಱೆದಿಸೆ—

ಚಂ || ಸರಳ ಪೊದಳ್ದ ಬಲ್ಸರಿಯ ಕೋಳ್ಗಿರಲಾಱದೆ ಬಿಲ್ ತೆರಳ್ದು ದು |
ರ್ಧರ [3][ಹಯ]ಮುಗ್ಗಿ ಸಂದಣಿಸಿ ಸಂದಣಿ ಕೊಟ್ಟುದಿಗೊಂಡುದಗ್ರ ಭೀ ||
ಕರ ರಥಮು[4][ಗ್ಗಿ] ದಂತಿಘಟೆಗಳ್ ಪೆಱಗಿಟ್ಟೊಡೆ ಕಟ್ಟೆಗಟ್ಟಿದಂ |
ತಿರೆ ತಳರ್ದತ್ತರಾತಿ ಬಲಮಾಂಪವರಾರ್ ಕದನತ್ರಿಣೇತ್ರ[5][ನಂ] ||೭೦||

ವ || ಆಗಳ್ ಕರ್ಣನಾರ್ಣವನಿನಾದದಿಂದಾರ್ದು ಗುಣಾರ್ಣವನೊಳ್ ಬಂದು ತಾಗಿ ಶಲ್ಯಂ ಭೀಮಸೇನನೊಳ್ ತಾಗಿ ಕಿಱಿದುಂ ಪೊೞ್ತು ಕಾದೆ—

---

1. ಮುತ್ಸಾಹಿಸಿ (ಕ), ಮುತ್ಪಾಡಿಸಿ (ಖ. ಗ. ಘ); 2. ವಾ (ಸ); 3. ರಥ (ಕ. ಖ. ಗ), ದರ (ಘಙ.); 4. ಱಿ್ಗ (ಸ.); 5. ನಾ (ಸ).

ಚಂ॥ ಅರಿದು ಗೆಲಲ್ಕೆ ಪಾರ್ವನ ಶರಾಸನ ವಿದ್ಯೆಯನೆಂದು ನೊಂದು ನಿ।
ತ್ತರಿಸದೆ ಪಾರ್ವನೊಳ್ ಕಲಹಮಾಗದು ಚೀ ದೊರೆಯಲ್ತಿದೆಂದು ಭಾ॥
ಸ್ಕರ ಸುತನೊಯ್ಯನೋಸರಿಸೆ ಮದ್ರಮಹೀಶನುಮಂ ಮರುತ್ಸುತಂ।
ವಿರಥ[1]ನೆ ಮಾಡಿ ತಳ್ತು ನೆಲಕಿಕ್ಕಿದನೊರ್ವೆಯೆ ಮಲ್ಲಯುದ್ಧದೊಳ್ ॥೭೧॥

ವ॥ ಆಗಳಾ ಬಲದ ನಡುವಿರ್ದ ನಾರಾಯಣಂ ಬಲದೇವಂಗೆ ಸುಟ್ಟಿತೋಱಿ ಭೀಮಾರ್ಜುನರ್ಕಳಿವರಮೋಘಮಪ್ಪರೆಂದವರ ಸಾಹಸಕ್ಕೆ ಮೆಚ್ಚಿ ಸಂತಸಂಬಟ್ಟಿರ್ದಾಗಳುೞಿದರಸುಮಕ್ಕಳೆಲ್ಲಂ ಕರ್ಣ ಶಲ್ಯರ್ ಮೊಗಂದಿರಿದುದಂ ಕಂಡು ಮನಂಗೆಟ್ಟು—

ಕಂ॥ ಕರವೊಸೆದಾ ದ್ರುಪದಜೆಯೊಳ್।
ನೆರೆದೊಸಗೆಗೆ ತಮ್ಮ ಬೀರಮುಂ ಬಿಂಕಮುಮಂ॥
ತೆಱಿವುಂ ತೆಲ್ಲಂಟಿಯುಮೆಂ।
ದರಿಕೇಸರಿಗಾಗಳೀವವೋಲ್ ಬೆನ್ನಿತ್ತರ್ ॥೭೨॥

ವ॥ ಆಗಳ್ ವಿಕ್ರಾಂತತುಂಗಂ ಬಿಲ್ಲ ಕೊಪ್ಪಿನ ಮೇಲೆ ಕೆಯ್ಯನೂಱಿ ಮುಗ್ಧ ಳ್ನಗೆ ನಗುತ್ತುಂ ಪಾಂಚಾಳರಾಜ ತನೂಜೆಗಿಂತೆಂದಂ—

ಕಂ॥ ನಿನ್ನ[2]ನುಱುಗಿಸಲುಮಾಜಿಯೊ।
ಳಿನ್ನಂ ಬೆಂಕೊಂಡು ಕಾದಲು ಬಂದೀಗಳ್॥
ಬಿನ್ನನೆ ಮೊಗದಿಂ ಬೀರರ್।
ಬೆನ್ನಿತ್ತುದನಿನಿಸು ನೋಡ ಸರಸಿರುಹಮುಖೀ ॥೭೩॥

ವ॥ ಎಂಬನ್ನೆಗಂ ದ್ರುಪದಂ ಬಂದವರ್ ಪಾಂಡವರಪ್ಪುದುಮಂ ತನ್ನಳಿಯಂ ವಿಕ್ರಮಾರ್ಜುನನಪ್ಪುದುಮಂ ತಪ್ಪಿಲ್ಲದಱಿದು ಮಹಾವಿಭೂತಿಯಿಂ ಪೊೞಲಂ ಪುಗಿಸಿ—

ಚಂ॥ ಪೊೞಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ ತಳ।
ತ್ತಳಿಸೆ ವಿಚಿತ್ರ ಕೇತು ತತಿಗಳ್ ಮಿಳಿರ್ದಾಡೆ ಪುರಾಂಗನಾ ಜನಂ॥
ಗಳ ಜಯ ಜೀಯಮಾನ ರವಮಿಕ್ಕುವ ಸೇಸೆ ಮನೋನುರಾಗಮಂ।
ಬಳೆಯಿಸೆ ಪೊಕ್ಕನಾ ದ್ರುಪದ ಮಂದಿರಮಂ ಪರಸೈನ್ಯಭೈರವಂ ॥೭೪॥

ವ॥ ಆಗಳ್ ದ್ರುಪದಂ ಪಚ್ಚೆಯ ನೆಲಗಟ್ಟಿನೊಳಂ ರಾಜಾವರ್ತದ ಕಂಬದೊಳಂ ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಮಿಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ ಪಳುಕಿನ ಚಿತ್ರಭಿತ್ತಿಯೊಳಂ ಚಂದ್ರಕಾಂತದ

---

1. ನ (ಖ); 2. ನೊಲಿಯಿ (ಘ).

ಚಂದ್ರಶಾಲೆಯೊಳಸೊಪ್ಪುವ ವಿವಾಹ ಗೇಹಮಂ ಸಮೆಯಿಸಿಯದಱ ನಡುವ ಣಾರ್ದ್ರ ಮೃತ್ತಿಕಾ ವಿರಚಿತಮಪ್ಪ ಚತುರಾಂತರದೊಳ್ ಮುತ್ತಿನ ಚೌಕದ ನಡುವಣ ಚೆಂಬೊನ್ನ ಪಟ್ಟವಣೆಯ ಮೇಗಣ ದುಗುಲದ ಪಸೆಯೊಳ್ ಗುಣಾರ್ಣ ವನನಾ ದ್ರುಪದಜೆಯನೊಡನೆ ಕುಳ್ಳಿರಿಸಿ ಹಿತ ಪುರೋಹಿತ ಪ್ರಾಜ್ಯಾಜ್ಯಾಹುತಿ ಹುತ ಹುತವಹ ಸಮಕ್ಷದೊಳ್ ಕೆಯ್ನೀರೆಱೆದು ಪಾಣಿಗ್ರಹಂ ಗೆಯ್ಸೆ—

ಚಂ|| ಇಡಿದಿರೆ ಮುಂಜಿನೊಳ್ ತುಱುಗಿ ತೆಂಕಣ ಗಾಳಿಯೊಳಾದ ಸೋಂಕಿನೊಳ್ |
ನಡುಗುವಶೋಕ ವಲ್ಲರಿಯ ಪಲ್ಲವದೊಳ್ ನವ ಚೂತ ಪಲ್ಲವಂ ||
ತೊಡರ್ದವೊಲಾಗೆ ಘರ್ಮಜಲದಿಂ ನಡುಪಾಕೆಯ ಪಾಣಿಪಲ್ಲವಂ |
ಬಿಡಿದು ಬೆಡಂಗನಾಳ್ದುದು ಗುಣಾರ್ಣವನೊಪ್ಪುವ ಪಾಣಿಪಲ್ಲವಂ || ೭೫ ||

ವ|| ಅಂತೊರ್ವರೊರ್ವರ ಕಿಱು ಕುಣಿಕೆಗಳಂ ಪಿಡಿದು ರತಿಯುಂ ಕಾಮ ದೇವನುಂ ಬರ್ಪಂತೆ ಬೇಳ್ವೆಯ ಕೊಂಡದ ಮೊದಲ್ಗೆ ವಂದು ಕನಕ ಗಿರಿಯಂ ಬಲ ಗೊಳ್ವ [1]ಪತಂಗ[ದಂಪತಿ]ಯಂತಾ ದಂಪತಿಗಳ್ ಸಪ್ತಾರ್ಚಿಯಂ ಮೂಱು ಸೂೞ್ ಬಲವಂದು ನಿಂದಿಂಬೞಿಯಮಾಕೆ ಪುರೋಹಿತನ ಪೇೞ್ದೋಜೆಯೊಳ್ ಲಾಜೆಯ ನಗ್ನಿಕುಂಡದೊಳ್ ಸುರಿದು—

ಚಂ|| ಅದಱ ಪೊದಳ್ದು ನೀಳ್ದ ಪೊಗೆಯಂ ಲುಳಿತಾಳ[2]ಕೆ ತನ್ನ ವಕ್ತ್ರ ಪ |
ದ್ಮದಿನೊಸೆದಾಂತೊಡಾಕೆಯ ಕಪೋಲದೊಳಾ [3][ನ]ವ ಧೂಮ ಲೇಖೆ ಬೆ ||
ಳ್ಪಿದಿರ್ಗೊಳೆ ಗಾಡಿವೆತ್ತಡರ್ದು ಕತ್ತುರಿಯೊಳ್ ಮದವಟ್ಟೆಯಂ ವಿಳಾ |
ಸದೆ ತೆಗೆದಂತೆ ಕಣ್ಗೆಸೆದು ತೋಱಿದುದಾ ಕದನತ್ರಿಣೇತ್ರನಾ ||೭೬ ||

ವ|| ಅಂತು ಸೊಗಯಿಸೆ ಪಾಡುವ ಮಂಗಳ ರವಂಗಳುಮೋದುವ ಋಚೆಗಳುಂ ಪರಸುವ ಪರಕೆಗಳುಮೆಸೆಯೆ ಪಸೆಯೊಳಿರ್ದು—

ಚಂ|| ಪರಿಜೆಯನಂಟು(?) [4]ಕೆನ್ನೆಗಳನೊಯ್ಯನೆ ನೀವುವ [5]ಚಿನ್ನ ಪೂವನೋ |
ಸರಿಸುವ ಹಾರಮಂ ಪಿಡಿದು ನೋಡುವ ಕಟ್ಟಿದ ನೂಲ ತೊಂಗಲಂ ||
ತಿರಿಪುವ ಕೆಯ್ತದೊಂದು ನೆವದಿಂ ಲಲಿತಾಂಗಿಯ ಶಂಕೆಯಂ ಭಯಂ
ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ ||೭೭||

ವ|| ಎಂದು ಕೆಲದೊಳಿರ್ದ ದಂಡುರುಂಬೆಗಳ್ ಬುದ್ಧಿವೇೞೆ[3]—

---

[1]. ಪದಂಬರೆಯಂತಾ (ಕ.ಖ.ಗ.ಘ.), ಪತಂಗನ ಪಿಂಬರಿವಂತಾ (ಘ§.); [2]. ಕಿ (ಸ); [3]. ಛ(ಸ); [4]. ಚೀಲೆ(ಘ.); [5]. ಚಿ(ಘ.).

ಉ॥ ಕಾಂತೆ ಪೊದಳ್ದ ನಾಣ ಭರದಿಂದಧರೀಕೃತ ಚಂದ್ರಬಿಂಬ ಸ।
ತ್ಕಾಂತಿಯನಾನನಾಂಬುಜಮನೊಯ್ಯನೆ ಬಾಗಿರೆ ಕಾದಲಂಗೆ ಸ॥
ಯ್ಯಂತಿರು ನಾಣ್ಚದೆಂದಣುಗೆಯರ್ ಪಿಡಿದಟ್ಟುಜಿಹೊ[1][ಳೆ]ತ್ತಿ ಬುದ್ಧಿ ವೇ।
ಟ್ದಂತೆ ಕದಂಪಿನೊಳ್ ಪೊಳೆದುವಾಕೆಯ ಹಾರ ಮರೀಚಿ ಮಾಲೆಗಳ್ ॥೭೮॥

ವ॥ ಅಂತೊಪ್ಪುವ ವಿವಾಹ ಮಂಗಳದೊಸಗೆಯೊಳ್ ಮಂಗಳ ಪಾಠಕರೆಟ್ದು ನಿಂದಿರ್ದು —

ಶಾ॥ ಇಂದ್ರಾನೋಕಹವೊಪ್ಪುವಿಂದ್ರ ತುರಗಂ ಸಂದಿಂದ್ರ ಗೇಹಂ ಪೊದ।
ಳ್ದಿಂದ್ರಾನೇಕಪವೊಪ್ಪುವಿಂದ್ರನಖಿಳೇಂದ್ರೈಶ್ವರ್ಯಮಿಂದ್ರಾಣಿ ಸಂ॥
ದಿಂದ್ರಾನರ್ಘ್ಯ ವಿಭೂಷಣಂಗಳರಿ ಭೂಪಾಳಾವಳೀ ದುಸ್ತ್ರಮ।
ಶ್ಚಂದ್ರಂಗೀಗರಿಗಂಗೆ ಮಂಗಳಮಹಾ ಶ್ರೀಯಂ ಜಯಶ್ರೀಯುಮಂ ॥೭೯॥

ವ॥ ಎಂದು ಮಂಗಳ ವೃತ್ತಂಗಳನೋದೆ ಕಿಱಿದುಂಬೇಗಮಿರ್ದೆತ್ತಿದ ಬೋನದೊಳ್ ಕಲ್ಯಾಣಾಮೃತಾಹಾರಮನಾರೋಗಿಸಿ ಬಟಿಯಂ ಯಕ್ಷಕರ್ದಮದ ಕೆಯ್ಗಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು—

ಕಂ॥ ಕವಿ ಗಮಕಿ ವಾದಿ ವಾಗ್ಮಿ।
ಪ್ರವರರ ಪಂಡಿತರ ನೆಗಟ್ದ ಮಾತಱಿವರ ಸ॥
ಬ್ಬವದವರೊಡನಂತೊಸೆದ।
ನ್ನವಾಸದೋಲಗದೊಳಿರ್ದನಾಗಳ್ ಹರಿಗಂ ॥೮೦॥

ವ॥ ಆ ಪ್ರಸ್ತಾವದೊಳ್—

ಉ॥ ಬೇಸಱಿ ಲೋಕಮಂ ತಗುಳ್ದು ಸುಟ್ಟಟಲಿಂದೆ ಖರಾಂಶು ನಾರಕಾ।
ವಾಸದೊಳಾಟ್ವವೋಲಪರ ವಾರ್ಧಿಯೊಳಾಟ್ವುದುಮಿತ್ತ ವಂದ ಸಂ॥
ಧ್ಯಾ ಸಮಯಾತ್ತ ರಕ್ತ ರುಚಿ ಪಿಂಗೆ ಬಟಿಕ್ಕುದಯಾದ್ರಿಯೊಳ್ ಪದಂ।
ಗಾಸಿದ ಪೊನ್ನ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶು ಮಂಡಲಂ ॥೮೧॥

ವ॥ ಆಗಳ್ ದ್ರುಪದಂ ನಿಜಾಂತಃಪುರ ಪರಿವಾರಂ ಬೆರಸುದಾರಮಹೇಶ್ವರನಲ್ಲಿಗೋಲಗಕ್ಕೆ ವಂದು ನೃತ್ಯ ವಾದ್ಯ ಗೀತಾತೋದ್ಯಂಗಳೊಳ್ ಕಿಱಿದುಂ ಬೇಗಮಿರ್ದೋಲಗಮುಮಂ ಪರೆಯಲ್ವೇಟ್ದು ಮತ್ತಿನ ನಾಲ್ವರ್ಗಂ ಕೊಂತಿಗಂ ಬೇಱೆ ವೇಱೆ ಮಾಡಂಗಳಂ ಬೀಡುವೇಟ್ದು ಗುಣಾರ್ಣವನಂ ಸೆಜ್ಜೆಗೆ ಬಿಜಯಂಗೆಯ್ಮೆನೆ ಕಾಮಂ ಕಳನೇಱುವಂತೆ ಸೆಜ್ಜೆಯನೇಱಿ ಸೆಡೆದಿರ್ದ ನಲ್ಲಳಂ ನೋಡಿ—

1. ಳೊ (ಸ).

ಉ॥ ನೋಟದೊಳ್[1]ಟ್ಕಜಂಬಡೆದು ಮೆಲ್ಲುಡಿಯೊಳ್ ಬಗೆವೊಕ್ಕು ಜಾಣೊಳ।
[2]ಳ್ಳಾಟಮನೆಲ್ಲಮಂ ಕಿಡಿಸಿ ಸೋಂಕಿನೊಳೊಯ್ಯನೆ ಮೆಯ್ವೊಣರ್ಚೆ ಬಾ॥
ಯ್ಗೂಟದೊಳಟ್ಕಱಂ ಪಡೆದು ಕೂಟದೊಳುಣ್ಮಿದ ಬೆಚ್ಚ ಕಟ್ಕೆಯೊಳ್।
ಕೂಟ ಸುಖಂಗಳಂ ಪಡೆದನೇಂ ಚದುರಂ ಗಳಬದ್ದೆದಲ್ಲಟಿಂ ॥೮೨॥

ಬೇಡಿಸುವಪ್ಪುಗ[3]ಳ್ಗೆರೆವ ಲಲ್ಲೆಯ ಮೆಲ್ನುಡಿಗಳ್ಗೆ ಕೂಡೆ ನಾ।
[4]ಣೂಡಿದ ಕೆಂದುಗಳ್ಗೆ ಬಗೆಗೊಂಡಿನಿಸಂ ತಲೆದೂಗುವಂತೆವೋಲ್॥
ನಾಡೆ ಪೊದಳ್ದು ನೀಳ್ದವರ ಸುಯ್ಗಳ ಗಾಳಿಯೊಳೊಯ್ಯನೊಯ್ಯನ।
ಳ್ಳಾಡುವುದಾಯ್ತು ತತ್ಸುರತ ಮಂದಿರದುಜ್ಜ್ವಳ ದೀಪಿಕಾಂಕುರಂ ॥೮೩॥

ವ॥ ಅಂತಾ ಯಿರುಳ ನಾಲ್ಕು ಜಾವಮುಂ ಕಾಮನ ಜಾಗರದಂತವರ್ಗೆ ಕೆಂದಿನೊಳೆ ಬೆಳಗಾಗೆ—

ಚಂ॥ ನಿನಗಿನಿಸಪ್ಪೊಡಂ ಮನದೊ[5][ಳೋ]ವದ ಕಟ್ಟಲೆಯೆಂಬ ಪಾಪಕ
ರ್ಮನ ಮಱುಗಳ್ ಕರಂ ಪಲವುಮಂ [6][ಸೆಱೆ]ಗೆಯ್ದೆ[7][ವಿ]ವೆಂದು ತಮ್ಮನ॥
ಣ್ಪಿನೊಳವನೊಪ್ಪಿಪಂತೆ ಮುಗುಳೊಳ್ ಮಱುಸುಂಡಿದ ತುಂಬಿ ಪಾಱೆ ಕೋ
ಕನದ ಕುಲಂಗಳುಳ್ಳಲರ್ದುವೆಂಬಿನಮುಂಡೊಗೆದಂ ದಿವಾಕರಂ ॥೮೪॥

ವ॥ ಅಂತು ಮಾರ್ತಾಂಡನುಂ ಪ್ರಚಂಡ ಮಾರ್ತಾಂಡನುಮುದಿತೋದಿತರಾಗೆ—

ಮ॥[8][ಕ]ಚಭಾರಾಳಸಗಾಮಿನೀ ಪರಿವೃತಂ ಗಂಗಾತರಂಗೋಪಮಾ।
ನ ಚಳಚ್ಚಾಮರ ವಾತ ಪೀತ ನಿಜ ಘರ್ಮಾಂಭಃಕಣಂ ದ್ರೌಪದೀ॥
ಕುಚಕುಂಭಾರ್ಪಿತ ಕುಂಕುಮ ದ್ರವ ವಿಲಿಪ್ತೋರಸ್ಥಳಂ ದಾಂಟಿ ಕೀ।
ರ್ತಿ ಚತುರ್ವಾರ್ಧಿಯನಿರ್ದನಂದು ಸುಖದಿಂ ವಿದ್ವಿಷ್ಟ ವಿದ್ರಾವಣಂ ॥೮೫॥

ಇದು ವಿವಿಧ ವಿಬುಧ ಜನ ವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ದ್ರೌಪದೀ ಕಲ್ಯಾಣ ವರ್ಣನಂ
ತೃತೀಯಾಶ್ವಾಸಂ

1. ಟ್ಕಱಂ (ಕ. ಖ. ಗ. ), ಕ್ಕಱಂ (ಘ); 2. ಲಾಟವುದೆ (ಕ.), ಳ್ಳಾಟದಮೆ (ಗ.), ಲ್ಲಾಟಮುಮೆ (ಘ.); 3 ಳ್ದೊರೆಯ (ಕ.ಖ.); 4 .ನೂ (ಖ.), ಣಾ (ಗ.ಘ.); 5. ಳೇ (ಸ.); 6. ಪೆಱ (ಸ.); 7.ನಿ (ಸ.); 8. ಕು (ಸ.).

# ಚತುರ್ಥಾಶ್ವಾಸಂ

ಕಂ॥ ಶ್ರೀ ರಮಣಿಯಂ ದ್ವಿಷದ್ಬಳ।
ಪಾರಾವಾರದೊಳುದಗ್ರ ಭುಜ ವಿಜಯ ಮಹಾ॥
ಮೇರು [1][ವಿ]ನೆ ಕಡೆದು ಪಡೆದಳ।
ವಾರುಮನಿಱಿಸಿದುದುದಾತ್ತನಾರಾಯಣನಾ ॥೧॥

ವ॥ ಅಂತು ದ್ರುಪದನ ಪೊೞಲೊಳ್ ಪಾಂಡವರ್ ಚಾಗಕ್ಕೆ ಬೞತುಂ ಭೋಗಕ್ಕೆ ಪೊೞ್ತುಂ ನೆಱೆಯದೆನಿಸಿ ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರ್ಪನ್ನೆಗಮಿತ್ತಲ್—

ಮ॥ ಚರರಾಗೆಯ್ದಿದರೆಯ್ದಿ ಹಸ್ತಿನಪುರಕ್ಕಾ ಪಾಂಡವರ್ ತಮ್ಮುತ।
ಯ್ವರುಮಿರ್ದರ್ ದ್ರುಪದಾಧಿರಾಜ ಪುರದೊಳ್ ಕೆಯ್ಕೊಂಡು ಪಾಂಚಾಳಿಯಂ॥
ಧುರದೊಳ್ ಕರ್ಣನನಾಂತು ಗೆಲ್ದವನವಂ ಸಂದರ್ಜುನಂ ತಳ್ತು ಸಂ
ಗರದೊಳ್ ಶಲ್ಯನನಿಕ್ಕಿ [2]ಗೆಲ್ದದಟನಾ ಭೀಮಂ ಗಡಂ ಕಾಣಿರೇ ॥೨॥

ವ॥ ಎಂಬ ಮಾತಂ ಧೃತರಾಷ್ಟ್ರ ದುರ್ಯೋಧನಾದಿಗಳ್ ಕೇಳ್ದು ಬಿಲ್ಲುಂ ಬೆಱಗುಮಾಗಿ—

ಕಂ॥ ಕಾಯ್ವೞಲುಱೆ[3] ಜತುಗೃಹದೊಳ।
ಗಯ್ವರುಮಂ ಮಂತ್ರ ಬಲದೆ ಸುಟ್ಟೊಡಮುವರಂ॥
ದೆಯ್ವ ಬಲಮೊಂದೆ ಕಾದುದು।
ದೆಯ್ವಮುನಾರಯ್ಯ ಮಿಱಿ ಬಾೞಲ್ ನೆಱೆವರ್ ॥೩॥

ವ॥ ಎಂಬುದುಂ ಭೀಷ್ಮ ದ್ರೋಣಾದಿಗಳ್ ನಿಶ್ಚಿತ ಮಂತ್ರರಾಗಿ ವಿದುರನಂ ಕರೆದಾಳೋಚಿಸಿ ಪೃಥಾತನೂಜರಂ ನಿನ್ನ ಬಲ್ಲ ಮಾೞ್ಕೆಯಿಂ ನುಡಿದೊಡಂಗೊಂಡು ಬರ್ಪುದೆಂದು ಪೇೞ್ದಿಟ್ಟುವುದುಮಾತನಂತೆ ಗೆಯ್ವೆನೆಂದು ರಥಾರೂಢನಾಗಿ ಪಾಂಚಾಳರಾಜ ಪುರಕ್ಕೆ ವಂದು ಪಾಂಡುಪುತ್ರರಂ ಕಂಡು—

ಚಂ॥ ಅದು ಪಿರಿದುಂ ಪ್ರಮಾದಮುದುವುಂ ಕುರುರಾಜನಿನಾಯ್ತು ಪೋಯ್ತು ಸಂ।
ದುದು ಮಱೆಯಲ್ಕೆ [3]ವೇೞ್ಪುದದನಾಳ್ವುದು ತಪ್ಪದೆ ಪಾಂಡುರಾಜನಾ॥

---

[1]. ವ(ಸ.); [2]. ದೊಂದದಟವಂ (ಕ.), ದೊಂದಧಟದಂ (ಖ.), ದಂದದಟನಂ (ಗ.); [3]. ತತ್ಪುರವು (ಕ. ಘ.).

[1][ಳ್ದ]ದನೆಳೆಯಂ ಮನಂ ಬಸದೆ ಬರ್ಪುದು ನೀಮೆನೆ ಪೋಪ ಕಜ್ಜಮಂ।
ವಿದುರನೊಳಯ್ವರುಂ ಸಮೆದು ಪೇೞ್ವುದುಮಾ ದ್ರುಪದಂಗೆ ರಾಜದಿಂ ॥ ೪ ॥

ವ॥ ಆತನ ಬೞಿವೞಿಗೊಟ್ಟ ಮದಕರಿ ಕರೇಣು ಜಾತ್ಯಶ್ವ [2]ಶಶಿ ತಾರ ಹಾರ ವಸ್ತುಗಳಂ ಕೆಯ್ಕೊಂಡು ದ್ರುಪದಜೆಯನೊಡಗೊಂಡು ದ್ರುಪದನನಿರವೇೞ್ದು ಕತಿಪಯ ಪ್ರಯಾಣಂಗಳಿಂ ಮದಗಜಪುರಮನೆಯ್ದೆ ವಂದಾಗಳ್—

ಚಂ॥ ಘನ ಪಥಮಂ ಪಳಂಚಲೆವ ಸೌಧ ಚಯಂಗಳಿನಾಡುತಿರ್ಪ ಕೇ।
ತನ ತತಿಯಿಂ ಕರೀಂದ್ರ ಗಳಗರ್ಜನೆಯಿಂ ಪಟಹ ಪ್ರಣಾದಮಂ॥
ಘನ [3]ರವಮೆಂದೆ ನರ್ತಿಸುವ ಕೇಕಿಗಳಿಂ ಕಡು ರಯ್ಯಮಪ್ಪ ಹ।
ಸ್ತಿನ ಪುರಮಂ ಜಿತೇಂದ್ರ ಪುರಮಂ ಪರಮೇಶ್ವರರಾಗಳೆಯ್ದಿದರ್ ॥ ೫ ॥

ವ॥ ಆಗಳಾ ಪೊೞಲ ಬೀದಿಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಂ ತಳಿಯಿಸಿ ಗುಡಿಯಂ ತೋರಣಂಗಳುಮಂ ತುಱುಗಲುಂ ಬಂಬಲುಮಾಗೆ ಕಟ್ಟಿಸಿ ಧೃತರಾಷ್ಟ್ರಂ ದುರ್ಯೋಧನ ಕರ್ಣ ಶಲ್ಯ ಶಕುನಿ ನದೀತನೂಜ ಭಾರದ್ವಾಜ ಕೃಪಾದಿಗಳ್ವೆರಸಿದಿರ್ವಂದು ಯಥೋಚಿತ ಪ್ರತಿಪತ್ತಿಗಳಿಂದಯ್ವರುಮಂ ನಿಬಿಡಾಲಿಂಗನಂಗೆಯ್ದು ಮುಂದಿಟ್ಟೊಡಗೊಂಡು ವಂದು ಪೊೞಲಂ ಪುಗಿಸಿ ಮುನ್ನಮೆ ಸಮೆದ ಬೀಡುಗಳೊಳ್ ಬೀಡಂ ಬಿಡಿಸಿ ಸೂೞ್ಸೂೞೊಳೆ ಬಿರ್ದನಿಕ್ಕಿ ವಿವಿಧ ವಿನೋದಂಗಳಂ ತೋಱೆ ಕೆಲವು ದಿವಸಮಿರ್ದು ದ್ರೋಣ ಭೀಷ್ಮ ಕೃಪ ವಿದುರರ್ಕಳ್ ತಮ್ಮೊಳಾಲೋಚಿಸಿ ಯೆನ್ನ ನಡಪಿದುದರ್ಕಂ ಕೂರ್ತುದರ್ಕಂ ಪಾಂಡುಪುತ್ರರ್ಗೆ ನೆಲನಂ ಪಚ್ಚುಕೊಟ್ಟು ಪಟ್ಟಮಂ ಕಟ್ಟುವೆನೆನೆ ದುರ್ಯೋಧನನೇಗೆಯ್ದು ಮೊಡಂಬಡದಿರೆ ಭೀಷ್ಮರ್ ಮುನಿದು—

ಚಂ॥ ಒಡೆಯ[4][ರ]ದೇವರೆಂದು ನಿನಗಿತ್ತೊಡೆ ಪಟ್ಟಮನುರ್ಕಿದಪ್ಪೆ ಪೇೞ್।
ಪೊಡವಿಗಧೀಶರಂತವರ್ಗಳಯ್ವರುಮಂ ಕ್ರಮದಿಂದೆ ಪಟ್ಟಮಂ॥
ತಡೆಯದೆ ಕಟ್ಟಿ ಭೂತಳನಾಳಿಸದಿರ್ದೊಡದರ್ಕೆ ಸೊರ್ಕಿ ನೀಂ।
ನುಡಿಯದಿರಣ್ಣ ನಿನ್ನ ನುಡಿಗಾಂ ತಡೆದಿರ್ಪೆನೆ ಪೇೞ್ ಸುಯೋಧನಾ ॥ ೬ ॥

[5]ಕ್ರಮಮಱಿದೆನ್ನ ಕೊಟ್ಟುದನೆ ಕೊಂಡು ಮನೋಮುದದಿಂದೆ ಬಾೞ್ವುದಂ।
ತವರಿವರೆಲ್ಲರುಂ ಸಮನದಲ್ಲದೆ ಮಾರ್ಮಲೆದುರ್ಕಿ [6]ಭೀಮನೊಳ್॥

1. ವು (ಸ.); 2. ಶಶಿತೋ (ಖ.), ಸಸಿತೋ (ಗ. ಘ.); 3. ರುತಿಗೆತ್ತು (ಕ.); 4. ರೆ (ಸ.); 5. ಕವ (ಕ.); 6. ಸೊರ್ಕ್ಕಿ ಪೂ।ಣ್ದವರೊಳೆ (ಕ.).

ಸಮರದೆ ಗರ್ವದಿಂ ಪೊಣರಲಾರ್ಪಿರೆ ಗಾವಿಲರಿನ್ನುಮೆಲ್ಲರಂ।
ಯಮಸುತನುಂ ಸುರೇಂದ್ರ ಸುತನುಂ ಪೊಸದೀಗಳೆ ಮುಕ್ಕಿ ತೋಱರೇ
॥ ೭ ॥

ವ॥ ಆದಲ್ಲದೆಯುಂ ಪಾಂಡುಪುತ್ರರಪ್ಪೊಡೆ ಪಾಂಡುರಾಜಂಗೆ ಬೆಸಕೆಯ್ಯುದುದನೆನಗೆ ಬೆಸಕೆಯ್ವರೆನ್ನೆಂದುದಂ ಮಿಱುವರಲ್ಲರಾನವರ್ಗೆ ಪಟ್ಟಮುಂ ಕಟ್ಟಿ ನೆಲನಂ ಪಚ್ಚುಕೊಡುವಾಗಳಡ್ಡಂ ಬರ್ಪ ಗಂಡರಂ ನೋೞ್ಪೆನೆಂದು ಭೀಷ್ಮರ್ ಬಗ್ಗಿಸಿದೊಡೆ ದುರ್ಯೋಧನನತಿ ಸಂಭ್ರಮಾಕುಳಿತನಾಗಿ ನೀಮೆಂದುದನೆಂದು ಬಾೞ್ವೆನೆಂದೊಡಪ್ಪುದೆಂದು—

ಮ॥ ಧರಣೀ ನಾರಿಗೆ ಪಾಂಡುವಿಂ ಬೞಿಯಮಿಲ್ಲಾರುಂ ಪೆಱರ್ ಗಂಡರಂ।
ತಿರಲೇವಂ ಬಡೆದಿರ್ದೊಡಟ್ಟು ಕಿಡುಗುಂ ಸಪ್ತಾಂಗಮಾ ರಾಜಕ॥
ಕ್ಕರಸಂ ಧರ್ಮಜನಕ್ಕುಮೆಂದು ನಯದಿಂ ನಿಶ್ಚೈಸಿ ಕಲ್ಯಾಣ ಕಾ।
ರ್ಯ ರತರ್ ಕಟ್ಟಿದರಾ ಯುಧಿಷ್ಠಿರ ನೃಪಂಗುತ್ಸಾಹದಿಂ ಪಟ್ಟಮಂ ॥ ೮ ॥

ವ॥ ಕಟ್ಟಿ ಸೇತುಬಂಧಮುಂ ತಾಗೆ ಗಂಗಾ ನದಿಯ ತೆಂಕಣ ಪಡುವಣ ನೆಲನಂ ನೀಮಾಳ್ವುದು ಮೂಡಣ ಬಡಗಣ ನೆಲನಂ ದುರ್ಯೋಧನನಾಳ್ವುದೆಂದು ಧೃತರಾಷ್ಟ್ರಂ ಪೂರ್ವ ಸ್ಥಿತಿಯೊಳ್ ಪಚ್ಚುಕೊಟ್ಟು ದುರ್ಯೋಧನನಪ್ಪೊಡೆ ಪೊಲ್ಲ ಮಾನಸಂ ನೀಮುಂ ತಾಮುಮೊಂದೆಡೆಯೊಳಿರೆ ಕಿಸುರುಂ ಕಲಹಮುಮೆಂದುಂ ಕುಂದದದು ಕಾಣದಿಂದಿಲ್ಲಿಗಱುವತ್ತು ಯೋಜನದೊಳಿಂದ್ರಪ್ರಸ್ಥಮೆಂಬುದು ಪೊೞ ಲಲ್ಲಿಗೆ ಪೋಗಿ ಸುಖದಿಂ ರಾಜ್ಯಂ ಗೆಯ್ಯುತ್ತಿರಿಮೆಂಬುದುಮಂತೆ ಗೆಯ್ವೆಮೆಂದು ಸಮಸ್ತ ಪರಿವಾರ ಪರಿವೃತರಾಗಿ—

ಮ॥ ಒಡವರ್ಪುಗ್ರ ಮದೇಭ ವಾಜಿ ಗಣಿಕಾನರ್ಘ್ಯಾದಿ ರತ್ನಂಗಳೊಳ್।
ತೊಡರ್ದೊಪ್ಪುತ್ತಿರೆ ಲಕ್ಷ್ಮಿ ದಂತಿ ತುರಗಂ ಶ್ರೀ ದಿವ್ಯಕಾಂತಾಜನಂ॥
ತೊಡೆವೆಂಬೊಂದುಮನಾ ಸುರಾಸುರರಿನಾ ಗೋವಿಂದನಿಂ ಮುನ್ನೆ ಕೋ।
ಳ್ಪಡೆದಂಭೋನಿಧಿಯಂತೆ ಬಂದು ನೆಗೞ್ದಿಂದ್ರಪ್ರಸ್ಥಮಂ ಧರ್ಮಜಂ॥ ೯ ॥

ಮಟ್ಟ ರಗಳೆ॥ ಎಯ್ದುವುದುಂ ತತ್ಪುರದುಪವನಂಗಳವಿರಳ ಮಳಯಾನಿಳ
ಕಂಪಿತಂಗ।
ಳವಿರಳ ಕುಸುಮಾವಳಿ ಕಂಪು[1]ವೇೞೆ ಸೊಗಯಿಪ ಕಿಱು ಮಿಡಿಗಳೊಳೊಪ್ಪಿ
ತೋಱೆ।
ಲವಣಾಬ್ಧಿಯೆ ಬಳಸಿದುದೆನಿಸುವಗೞ ಬಳಸೆಸೆದಿರೆ ಕೋಂಟೆಯ ಚೆಲ್ವು
ಪೊಗೞ।

1. ವೀ (ಕ.).

ಲರಿದೆನಿಸಿರೆ ನೆಗೆದುದು ನಭಮನೆಯ್ದೆ ಮಿಳಿರ್ವ ಪತಾಕಾವಳಿ ದಿವಮನೆಯ್ದೆ।
ಬಳಸಿದ ಕೆಂಬೊನ್ನ ಮದಿಲ್ಗಳೊಳಗೆ ಮಣಿಮಯ ಭವನಾವಳಿ ತೊಳಗಿ ಬೆಳಗೆ।
ರಸ ರಸದ ಬಾವಿ ಮನೆ ಮನೆಗೆ ಬೇಱೆ ಕಿಸುಗಲ್ಗಳ ರಜದ ಕಣಿವೆರಸು ತೋಱೆ।
ಸುರಕು[1]ಜದ ನೆಟಿಲೊಳಂಗಣದೊಳೇನು[2]ಮಲಪಿಲ್ಲದೆ ಕಟ್ಟೆರೆ ಕಾಮಧೇನು।
ಪರದರ ಪಾರ್ವರ ಸೂಳೆಯರ ಮನೆಗಳವು ಧನದನ ಮನೆಯುಮನೇೞಿಪ ಮನೆಗಳವು।
ಪೊಟಿಲ ಬೆಡಂಗಂ ಮೆಚ್ಚಿ ಮೆಚ್ಚಿ ನೋಡಿ ದಿವಿಜೇಂದ್ರ ವಿಳಾಸದೊಳಿಂತು ಕೂಡಿ।
ಪರಿತಂದಾಗಳ್ ಸಿರಿದೊಸಗೆವೆರಸಿ ಪುರಕಾಂತೆಯರಾದರದಿಂದೆ ಪರಸಿ।
ಸೂಸುವ ಶೇಷಾಕ್ಷತಮುಂ ಸಮಂತು ಪಿರಿದುಂ ಮನ ಸಂತಸದಿಂದ ಮಾಂತು।
ಕರುಮಾಡಮನಾದರದಿಂದಮೇಱೆ ಕೆಲದೊಳ್ ಮಾಡಂಗಳನಱಿದು ತೋಱೆ। (?)
ಮಣಿ ಕನಕ ರಜತ ವಸ್ತುಗಳನಿತ್ತು ಬೇಡಿದ ನಾಡುಗಳನವಯವ[3]ದಿಂದ ಮಿತ್ತು।
ಕರಿ ತುರಗ ಬಲಂಗಳ್ [4]ಪೆರ್ಚುವಂತು ಮಲೆಯುಂ ಮಂಡಲಮುಂ ಬೆರ್ಚುವಂತು।
ಕೊಂಡಾಡುವ ನಾಲ್ವರುಮನುಜರೊಳಗೆ ನೆಗಟ್ದರಿಗನ ತೇಜಮೆ ತೊಳಗಿ ಬೆಳಗೆ।
ನೆಲನಂ ಪ್ರತಿಪಾಲಿಸಿ ಧರ್ಮಸೂನು ಸುಖಮಿರ್ದಂ ರಿಪು ಬಳ ತಿಮಿರ ಭಾನು ॥೧೦॥

ವ॥ ಅಂತಜಾತಶತ್ರು ಶತ್ರುಪಕ್ಷ ಕ್ಷಯಕರ ಕರವಾಳ ದಂಷ್ಟ್ರಾಭೀಳ ಭುಜಂಗಮೂರ್ತಿ ವಿಶ್ವ ವಿಶ್ವಂಭರಾ[5]ಧಾರಮಪ್ಪರಿಕೇಸರಿಯ ತೋಳ್ವಲದೊಳ್ ರಾಜ್ಯಂ ಗೆಯ್ಯುತಿರ್ಪನ್ನೆಗಂ ವಿಕ್ರಾಂತತುಂಗನೊಂದೆಡೆಯೊಳಿರ್ಪಿರವಿಂಗುಮ್ಮಳಿಸಿ ದಿಗಂಗನಾ ಮುಖಾವಲೋಕನಂ ಗೆಯ್ಯಲ್ ಬಗೆದು—

[1]. ಟ (ಕ.) ; [2]. ಮಣ್ಪೆ (ಕ.), ಮಂಪಿ (ಖ. ಗ.) ; [3]. ದಿತ್ತು (ಕ.) ; [4].ಬೆ (ಕ. ಗ.) : [5]. ಭಾರನಪ್ಪ (ಗ. ಘ.).

ಮ|| ಸ್ರ|| ಸೆಣಸುಳ್ಳದ್ವಪುತ್ತರಂ ತಳ್ತಿಱಿಯದೆ ಚತುರಂಭೋಧಿ ಪರ್ಯಂತಮಂ ಧಾ|
ರಿಣಿಯಂ ತಾಂ ಪೋಗಿ ಬಾಯ್ಕೇಳಿಸದೆ ಮುನಿಜನಕ್ಕಿ[1]ಪ್ಪಿ ವಿಘ್ನಂ ಗಳಂ ದಾ||
ರುಣ ದೈತ್ಯರ್ ಮಾಡೆ ನೀಡಿಲ್ಲದೆ ಸಲೆ ಚಲದಾಟಂದು ಕೊಂದಿಕ್ಕದೊರ್ವಂ
ಗುಣಮುಂಟೆಂದುಂಡು ಪಟ್ಟೆರ್ಪನನಣಮೆ ನಿರುದ್ಯೋಗಿಯಂ ಭೂಪ ನೆಂಬರ್ ||೧೧||

ವ|| ಎಂದು ವಿಜಿಗೀಷು ವೃತ್ತೋದ್ಯುಕ್ತನಾಗಲ್ ಬಗೆದು—

ಚಂ|| ಅಱಿಪಿದೊಡೆನ್ನ ಪೋಗನಿನಿಯಳ್ಗೆ ಮನಂ ಮಱುಕಕ್ಕೆ ನೀಳ್ದ ಕ|
ಣ್ಣೊಱೆದುಗುವಶ್ರುವಾರಿಗೆ ತೊದಳ್ನುಡಿ ಲಲ್ಲೆಗೆ ಪಕ್ಕುಗೊಟ್ಟು ಕಾ||
ಲ್ಗೆಱಗಿರೆ ಪೋಗು [2][ಕೆ]ಟ್ಟಪುದು ಮೋಹಮಯಂ ನಿಗಳಂ ಕಳತ್ರಮೆಂ|
ದಱಿಪದೆ ನಟ್ಟಿರುಳ್ ಮಱೆದು ಸಾರ್ಚಿದ ನಲ್ಲಳ ತಳ್ತ ತೋಳ್ಗಳಂ ||೧೨||

ವ|| ಮೆಲ್ಲಮೆಲ್ಲನೆ ಪತ್ತುವಿಡಿಸಿ ತನ್ನ ತೊಟ್ಟ ದಿವ್ಯಾಭರಣಂಗಳೆಲ್ಲಮಂ ಕಳೆದು ದಿವ್ಯ ಶರಧಿಗಳಂ ಬಿಗಿದುಕೊಂಡು ದಿವ್ಯಚಾಪಮಂ ಪಿಡಿದು ಪ್ರಥಮ ಚಳಿತ ದಕ್ಷಿಣ ಚರಣನಾಗಿ ನಿಜ ನಿವಾಸದಿಂ ಪೊಱಮಟ್ಟು ಖಾಂಡವ ಪ್ರಸ್ಥದಿಂ ದುತ್ತರಾಭಿಮುಖನಾಗಿ ಕಾಮ್ಯಕ ವನದೊಳಗನೆ ನೀಲಪರ್ವತದ ಮೇಗನೆ ಪೋಗಿ—

ಚಂ|| ಸಗರರ ಮೇಲೆ ಗಂಗೆಯುನನಾಕುಲದಿಂ ತರಲಾ ಭಗೀರಥಂ|
ನೆಗಱೆ ತಪೋ ನಿಯೋಗದೊಳವಂಗಮರಾಪಗೆ ಮೆಚ್ಚಿ ಪಾಯ್ವುದುಂ||
ಗಗನದಿನಂಧಕ ದ್ವಿಷ ಜಟಾಟವಿಯೊಳ್ ಬಱಿಕಾದ ಶೈಲದೊಳ್|
ಸೊಗಯಿಸೆ ಪಾಯ್ದುದಿಂತಿದುವೆ ಬಂಧುರ ಕೂಟ ಕುಳಂ ಹಿಮಾಚಳಂ ||೧೩||

ಮ|| ಸ್ರ|| ವಿಲಸತ್ಕಲ್ಲೋಲ ನಾದಂ ನೆಗಳ್ದಿರೆ ನಿಜ ಕೂಟಾಗ್ರದೊಳ್ ಪಾಯ್ವ ಗಂಗಾ|
ಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ ಚಮರೀ ಲೋಲ ಲಾಂಗೂಲ ಮಾಲಾ||
ವಲಿ ವಿಕ್ಷೇಪಂಗಳಿಂ ತಚ್ಚಮರರುಹ ಮಹಾಶೋಭೆ ಕೈಗಣ್ಮೆ ವಿಶ್ವಾ|
ಚಲ ಚಕ್ರೇಶತ್ವಮಂತಾಳ್ದಿದುದಖಿಳಧರಾ ರಮ್ಯ ಹೈಮಾಚಳೇಂದ್ರಂ||೧೪||

' ಎಂದು ಮೆಚ್ಚಿ—

1. ಘ.), ಪ್ಪ (ಗ.) ; 2. ಗೆ (ಸ.).

ಕಂ|| ಚಾರು ವಿವಿಧಾಗ್ನಿ ಕಾರ್ಯ।
ಪ್ರಾರಂಭ ಮಹಾ ದ್ವಿಜನ್ಮ ಘೋಷದಿನಂಹೋ॥
ದೂರಮುಮವನಿತಳಾಳಂ।
ಕಾರಂ ಸಂಸಾರ ಸಾರ ಗಂಗಾದ್ವಾರಂ ||೧೫||

ವ|| ಎನೆ ಸೊಗಯಿಸುವ ಗಂಗಾದ್ವಾರದೊಳ್ ಮುನಿಜನಂಗಳ ಬೇಳ್ವಿಗಳ್ಗುಪದ್ರವಂಗೆಯ್ವ ನಿಶಾಟ ಕೋಟಿಯುಂ ನಿಶಿತ ಶರಕೋಟಿಯಿಂದಮುಚ್ಚಾಟಿಸಿ ಕೆಲವು ದಿವಸಮಿರ್ದಲ್ಲಿ *ಪಡೆಮೆಚ್ಚೆಗಂಡನ ಗಂಡಗಾಡಿಯುಂ ಕಂಡು ಫಣೀಂದ್ರನ ಕನ್ನೆ ಮದನಲತೆಯೆಂಬ ನಾಗ ಕನ್ನೆ ಕಣ್ಬೇಟಂಗೊಂಡು ತನ್ನ ಲೋಕಕ್ಕೊಡಗೊಂಡು ಪೋಗಲ್*—

ಉ|| ಆಗಳುಮಿಂದು ಸೂರ್ಯಕಿರಣಮಿಲ್ಲದೆ ಕತ್ತಲೆಯೆಂಬುದಿಲ್ಲ ತ।
ದ್ಭೋಗಿ ಫಣಾಮಣಿ ದ್ಯುತಿಯೆ ಕತ್ತಲೆಯೆಂ ತಲೆದೋಱಲೀಯದಾ॥
ನಾಗರ ನಾಗಕನ್ನೆಯರ ರೂಪುಗಳಿಟ್ಟ[1]ಳಮಾಗೆ ಭೋಗಿಗಳ್।
ಭೋಗಿಗಳೆಂಬ ಭೋಗಿಗಳೆ ಭೋಗಿಗಳಲ್ಲಿಯ ಭೋಗನಾಯಕರ್ ||೧೬||

ವ|| ಎಂದು ನಾಗಕನ್ನೆ ನಾಗಲೋಕದ ವಿಳಾಸಂಗಳಂ ತೋಱುತ್ತುಂ ತನ್ನ ಕೆ[2][ಱಗಣ] ನಾಗವಿಮಾನಕ್ಕೆ ವಂದು ನಾಗಕನ್ನೆಯರುಂ ತಾನುಂ ಮನಂ ಬುಗಿಸುವಂತೆ ಮಜ್ಜನಂಬುಗಿಸಿ ರಸರಸಾಯನಂಗಳನೂಡುವಂತೆ ದಿವ್ಯಾಹಾರಂಗಳನೂಡಿ—

ಉ|| ನಾಗವಿಭೂಷಣ ಪ್ರತತಿ ನಾಗರಖಂಡಮಪೂರ್ವಮಪ್ಪ ಪು।
ನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಗೆ ನಾಗಜಾಲಮೆಂ॥
ದಾಗಡೆ ನಾಗಲೋಕ ವಿಭವಂಗ[3]ಳೊಳಾಱಿಸಿ ನಾಗಶಯ್ಯೆಯೊಳ್।
ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್ ||೧೭||

ವ|| ಅಂತಾಕೆಯ ಮುದ್ದುವೆರಸಿದ ತೊದಳ್ನುಡಿಗಂ ಪೂಮಾಲೆವೆರಸಿದ ಬಱಲ್ಮುಡಿಗಮಲಂಪುವೆರಸಿದ ನೋಟಕ್ಕಮಿಂಬುವೆರಸಿದ ಕೂಟಕ್ಕಂ ಪುರುಡುವೆರಸಿದ ಕೊಂಕಿಂಗಂ[4]ಕದ್ದವಣಿ(?)ವೆರಸಿದ ಸೋಂಕಿಂಗಂ ಗಾಡಿವೆರಸಿದ ಹಾವಕ್ಕಂ ನಾಣ್ವೆರಸಿದ ಭಾವಕ್ಕಮೊಲ್ದುಮೊಱಲ್ದುಮಿರೆಯಿರೆ ದೇವೇಂದ್ರಂಗಮಿಂದ್ರಾಣಿಗಂ ಜಯಂತನೆಂತಂತೆ—

---

** ಈ ಭಾಗವು ಘ. ಪ್ರತಿಯಲ್ಲಿ ಮಾತ್ರವಿದೆ.

1. ಱಮಂತು (ಕ.ಗ.), ಳಮೆಂತ್ತು (ಖ.); 2. ಳಗೆ (ಸ.); 3. ಳ ತೋಱಿಸಿ (ಕ.) ಳನಾಲಿಸಿ (ಖ.), ಳನಾಱಿಸಿ (ಗ.); 4. ಗದ್ದವಣೆ (ಕ.ಖ.).

ಕಂ॥ ಅಂತಾ ಫಣಿಕಾಂತೆಗಮರಿ।
ಕಾಂತಾಳಿಕ ಫಳಕ ತಿಳಕ ಹರನೆನಿಪರಿಗಂ ॥
ಗಂ ತನಯನಧಿಕತೇಜೋ।
ವಂತನಿಳಾವಂತನಿಂದುಮಂಡಳ ಕಾಂತಂ ॥ ೧೮ ॥

ವ॥ ಅಂತು ಪುಟ್ಟುವುದುಮಾತನ ಬಾಲಕ್ರೀಡೆಯುಮಾಕೆಯ ಸುರತ ಕ್ರೀಡೆಯುಂ ತನ್ನ ನೋಟಕ್ಕಂ ಕೂಟಕ್ಕಂ ಸೊಗಯಿಸೆ ಕೆಲವು ದಿವಸಮಿರ್ದಲ್ಲಿಂ ಪೊಱಮಟ್ಟು ಬಂದು ಹಿಮವದ್ಗಿರೀಂದ್ರ ತಟ ನಿಕಟ ವರ್ತಿಗಳಪ್ಪಗಸ್ತ್ಯ ವಟಮುಂ ವಸಿಷ್ಠ ಪರ್ವತಂಗಳೆಂಬ ತೀರ್ಥಂಗಳೊಳೋಲಾಡುತ್ತು ಮಾ ದಿಶಾಭಾಗಮನಾತ್ಮೀಯ ಶಾಸನಾಯತ್ತಂ ಮಾಡುತ್ತುಂ ಬಂದಿಂದುಬಿಂಬವಿಗಳದಮೃತಬಿಂದು ದುರ್ದಿನಾರ್ದ್ರ ಚಂದನಾನ್ವಿತಮುಮಶಿಶಿರ ಕರ ರಥ ತುರಗ ಖುರ ಶಿಖರ ನಿಖಂಡಿತ ಲವಂಗ ಪಲ್ಲವಮುಮೈರಾವತ ಕರಲೂನ ಸಲ್ಲಕೀ [1]ಶಬಳಮುಮಪ್ಪುದಯಗಿರಿಯಿಂ ಸೊಗಯಿಸುವ ಮೂಡಣ ದೆಸೆಗೆ ವಂದು ನಂದೆಯುಪರನಂದೆಯುಶ್ವಿನಿ ಮಹಾನಂದೆಯೆಂಬ ತೀರ್ಥಜಲಂಗಳೊಳೋಲಾಡುತ್ತುಮುದ್ವೃತ್ತ ರಿಪು ನೃಪತಿಗಳನೇಸಾಡುತ್ತುಮಲ್ಲಿಂ ತಳರ್ದು ಚಪಳ ಕಪಿಬಳ ವಿಲುಪ್ತ ವಿಗಳಿತ ಲತಾಭವನಮುಮಧಿಕ ಬಳ ನಳ ಕರತಳಗಳಿತ ಕುಳಶೈಳ ಸಹಸ್ರ ಸಂತಾನ ಕಳಿತ ಸೇತುಬಂಧುರಮುಮಪ್ಪ ದಕ್ಷಿಣ ಸಮುದ್ರದ ತಡಿವಿಡಿದು ಬಂದು ರಾಮಚಂದ್ರಂ ವಿಹರಿಸಿದೆಡೆಗಳಂ ನೋಡಿ—

ಉ॥ ಅಂದಿದು ಸೀತೆಯೊಳ್ ನೆರೆದು ನಿಂದೆಡೆ ತತ್ಖರ ದೂಷಣರ್ಕಳಂ।
ಕೊಂದೆಡೆ ಪೋಗಿ ಪೊಮ್ಮ[2]ರೆಯನೆಚ್ಚೆಡೆ ತಪ್ಪದಿದಪ್ಪುದೆಂದು ಕಾ॥
ಯ್ಪಿಂ ದಶಕಂಠನಂ ತ್ರಿದಶ ಕಂಟಕನಂ ಕೊಲಲೆಂದು ರಾಮನಾ
ದಂದಿನ ಸಾಹಸಂ ಮನದೊಳಾವರಿಸಿತ್ತಕಳಂಕರಾಮನಾ ॥ ೧೯ ॥

ವ॥ ಅಂತು ರಾಮ ಜನ್ಮೋತ್ಪತ್ತಿಯೊಳಾದ ತನ್ನಯ ಮುನ್ನಿನ ಸಾಹಸಂಗಳಂ ನೆನೆಯುತ್ತುಂ ಬಂದಗಸ್ತ್ಯ ತೀರ್ಥಮಂ ಕಂಡು—

ಮ॥ ಬಳೆಯಲ್ಕಣ್ಮದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೊರ್ಮೆ ಮು।
ಕ್ಕುಳಿಸಲ್ಕಂಬುಧಿ ಸಾಲ್ದುದಿಲ್ಲ ಜಗಮಂ ತಿಂದಿರ್ದ ವಾತಾಪಿ [3]ಪೊ॥
ಕ್ಕಳುರ್ವಾತ್ಮೋದರ ವಹ್ನಿಯಿಂ ಪೊಱಮಡಲ್ ತಾನಾರ್ತನಿಲ್ಲೞ್ದುದಿ।
ಲ್ಲೆಳೆ ತೇಂಕಿರ್ದುದು ಭಾರದಿಂ ಬಡಗೆನಲ್ ಪೆಂಪಾರ್ಗಗಸ್ತ್ಯಂಬರಂ ॥ ೨೦ ॥

ವ॥ ಎಂದಗಸ್ತ್ಯ ತೀರ್ಥ ಸೌಭದ್ರ ಪೌಳೋಮ ಕಾಂಭೋಜ ಭಾರದ್ವಾಜಮೆಂಬಯ್ದು ತೀರ್ಥಂಗಳೊಳ್ ವರ್ಧಮಾನನೆಂಬ ಋಷಿಯ ಶಾಪದೊಳುಗ್ರಗ್ರಾಹ

1. ಕಳಬಮು (ಕ.), ಬಳಮು (ಖ.). ದಳ (ಬಹುಳ) ಮು (ಘ.ಘ§.); 2. ಱಿ (ಕ.ಖ.ಘ.), ಱೆ (ಗ.); 3. ಮೊಕ್ಕಳಮಾ (ಕ.).

ಸ್ವರೂಪದೊಳಿರ್ದಚ್ಚರಸೆಯರುಮಂ ವಿಶಾಪೆಯರ್ ಮಾಡಿ ಮಳಯ ಪರ್ವತಮ
ನೆಯ್ದೆವಂದು—

ಚಂ॥ ಇದು ಮಳಯಾಚಳಂ ಮಳಯಜಂ ಮಳಯಾನಿಳನೆಂದು ಪೆಂಪುವೆ।
ತ್ತುದು ಸಿರಿಕಂಡಮುಂ ಪ[1][ದೆ]ದು ತೀಡುವ ಗಾಳಿಯುಮಿಲ್ಲಿ ಪು[2]ಟ್ಟ ಪೋ॥
ಗದು ಪೊಸ ಸುಗ್ಗಿ ಮೂಗುವಡದಿಲ್ಲಿಯ ಕೋಗಿಲೆ ಬಂದಮಾವು ಬೀ।
ಯದು ಕುಸುಮಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯ ನಂದನಂಗಳೊಳ್
॥ ೨೧ ॥

ಮ॥ ಇದಱಭ್ರಂಕಷ ಕೂಟ ಕೋಟಿಗಳೊಳಿರ್ದಂಭೋಜ ಷಂಡಂಗಳಂ।
ಪುದಿದುಷ್ಣಾಂಶುವಿನೂರ್ಧ್ವಗಾಂಶು ನಿವಹಂ ಮೆಯ್ಯಿಟ್ಟಲರ್ಚುರ್ತ್ತುಮಿ॥
ರ್ಪುದು ಮಾದ್ಯದ್ಗಜ ಗಂಡ ಭಿತ್ತಿ ಕಷಣಪ್ರೋದ್ಭೇದದಿಂ ಸಾರ್ದು ಬಂ।
ದಿದಿರೊಳ್ ಕೂಡುವುದಿಲ್ಲಿ ಚಂದನ ರಸಂ ಕೆಂಬೊನ್ನ ಟಂಕಂಗಳೊಳ್
॥ ೨೨ ॥

ಮ॥ ಸ್ರ॥ ನೆಗಟ್ದೀ ಕರ್ಪೂರ ಕಾಳಾಗರು ಮಳಯ ಮಹೀಜಂಗಳೇಳಾ ಲತಾಳೀ।
ಸ್ಥಗಿತಂಗಳ್ ಕಣ್ಗೆವಂ[3]ದಿರ್ದುವನಿವನೆ ವಲಂ ಕೊಂಬುಗೊಂಡಂಗಜಂ ಮೆ॥
ಲ್ಲಗೆ ಷಾದರ್ಾದರ್ಾಗಳುಂ ಕಿನ್ನರ ಯುವತಿ ಮೃಗೀ ವ್ರಾತಮಂ ತನ್ನ ನಲ್ಲಂ।
ಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವನದಱಿಂ ರಮ್ಯಮಿಂತೀ ನಗೇಂದ್ರಂ
॥ ೨೩ ॥

ಮ॥ ಇದಿರೊಳ್ ನಿಂದೊಡೆ ವಜ್ರಿ ಸೈರಿಸನಿರಲ್ವೇಡೆಮ್ಮೊಳೊಳ್ಪೊಕ್ಕು ನಿ।
ಲ್ವುದು ನೀನೆಂದು ಕಡಂಗಿ ಕಾಲ್ವಿಡಿವವೋಲ್ ತನ್ನೂರ್ಮಿಗಳ್ ಬಂದುವಂ॥
[4]ದಿದಱಿಂ ಪೋದ ತಪೋ[5]ಪಳಂ (?) ಗಗನಮಂ ಮಾರ್ಪೊಯ್ಯೆ ಕಣ್ಗೊಪ್ಪಿ
ತೋ।
ರ್ಪುದಿದುತ್ಫೇಂಖದಸಂಖ್ಯ ಶಂಖ ಧವಳಂ ಗಂಭೀರ ನೀರಾಕರಂ ॥ ೨೪ ॥

ಚಂ॥ ಚಳದನಿಳಾಹತ ಕ್ಷುಭಿತ ಭಂಗುರ ತುಂಗ ತರಂಗ ಮಾಳಿಕಾ।
ವಳನ ಸಮುಚ್ಚಳನ್ಮಣಿಗಣಾತ್ತ ಮರೀಚಿ ಲತಾ ಪ್ರತಾನ ಸಂ॥
ವಳಯಿತ ವಿದ್ರುಮ ದ್ರುಮ ವಿಳಾಸ ವಿಶೇಷಿತ ಬಾಡವಾನಳಾ।
ವಿಳ ಜಳಮಂ ಮನಂ ಬಯಸಿ ನೋಡಿದನರ್ಣವಮಂ ಗುಣಾರ್ಣವಂ ॥ ೨೫ ॥

ವ॥ ಅಂತು ನೋಡು* ತ್ತುಂ ಬಂದು ಮುಂದೊಂದೆಡೆಯೊಳ[ದ]ಭ್ರಾಭ್ರ
ವಿಭ್ರಮ ಭ್ರಾಜಿತೋತ್ತುಂಗ ಶೈಲಮಂ ಕಂಡು*—

** ಈ ಭಾಗವು ಘ. ಪ್ರತಿಯಲ್ಲಿ ಮಾತ್ರವಿದೆ.

1. ಡೆ (ಸ.); 2. ಲ್ಲಿ (ಕ.ಖ.ಘ.); 3. ದೀವನಿವನೆನೆ (ಕ.), ದೀವನಿವನೆ (ಖ.ಗ.); 4. ದು (ಕ.); 5. ಬಳಂ (ಕ.ಖ.).

ಮ॥ ವಿನತಾಪುತ್ರನ ವಜ್ರ ತುಂಡ ಹತಿಗಂ ಮೆಯ್ಯಾಂತು ಕಂಡಂಗಳುಂ।
ಳ್ಕಿನಮಂಗಂಗಳನೊತ್ತಿಯೊತ್ತಿ ತಿನುವಂ ಕೊ[1]ಟ್ಟಿಂತು ಜೀಮೂತವಾ।
ಹನನೆಂಬಂಕದ ಚಾಗಿ ನಿಚ್ಚಟಿಕೆಯಿಂದೀ ಶೈಳದೊಳ್ ಶಂಖಚೂ।
ಡನನಾನಂದದೆ ಕಾದ ಸಂಪದೆಯೆ ನಾಗಾನಂದಮಂ ಮಾಡಿದಂ ॥ ೧೬ ॥

ವ॥ ಎಂದಭಿನವ ಜೀಮೂತವಾಹನಂ ಜೀಮೂತವಾಹನನ ಪರೋಪಕಾರದ ಬೀರದ ಸಂಪಂ ಮೆಚ್ಚುತ್ತುಂ ಬಂದು ಗೋಕರ್ಣನಾಥನಂ ಗೌರೀನಾಥನನವನಿ ಪವನ ಗಗನ ದಹನ ತರಣಿ ಸಲಿಲ ತುಹಿನಕರ ಯಜಮಾನ ಮೂರ್ತಿಯಂ ತ್ರಿಲೋಕೈಕ ಸಂ[2]ಗೀತ ಕೀರ್ತಿಯಂ ಕಂಡು ಕೆಯ್ಗಳಂ ಮುಗಿದು—

ಶ್ಲೋ॥ ಪ್ರಚಂಡ ಲಯ ತಾಂಡವ ಕ್ಷುಭಿತಯಾಳು ಯಸ್ಯಾನಯಾ।
ಸವಿಗ್ರಹಯುಯಾ [3]ಭುವಾ ಸಗಿರಿ ಸಾಗರ ದ್ವೀಪಯಾ॥
ಕುಲಾಲ ಕರ ನಿರ್ಭರ ಭ್ರಮಿತ ಚಕ್ರಲೀಲಾಯಿತಂ।
ಸಸರ್ವ ಜಗತಾಂ ಗುರುರ್ಗಿರಿಸುತಾ ಪತಿಃ ಪಾತು [4]ನಃ ॥ ೧೭ ॥

ವ॥ ಎಂದು ಬಾಳೇಂದುಮೌಳಿಯಂ ಸ್ತುತಿಸಿ—

ಚಂ॥ ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ ಪೂತ ಜಾತಿ ಸಂ।
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಪುಗಂ॥
ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟ್ಪೊಡಾವ ಬೆ।
ಟ್ಟುಗಳೊಳಮಾವ ನಂದನ ವನಂಗಳೊಳಂ ಬನವಾಸಿ ದೇಶದೊಳ್ ॥ ೧೮ ॥

ಉ॥ ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ।
ಳ್ಗಾಗರಮಾದ ಮಾನಸ[5]ರೆ ಮಾನಸರಂತವರಾಗಿ ಪುಟ್ಟಲೇ॥
ನಾ[6]ಗಿಯುಮೇನೊ ತೀರ್ದಪು[ದೆ] ತೀರದೊಡಂ ಮರಿದುಂಬಿಯಾಗಿ ಮೇಣ್।
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್ ॥ ೧೯ ॥

ತೆಂಕಣ ಗಾಳಿ ಸೋಂಕಿದೊಡಮೊಳ್ನು[7]ಡಿಗೇಳ್ದೊಡಮಿಂಪನಾಳ್ದ ಗೇ।
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ।
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ।
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ ॥ ೨೦ ॥

---

1. ಟ್ಟಿಂ (ಕ.ಗ.); 2. ಸು (ಕ.), ಚಿ (ಗ.); 3. ಜ್ಞಯಾ (ಕ.), ಜ್ಞಾ (ಖ.), ಜ್ಞಾ (ಗ.); 4. ವಃ (ಖ.ಗ.ಘ.); 5. ರ ಮಾನಸರಂ (ಕ.); 6. ಗಿಯುಮೇನೊ ತೀರ್ದಪುದೊ (ಕ.ಖ.); 7. ತಿಗೆಯೊ್ಳ (ಕ.).

ಮ॥ ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇ।
ಯಮುಮಾದಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ ಕೋಟ್ಟಿ
ಜೊಂ॥
ಪಮುಮೇವೇಟ್ಪುದನುಳ್ಳ ಮೆಯ್ಸುಕಮುಮಿಂತೆನ್ನಂ ಕರಂ ನೋಡಿ ನಾ।
ಡೆ ಮನಂಗೊಂಡಿರೆ ತೆಂಕನಾಡ ಮಱಿಯಲ್ಕಿನ್ನೇಂ ಮನಂ ಬರ್ಕುಮೇ
॥ ೩೧ ॥

ವ॥ ಎಂದರಿಕೇಸರಿ ತೆಂಕನಾಡಂ ನಾಡಾಡಿಯಲ್ಲದೆ ಮೆಚ್ಚುತ್ತುಮಾನಾಡ ನೊಂದೆ ಬಿಲ್ಲೊಳುಂಡಿಗೆ ಸಾಧ್ಯಂ ಮಾಡಿ ಪಶ್ಚಿಮ ದಿಗ್ವಿಭಾಗಾಭಿಮುಖನಾಗಿ ಬಂದು—

ಖಚರಪ್ಲುತ॥ ಸಾರ ವಸ್ತುಗಳಿಂ ನೆಱೆದಂಭೋರಾಶಿಯೆ ಕಾದಿಗೆ ಕಾವನುಂ।
ಸೀರಪಾಣಿ ವಿಳಾಸದಿನಾಳ್ದಂ ಚಕ್ರಧರಂ ಬಗೆವಂಗೆ ಸಂ॥
ಸಾರಸಾರಮಿದೆಂಬುದನಂದೆಯ್ತಂದನಸಂಚಳ ಕಾಂಚನ।
ದ್ವಾರ ಬಂಧುರ ಬಂಧ ಗೃಹೋದ್ಯದ್ದ್ವಾರವತೀ ಪುರಮಂ ನರಂ
॥ ೩೨ ॥

ವ॥ ಅನ್ನೆಗಂ ತನ್ನ ಮಯ್ದುನನಪ್ಪಮೋಘಾಸ್ತ್ರ ಧನಂಜಯನ ಬರವಿನ ಸಂತಸದೊಸಗೆ ಪಡೆಮಾತಂ ಮುಂದುವರಿದಱಿಪುವಂತೆ—

ಮ॥ ಪಲವುಂ ಜನ್ಮದೊಳಾದ ನಿನ್ನ ಕೆಳೆಯಂ ಬಂದಪ್ಪನಾತಂಗೆ ಬೆಂ।
ಬಲಮಿನ್ನೇಂ ನಿನಗಾತನಾತನನಿಳಾ ವಿಖ್ಯಾತನಂ ಕೂರ್ತು ನೋ॥
ಡಲುಮಟ್ಕಿರ್ತಮರ್ದಪ್ಪಲುಂ ಪಡೆವೆಯೆಂದೆಂಬಂತೆ ಕೆತ್ತಿತ್ತು ದಲ್।
ಬಲಗಣ್ಣಂ ಬಲ[1]ದೋಳುಮಾ ಬಲಿ ಬಲ ಪ್ರಧ್ವಂಸಿಗಂ[2]ದಿಟ್ಟಳಂ ॥ ೩೩ ॥

ವ॥ ಅಂತು ದಕ್ಷಿಣಾಕ್ಷಿ ಸ್ಪಂದನದೊಳಂ ಸೂಚಿಸುವ ಶುಭಸೂಚನೆಯೊಳಂ ನಾರಾಯಣನುದಾತ್ತನಾರಾಯಣನ ಬರವನಱಿದು ಬಲದೇವ ಸಾತ್ಯಕಿ ಕೃತವರ್ಮಾದಿಗಳಪ್ಪ ತನ್ನೊಡವುಟ್ಟಿದರುಂ ವೃಷ್ಣಿ ಕಾಂಭೋಜಕುಳತಿಳಕರಪ್ಪ ಯಾದವರುಂ ಬೆರಸು ಮದಕರಿ ಕರೇಣು ತುರಗಾದಿ ನಾನಾ ವಿಧ ವಾಹನಂಗಳನೇಱಿ ಮಯ್ದುನಂಗಿದಿರ್ವಂದು ತಮ್ಮಲಂಪಿನಟ್ಕಱನ ರೂಪನೆ ಕಾಣ್ಬಂತೆ ಕಂಡು ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮೋರೊರ್ವರಂ ತೆಗೆದಪ್ಪಿ ನಿಬಿಡಾ ಲಿಂಗನಂಗೆಯ್ದಾನಂದಜಳ ಪರಿಪೂರ್ಣ ವಿಸ್ತೀರ್ಣ ವಿಲೋಚನಂಗಳಿಂದಂ ಮುಹುರ್ಮುಹುರಾಲೋಕನಂ ಗೆಯ್ಯುತ್ತುಮುತ್ತುಂಗ ಮತ್ತ ವಾರಣಂಗಳನೇಱಿ ಪೊಱಲಂ ಪುಗೆ—

---

1. ಗೆಯ್ಕತೋಳ್ (ಕ.ಖ.ಗ.) ; 2. ಚಕ್ರಿಗಂ (ಕ. ಖ.).

ಚಂ॥ ಸುರ ನರ ಕಿನ್ನರೋರಗ ನಭಶ್ಚರ ಕಾಂತೆಯರೇವರೆಂದು ಮಾಂ।
ಕರಿಸುವ ಕೆಯ್ತದಂದದ ಮುರಾರಿಯ ತಂಗೆಯನಪ್ಪುಕೆಯ್ದು ಚ॥
ಚ್ಚರವೊಳಪೊಯ್ದು ನೀಂ ನಿನಗೆ ಮಾಡುವುದೆಂದಮರೇಂದ್ರ ಪುತ್ರನಂ।
ಕರೆವವೊಲಾದುವಾ ಪುರದ ವಾತ ವಿಧೂತ [1]ವಿನೂತ ಕೇತುಗಳ್ ॥ ೩೪ ॥

ವ॥ ಆಗಳ್ ಮೊಱಗುವ ಬದ್ದವಣದ ಪಱೆ[3]ಗಳುಂ ಪಿಡಿದ ಕೆಂಬೊನ್ನ ತಳಿಗೆಯೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಸೇಸೆಯುಂ ಬೆರಸು—

ಚಂ॥ ಒದವಿದ ನೂಲ ತೊಂಗಲುಲಿ ದೇಸೆಯನಾಂತು ವಿಳಾಸದಿಂದಿಱುಂ।
ಕಿದ ನಿಱಿ ಗಂಡರಳ್ಳಿರ್ದೆಗಳಂ ತುಱುವೋಜೆಯನುಂಟುಮಾಡುವಂ॥
[2]ದದೆ ನಿಡುಗಣ್ಗಳೊಳ್ನಡೆ ಮನೋಭವನೊಡ್ಡಣದಂತೆ ತಂಡ ತಂ।
ಡದೆ ಪರಿತಂದು ಸೂಸಿದುದು ಸೇಸೆಯನಂದು ಪುರಾಂಗನಾ ಜನಂ ॥ ೩೫ ॥

ಮಿಳಿರ್ವ ಕುರುಳ್ಗಳೊಳ್ ಪೊಳೆವ ಕಣ್ಗಳ ಬೆಳ್ಪು ಪಳಂಚಿ ಚಿನ್ನ ಪೂ।
ಗ[3]ಣೆಗೆಣೆಯಾಗೆ ಪುರ್ವುಮೆ[4][ಮೆ]ಗಳ್ ಬಿಡದಳ್ಳಿಱಿದಿಕ್ಷುಚಾಪದೊಳ್
ಖಳ ಕುಸುಮಾಸ್ತ್ರನಿಟ್ಟ ಗೊ[5]ಣೆಯಕ್ಕೆಣೆಯಾಗಿರೆ ನಿಳ್ಕಿ ನಿಳ್ಕಿ ಕೋ
ಮಳೆ ನಡೆ ನೋಡಿದಳ್ ಕರಿಯನೇಱಿದನಂ ಪಡೆಮೆಚ್ಚೆಗಂಡನಂ ॥ ೩೬ ॥

ವ॥ ಮತ್ತೊರ್ವಳತಿ ಸಂಭ್ರಮ ತ್ವರಿತದಿಂ ಮೇಖಳಾಕಳಿತ ರು[6]ಚಿರ ಲುಳಿತಾಧರ ಪಲ್ಲವೆ ನೋಟ್ಪ ದಂಡುಗಳೊಳಂಡುಗೊಂಡು ಸೊರ್ಕಿದಾನೆ ಬರ್ಪಂತೆ ಬಂದು—

ಉ॥ ಕಾಯದೆ ಕಾಮನಾರ್ದಿಸೆ ತೊವಲ್ವಿಡಿವಂತೆಡಗಯ್ಯೊಳೊ[7]ಪ್ಪೆ ತೋ।
ರ್ಪಾಯೆಲೆ ನೋಟ ಬೇಟದ ಕೊನರ್ ತಲೆದೋರ್ಪವೊಲಾಗೆ ಬಾಯೊಳಿ॥
ರ್ದಾಯೆಲೆ ಕಣ್ಗೆವಂದೆಸೆಯೆ ಕ[8][ಯ್ಯೆ]ಲೆ ಕಯ್ಯೊಳೆ ಬಾಯ ತಂಬುಲಂ।
ಬಾಯೊಳೆ ತೋಱೆ[3] ಮೆಯ್ಮಱೆ[3]ದು ನೋಡಿದಳಾ ಸಮರೈಕಮೇರುವಂ
॥ ೩೭ ॥

ವ॥ ಮತ್ತೊರ್ವಳ್ ಕರ್ವಿನ ಬಿಲ್ಲ ತಿರುವಿಂ ಬರ್ದುಂಕಿ ಬರ್ಪಲರಂಬು ಬರ್ಪಂತೆ ಬಂದು—

ಮ॥ ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಪೋ ಮೆಚ್ಚೆನಾನಾವ ಗಂ।
ಡರುಮಂ ಕಚ್ಚೆಯೊಳಿಟ್ಟು ಕಟ್ಟುವೆನೆನುತ್ತಿರ್ಪಾಕೆ ಗಂಧೇಭ ಕಂ॥
ಧರ ಬಂಧ ಪ್ರವಿಭಾಸಿಯಪ್ಪರಿಗನಂ ಕಾಣುತ್ತೆ ಕಣ್ಸೋಲ್ತು ಕಾ।
ಮ ರಸಂ ಭೋಂಕನೆ ಸೂಸೆ ತಾಳ್ದಲರಿದೆಂದಿರ್ಕಚ್ಚೆಯುಂ ಕಟ್ಟಿದಳ್ ॥ ೩೮ ॥

---

[1]. ಗೃಹಾಗ್ರ (ಕ.) ; [2]. ಗ (ಕ.) ; [3]. ೞನೆ (ಕ.) ; [4]. ನೆ (ಸ.) ; [5]. ಣಣ (ಕ. ಗ.), ಜಣ (ಖ.) ; [6]. ದ (ಖ. ಗ.), ಧಿ (ಘ.) ; [7]. ಪ್ಪಿ (ಕ. ಖ. ಗ.) ; [8]. ಯ್ಯ (ಕ.).

ವ|| ಅಂತು ನೋಡಿದ ಪೆಂಡಿರೆಲ್ಲಂ ಕಾಮುದೇವನೆಂಬ ಬೇಂಟೆಕಾಱಂಗೊಡ್ಡಿದ ಪುಲ್ಲೆಗಳಂತರಲಂಬಿನ ಮೊನೆಗೆ ಪೂಣೆ ಪೊಕ್ಕು ಪಕ್ಕಾಗಿರೆ ಪೊೞಲೊಳಗಣಿಂ ಬಂದು ದಿವಿಜೇಂದ್ರ ವಿಳಾಸೋಪಹಾಸಿತಮಪ್ಪ ನಿಜ ಮಂದಿರಮಂ ಪುಗೆ—

ಮ|| ಲತೆಗಳ್ ಜಂಗಮ ರೂಪದಿಂ ನೆರೆದುವೋ ದಿವ್ಯಾಪ್ಸರೋವೃಂದವಿ೯ ।
ಕ್ಷಿತಿಗೇನಿಂದ್ರನ ಶಾಪದಿಂದಿೞಿದುವೋ ಪೇೞೆಂಬ ಶಂಕಾಂತರಂ ॥
ಮತಿಗಂ ಪುಟ್ಟುವಿನಂ ಕರಂ ಪರಕೆಗಳ್ ತಳ್ಪೊಯ್ಯೆ ಸೇಸಿಕ್ಕಿತಿಂ ।
ದ್ರತನೂಜಂಗಿದಿರ್ವಂದು ಷೋಡಶ ಸಹಸ್ರಾಂತಃಪುರಂ ಕೃಷ್ಣನಾ ॥ ೭೯ ॥

ವ|| ಆಗಳ್ ನಾರಾಯಣನ ತಂಗೆ ಸುಭದ್ರೆಯೆಂಬ ಕನ್ನೆ ಕೆಮ್ಮುಗಿಲ ತೆರೆಯ ಪೊರೆಯೊಳ್ ನೆಗೆದು ಪೊಱಮಡುವ ವಿದ್ಯಾಧರಿಯಂತೆ ತನ್ನ ಚೆಂಬೊನ್ನ ಕನ್ನೆ ಮಾಡದ ಮೇಗಣ ನೆಲೆಯ ಚೌಪಳಿಗೆಯ ಬಾಗಿಲೊಳ್ ನಿಂದು—

ಚಂ|| ಬಳಸಿದ ಗುಜ್ಜುಗಳ್ ನೆರೆದ ಮೇಳದ ಕನ್ನೆಯರೆತ್ತಮಿಕ್ಕೆ ಸಂ ।
ಚಳಿಸುವ ಚಾಮರಂ ಕನಕ ಪದ್ಮದ ಸೀಗುರಿ ತೊಟ್ಟ ಮಾಣಿಕಂ ॥
ಗಳ ಬೆಳಗಿಟ್ಟಳಂ ತನಗೊಡಂಬಡೆ ದೇಸೆ ವಿಳಾಸಮಂ ಪುದುಂ ।
ಗೊಳಿಸೆ ಮುರಲ್ದು ಕನ್ನೆ ನಡೆ ನೋಡಿ ಗುಣಾರ್ಣವನೆಂಬನೀತನೇ ॥ ೮೦ ॥

ವ|| ಎಂದು ತನ್ನ ಮೇಳದಾಕೆಗಳಂ ಬೆಸಗೊಂಡೊಡಾಕೆಗಳಾಕೆಯ ಪತ್ತಿದ ಕಣ್ಣುಮ[1]ನುೞ್ಗಿದ ಮನಮುಮಂ ಜೋಲ್ದ ನಾಣುಮಂ [2]ನೇಲ್ದ ಸರಮುಮನಱಿದು ಸಹಜಮನೋಜನ ಕುಲದ ಚಲದ ಚಾಗದ ಬೀರದ ಭಾಗ್ಯದ ಸೌಭಾಗ್ಯದಗುಂತಿಗಳನಂತುಮಳವಲ್ಲದೆ ಪೊಗೞೆ[3]—

ಚಂ|| ಒದವಿದ ತನ್ನ ಜವ್ವನದ ರೂಪಿನ ಮೆಯ್ಯೊ[3]ಳೆ ತಪ್ಪುದಪ್ಪು ನೋ ।
ಟದೊಳೆ ಪೊಡ[4]ರ್ಪು ತಪ್ಪು ಬಗೆ ತಪ್ಪು ಮನೋಜನ ಪೂವಿನಂಬು ತೀ ॥
ವಿದ ದೊಣೆ [5]ತೀವಿ ತನ್ನನಿಸೆ ಜಾಣನೆ ತಪ್ಪದೆ ತಪ್ಪುದಪ್ಪ ನೋ ॥
ಡಿದುದದಱಿಂ ಗುಣಾರ್ಣವನನಾ ಸತಿ ತಪ್ಪದೆ ತಪ್ಪು ನೋಟದೊಳ್ ॥೮೧॥

ವ|| ಅಂತು ತಳತಳ ತೊಳಗುವ ದುಕೂಲದ ಸಕಳ[6]ವಟ್ಟೆಯೊಳ್ ನಿರ್ಮಿದಂತಾನುಮರಲ್ದ ತಾವರೆಯೆಸಲ್ಗಳೊಳ್ ಪುದಿದು ಪುದುಂಗೊಳಿಸಿದಂತಾನುಮನಂಗಾಮೃತವರ್ಷಮನೊ[7]ದವಿಸಿದಂತಾನುಮೆರ್ದೆಯೊಳೆಡೆವಱಿಯದ ಪೊಳಪಿನೊಳ್ ತಳ್ಪೊಯ್ದು ಕಡೆಗಣ್ಣ ಬೆಳ್ಪುಗಳ್ ಸೊಗಯಿಸುವ ಕುವಳಯದಳನಯನೆಯ ನೋಟಂ ತನ್ನ ಮನದೊಳಳ್ಳಾಟಮಂ ಪಡೆಯೆ—

---

1. ಮು (ಕ. ಖ.); 2. ನೀಳ್ದ (ಕ. ಗ.); 3. ಯೊಳಂತು (ಖ.), ಳಳುಂತು (ಘ.), ಾರ್ತು (ಪ.); 4. ದ್ರ್ಪು (ಕ. ಖ.); 5. ಕೀಱಿ (ಗ. ಘ.); 6. ವಟ್ಟೆಯುಪೊಲ್ (ಖ), ಯೊಂ (ಗ.), ವಟ್ಟೆಯುಯೊಂ (ಘ.); 7. ಡರಿ (ಖ. ಗ. ಘ.).

ಮ॥ ನನೆಯಂಬಂಬನೆ ಕರ್ಚಿ ಪಾಱಿದಪುದೋ ಶೃಂಗಾರ ವಾರಾಶಿ ಘೋಂ।
ಕನೆ ಬೆಳ್ಳಂಗೆಡೆದತ್ತೊ ಕಾಮ ನೆಱೆ[1]ಮೆ[ಯ್ವೆರ್ಚಿ]ತ್ತೊ ಪೇೞೀಕೆಗಂ॥
ಬಿನೆಗಂ ಸೋಲಮನುಂಟುಮಾಡೆ ಹರಿಗಂ ಕರ್ಣಾಂತ ವಿಶ್ರಾಂತ ಲೋ।
ಚನನಾಲೋಚನ ಗೋಚರಂಬರೆಗಮೊಲ್ದಾ ಕನ್ನೆಯಂ ನೋಡಿದಂ ॥ ೪೨ ॥

ವ॥ ಅಂತು ಸುರತಮಕರಧ್ವಜನ ಕಡೆಗಣ್ಣ ನೋಟಂ ಕಾಮನ ಕಿಸುಗಣ್ಣಿದ ನೋಟದಂತೊರ್ಮೊದಲೆ ತನ್ನ ಮನದೊಳಳ್ಳಾಟಮಂ ಪಡೆಯೆ—

ಉ॥ ಸೋಲದೊಳೆಯ್ದೆ ಪೀರ್ದ ತೆಱದಿಂದೆಮೆಯಿಕ್ಕದೆ ನೋಟ್ಪ ಕಣ್ಗೆ ಕರ್ಣ।
ಪೀಲಿವೊಲಾಗೆ ಬಂದು ಪೆಱತೊಂದು ಮನಂಬುಗೆ ಪತ್ತಿ ಚಿತ್ತದೊಳ್॥
ಕೀಲಿಸೆ ಕಾವನಂಬವಱ ಬಿಣ್ಪಿನೊಳೊಯ್ಯನೆ ಜೋಲ್ದವೋಲೆ ತಾಂ।
ಬೂಲ ಕರಂ[2]ಕ ವಾಹಿನಿಯ ಮೇಲೆ ನೆಱಲ್ದಿರೆ ಬಾಲೆ ಲೀಲೆಯಿಂ ॥ ೪೩ ॥

ವ॥ ಆಗಳಾ ನಾರಾಯಣನುಮುದಾತ್ತನಾರಾಯಣನುಮಾನೆಯಿಂದ ಮಿೞಿದು ನವ ಕಿಸಲ[3][ಯ ವಂದನ] ಮಾಳಾಳಂಕೃತಮಪ್ಪ ಸಪ್ತ ತಾಳೋತ್ತುಂಗ ರಮ್ಯ ಹರ್ಮ್ಯದೆರಡನೆಯ ಮೊಗಸಾಲೆಯೊಳಿಟ್ಟ ಪೊನ್ನ ಪಡಿಗಂಗಳೊಳಮಿಕ್ಕಿದ ಪೞಿಯ ಸುಖಾಸನಂಗಳೊಳಂ ಕಟ್ಟಿದ ಚಿನ್ನದ ಬೊಂದರಿಗೆಯೊಳಮೆಸೆದಿರ್ದ ಮಣಿಮಯ ಪೀಠದೊಳೊಡನೇಱ ಕಿೞಿದು ಪೊೞ್ತು ಕುಳ್ಳಿರ್ದು ಮಜ್ಜನ ಭೋಜನ ತಾಂಬೂಲಾನುಲೇಪ[4][ನ ವಿ]ಭೂಷಣ ಸುರಭಿ ಕುಸುಮ ದಾಮಾದಿಗಳಿಂ ಸಂತಸಂಬಡಿಸಿ ದಾಮೋದರನುದರದೊಳಿಟ್ಟು[5]ಕೊಳ್ವನಿತಱ್ಕಱೊಳಪಗತ ಪಥ ಪರಿಶ್ರಮನಂ ಮಾಡಿ—

ಕಂ॥ ಈತಂ ಬಿರ್ದಿನನೀತಂ।
ಭೂತಳ ಪತಿಯೆನಿಸಿದರಿಗನೊಡೆಯಂ ಹರಿ ತಾ॥
ನೀತನೆ ಬಿರ್ದಿನನೆನೆ ವಿ।
ಖ್ಯಾತಂಗೆ ನರಂಗೆ ಸೆಱಪುಗೆಯ್ದನನಂತಂ ॥ ೪೪ ॥

ವ॥ ಅಂತೆನಿತಾನುಮಂದದೊಳ್ ಸೆಱಪುಗೆಯ್ದು ವಿವಿಧ ವಿನೋದಂಗಳಂ ತೋಱ ಮುನ್ನೆ ಬದರಿಕಾಶ್ರಮದೊಳ್—

ಕಂ॥ ಆಯತಿಯಿಂದಂ ನರ ನಾ।
ರಾಯಣರೆನೆ ನೆಗೞ್ದಿವರಿಗ ನಾವಿರ್ವರುಮಿಂ॥
ತೀ ಯುಗದೊಳೀಗಳಾಂ ನಾ।
ರಾಯಣನೆಂ ನೀನುದಾತ್ತನಾರಾಯಣನೈ ॥ ೪೫ ॥

---

1. . . ಮೆಚ್ಚಿ (ಕ. ಖ. ಗ.), ಪ್ಯೆಮೆಚ್ಚಿ (ಘ.) ; 2. ಡ. (ಕ.) ; 3 ಯಾನಂದ (ಸ.) ; 4. ನಾದಿ (ಸ) ; 5. ಕೇ (ಕ. ಖ.).

ವ॥ ಅದಱಿಂ ನಿನಗಮೆನಗಮೇತಱೊಳಂ ವಿಕಲ್ಪಮುಂ ವಿಚ್ಛಿನ್ನಮುಮಿಲ್ಲೆಂದು ನುಡಿಯುತಿರ್ಪನ್ನೆಗಮಿತ್ತಲ್—

ಚಂ॥ ನವ ನಳಿನೀ ವನಂಗಳ ಪರಾಗ ರಜಂಗಳನುಂಡು ಮುನ್ನಮುಂ।
ತವನೆ ವಿಯತ್ತಳ ಭ್ರಮಣ ವಿಹ್ವಲನಾಗಿ ಬಟಲ್ದು ಕಾಱುವಂ॥
ತೆವೊಲಿರೆ ಕೆಂಪು ತತ್ಕಮಳ ಕಾನನ ಕಂಟಕ ಲಗ್ನಪಾದನಾ।
ದವೊಲುಡುಗುತ್ತುಮಾತ್ಮ ಕರಮಂ ರವಿ ಪೊರ್ದಿದನಸ್ತಶೈಲಮಂ ॥ ೪೬ ॥

ವ॥ ಆ ಪ್ರಸ್ತಾವದೊಳ್—

ಉ॥ ಆ ಸರಸೀಜ ಬಾಂಧವನ ಪಿಂ[1][ಬ]ಡಿನೊಳ್ ಕಡುವಿನ್ನನಾದುವಿಂ।
ತೀ ಸರಸೀರುಹಂಗಳವನೀ ಪದದೊಳ್ ಬಿಸುಟೆಂತು ಪೋಪೆವೆಂ॥
ಬೀ ಸಮಕಟ್ಟಿನೊಳ್ ನೆಲಸಿದಂತೆಱಗಿರ್ದುವು ಷಟ್ಪದಂಗಳು।
ತ್ಕೇಸರ ಕೋಟಿ ಸಂಕಟ ಕುಶೇಶಯ[2][ಕೋ]ಶ ಕುಟೀರಕಂಗಳೊಳ್ ॥ ೪೭ ॥

ಚಂಡ ಮರೀಚಿಗಸ್ತಮಯಮಿಲ್ಲದುದೊಂದೆಡೆ ನಿಮ್ಮ ಕೇಳ್ದುದುಂ।
ಕಂಡುದುಮುಳ್ಳೊ[3]ಡಿನ್ ಬೆಸಸಿಮಾಮಿರದಲ್ಲಿಗೆ ಪೋಪೆವೆಂದು ಮೆ॥
ಯ್ಗೊಂಡೊಲವಿಂದಗಲ್ಕೆಗಣಮಾಱದೆ ಪಕ್ಕಿಗಳೆಲ್ಲಮಂ ಮರು।
ಳ್ಗೊಂಡವೊಲೂಳ್ದು ಕೂಡೆ ಬೆಸಗೊಂಡು ಬಟಲ್ದುವು ಜಕ್ಕವಕ್ಕಿಗಳ್ ॥ ೪೮ ॥

ವ॥ ಅಂತು ಕಮಳವನಂಗಳಾದಿತ್ಯಂಗೆ ಕೆಯ್ಯಂ ಮುಗಿವಂತೆ ಮುಗಿಯೆ ಜಕ್ಕವಕ್ಕಿಗಳ್ ಸುರತಮಕರಧ್ವಜನ ಸುಭದ್ರೆಯ ವಿರಹ ಪರಿತಾಪಮಂ ಪಚ್ಚು ಕೊಂಡಸುಂಗೊಂಡಗಲೆ ಸಂಧ್ಯಾರಾಗಮವರ ಮನದನುರಾಗಮನನುಕರಿಸುವಂತು ಟಾಗೆ ಬಟಿಯಂ ಕ್ರಮಕ್ರಮದೊಳ್—

ಮ॥ ಮಸಿಯಿಂದಂ ಜಗಮೆಲ್ಲಮಂ ದಿತಿಸುತಂ ಮುಂ ಪೂಟ್ದನೋ ಕಾಲಮೇ।
ಘ ಸಮೂಹಂ ದೆಸೆಯೆಲ್ಲಮಂ ಕವಿದುದೋ ಗಂಧೇಭ ಚರ್ಮಂಗಳಂ॥
ಪಸರಂ ಗೆಯ್ದನೊ ಶಂಭುವೆಂಬ ಬಗೆಯಿಂ ತಳ್ಪೊಯ್ದು ಕಟ್ಪೇಱ ಸೂ।
ಚಿಸಲಾರ್ಗಂ [4][ವಶ]ಮಾಗದಂತು ಕವಿದತ್ತುದ್ದಾಮ ಭೀಮಂ ತಮಂ ॥ ೪೯ ॥

ವ॥ ಆಗಳಾ ತಾರಾಗಣಂಗಳ್ ದಿಶಾವನಿತೆಯರ ಮಕುಟ ಮಾಣಿಕಂಗಳಂತೆನಿ[5]ತು ಬೆಳಗಿಯುಂ ಕಟ್ಟಲೆಯನಲೆಯಲಾಱವಾದುವು ಕನಕ ಪ್ರಾಸಾದ

---

1. ಬಿ (ಸ) ; 2. ಕಾ (ಸ) ; 3. ಡಂ (ಕ.ಖ.) ; 4 ಕರ (ಕ.); 5. ಡು (ಕ.ಖ.).

ಪಜ್ಜ್ಯಿತ್ತಗಳ್ ಪಟಿಪಟಿನೆ ಬೆಳಗುವ ಸೊಡರ್ಗಳನಾದಿತ್ಯನ ನಂಟರೆಂದು ತಮೋರಾಜಕಂ ಮುಳಿದು ಸೆಱೆಗೆ[1]ಯ್ದ ಬೆಳಗಿನ ಸೆಱೆಯು ಮನೆಗಳನ್ನವಾದುವು ಮದಗಜ ಗಂಡಸ್ಥಳಂಗಳೊಳೆಱಗಿ ಮೊರೆವ ತುಂಬಿಯ ಬಂಬಲ್ಗಳ್ ವಿಮುಖೀಭೂತಂಗಳಾದುವು ತಂಡತಂಡದೋಲಗಕ್ಕೆ ಪುಗುವ ಪೊಱಮಡುವ ವಾರವಿಳಾಸಿನಿಯರ ನೂಪುರಂಗಳ ರವಂಗಳೊಳ್ ನೃಪಭವನೋಪವನ ದೀರ್ಘಿಕಾಹಂಸಕುಳಂಗಳ್ ತಳವೆಳಗಾದುವು ರಾಜಹಂಸ ಪಾರಾವತ ಮಿಥುನಂಗಳುತ್ತುಂಗ ಪ್ರಾಸಾದಶಿಖರ ಮಣಿಗವಾಕ್ಷಾಂತರಾಳ ವಿವಿಧ ಗೃಹಾಂತರಗತಂಗಳಾದುವು ಉದಯಗಿರಿ ಕಟಕ ಕುಹರ ಪರಿಕರ[2][ನಿಶಾಕರಂ] ಹರಿ[ದ]ಳಿತ ನಿಜ ಹರಿಣ ರು[ಧಿ]ರ ನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ—

ಮ॥ ನೆರೆದೈ ಸಂಜೆಯೊಳೆಂದು ಕಾಯ್ದೊದೆದೊಡೇನಾತ್ಮಾಂಗದೊಳ್ ರೋಹಿಣೀ।
ಚರಣಾಲಕ್ತಕ ರಾಗಮಚ್ಚಿಱಿದುದೋ ಮೇಣ್ [3]ಕಾಮಿಗಳ್ಗೀವ ರಾ॥
ಗರಸಂ ಪೊಣ್ಮಿದುದೋ ತಮೋಗಜದ ಕೋಡೇಱಿಂದಮೇಂ ನೊಂದುದೋ।
ಹರಿಣಂ ತಾನೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ॥ ೫೦ ॥

ವ॥ ಆಗಳ್ ತನ್ನ ರಾಗಮುಂ ರಾಗಿಗಳ್ಗೆಲ್ಲಂ ಪಚ್ಚುಕೊಟ್ಟಂತೆ ಕೆಂಪು ಪತ್ತುವಿಟ್ಟಾಗಳ್–

ಮ॥ ಮುನಿದೀಶಂ ತವೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ।
ನಿನಗೆಂದಾ [4][ರ]ತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮ॥
ಜ್ಜನಕೆಂದೆತ್ತಿದ ಚಂದ್ರಕಾಂತ ಘಟದೊಳ್ ತಂದಟ್ಟಿಯಿಂ ಪುಷ್ಪ ವಾ।
ಸನೆಗೆಂದಿಕ್ಕಿದ ನೀಳ ನೀರರುಹಮುಂ ಪೋಲ್ದತ್ತು ಕಟ್ಪಿಂದುವಾ ॥ ೫೧ ॥

ಕಂ॥ ಆವರಿಸಿತ್ತೊ ನಭೋಂತ।
ರ್ಭೂವಿವರಮುನಮುರ್ದಿನೆಸಕಮೆನೆ ವಿರಹಿಗ[5]ಳೋ॥
ವೋವಿದು ಮದನನ ಸೋದನ।
ದೀವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ ॥ ೫೨ ॥

ವ॥ ಅಂತು ಸೊಗಯಿಸುವಚ್ಚ ಬೆಳ್ದಿಂಗಳೊಳ್ ಸುಧಾಧವಳಿತೋತ್ತುಂಗ ರಮ್ಯ ಹರ್ಮ್ಯದೆರಡನೆಯ ನೆಲೆಯ ಚೌಪಳಿಗೆಯ ಮುಂದಣ ರಮ್ಯ ಹರ್ಮ್ಯಾಗ್ರದೊಳ್ ಸಿರಿ[6]ಯೋಲಗಂಗೊಟ್ಟು ವಿನೋದಂಗಳೊಳ್ ವಿಕ್ರಮಾರ್ಜುನಂ ಬೆರಸು–

1. ಯ್ದು. (ಕ. ಖ. ಗ.); 2. ನಿಕರ ಹರಿತ ನಿಜ ಹರಿಣ ಗಳಿತ ನಖರುಚಿ (ಕ.); 3. ಯಾಮಿನೀ ಕಾಮಿನೀ। ವಿರಹಂ(ಕ.), ಕಾಮಿನಿಗಳ್ದಿಪಾರಾಗಂ (ಗ.); 4. ದ(ಸ.); 5. ಳೊ। ಳ್ದು (ಗ.), ಳೊಳ್। ತೀವಿದು (ಘ.); 6. ಯ ಕೂರ್ಪಂ (ಕ.), ಯೊ ರೂಪಂ (ಖ.)

ಕಂ॥ ಆಗಳನಂತ[1]ನ[ನಂತ]ಫ।
ಣಾ ಗಣ ಮಣಿ ಕಿರಣಮೆಸೆಯೆ ದುಗ್ಧಾರ್ಣವದೊಳ್॥
ರಾಗದಿನಿರ್ಪಂತಿರ್ದಂ।
ಭೋಗಿ ತಟಿತ್ತುಱಿಸಿ ಬೆಳಗೆ ಕೆಯ್ದೀವಿಗೆಗಳ್ ॥ ೫೩ ॥

ವ॥ ಆಗಳ್—

ಕಂ॥ ಅತ್ತ ಸುಭದ್ರೆಯುಮೊಡಲುರಿ।
ಯುತ್ತಿರೆ ಮರವಟ್ಟು ವಿಜಯನಿರ್ದತ್ತಲೆ ನೋ ॥
ಡುತ್ತಿರೆ ಸುಸಾಳಭಂಜಿಕೆ।
ಗೆತ್ತುದು ಕೆಳದಿಯರ ತಂಡಮಾಕೆಯ ರೂಪಂ ॥ ೫೪ ॥

ಕನ್ನೆತನಂ[2]ಗೆಯ್ಯಲ್ ಬಗೆ।
[3]ಗುನ್ನಾಣ್ ಮಿಗೆ ಮನಮುಮಿಟ್ಟುವರಿಯಲ್ ಬಗೆಗುಂ॥
ಕನ್ನಡಿಕುಂ ತನ್ನಳಿಪಂ।
ತನ್ನಲೆ ತಾನಿಂತು ಕನ್ನೆ ತಳವೆಳಗಾದಳ್ ॥ ೫೫ ॥

ನುಡಿಯಿಸಿ ಕೇಳ್ಗುಂ ಹರಿಗನ ।
ಪಡೆಮಾತನೆ ಮಾತು ತಪ್ಪೊಡಂ ಮತ್ತಮದಂ॥
ನುಡಿಯಿಸುಗುಂ ಮೊದಲಿಂದಾ।
ನುಡಿ ಪಱಿಪಡೆ ಮುಳಿದು ನೋಡುಗುಂ ಕೆಳದಿಯರಂ ॥ ೫೬ ॥

ಅ[4]ಱ ಮರುಳಂತುಟೆ ಸೊರ್ಕಿನ ।
ತೆಱದಂತುಟೆ ಮನಮೊಱಲ್ವುದೆರ್ದೆಯುರಿವುದು ಮೆ ॥
[5]ಯ್ಯೆಱಗುವುದು ಪದೆವುದಾ[6]ನಿದ ।
ನಱಿಯೆನಿದೇಕೆಂದು ಕನ್ನೆ ತಳವೆಳಗಾದಳ್ ॥ ೫೭ ॥

ಉ॥ ಆನೆಯನೇಱ ಸೌಷ್ಠವದೆ ಬರ್ಪರಿಕೇಸರಿಯೊಂದು ಗಾಡಿಯು।
ದ್ದಾನಿ ತಗುಳ್ದು ಕಣ್ಗೊಳೆ ತೊಟಿಲ್ದೆರ್ದೆಯೊಳ್ ತಡಮಾಡೆ ಬೇಟದು ॥
ದ್ದಾನಿಯನಾನೆ ಮನ್ಮಥ ಮಹೀಭುಜನೋವದೆ ತೋಱಕೊಟ್ಟುದೊಂ ।
ದಾನೆಯೆ ತನ್ನನಾನೆಗೊಲೆ[7]ಗೊ[ಂ]ದಪುದೆಂದು ಲತಾಂಗಿ ಬೆರ್ಚಿದಳ್ ॥೫೮॥

---

1. ತನ್ನ (ಸ.); 2. ಬಗೆಯ (ಫ.); 3. ದುನ್ನಾ (ಕ.ಖ.); 4. ಱತಿ (ಕ.); 5. ಯ್ಮಱು (ಕ.ಖ.ಗ.); 6. ನಱ। ದ (ಕ.), ಗಱ। ದ (ಗ.); 7. ಕೊ (ಸ.).

ಮ॥ ಮನವಾರಾಧಿತ ಹೋಮ ಭೂಮಿ ಪಶುಗಳ್ ಕಾಮಾತುರರ್ ಬಂದ ಮಾ।
ವನಿತುಂ ಸ್ಥಾಪಿತ ಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ ಚಂ॥
ದನ ಕರ್ಪೂರ ಮೃಣಾಳನಾಳಮೆ ಪೊದಳ್ದಿಧ್ಮಂಗಳಿಂತಾಗೆ ತಾ।
ನಿನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ವಂಗಿ ಬೆಳ್ದಿಂಗಳೊಳ್ ॥೫೯॥

ವ॥ ಅಂತು ಕಾಮದೇವನೆಂಬ ಮಂತ್ರವಾದಿಯ ದಿವ್ಯ ಮಂತ್ರದಿಂ ಸ್ತೋಭಂಗೊಂಡ ದಿವ್ಯ ಗ್ರಹದಂತೆ ಕಾಮಗ್ರಹ ಗೃಹೀತೆಯಾಗಿರೆ [1][ಮನೋವ್ಯೈ]ಕಲ್ಯರೋಮಾಂಚಕಸ್ತಂಭಕ ಕಂಪ[ಸ್ವೇದವೈವರ್ಣ್ಯ] ಸಂತಾಪಾನಾಹಾರ ವ್ಯಾಮೋಹ ಗದ್ಗದಾಶ್ರು ಮೋಕ್ಷ ಮೂರ್ಛಾದಿ ನಾನಾ ವಿಕಾರಂಗಳನೊಡನೊಡನೆ ತೋಱುವುದುಮಾಕೆಯ ದಾದಿಯ ಮಗಳ್ ಚೂತಲತಿಕೆಯೆಂಬಳ್ ಕಂಡು—

*ಚಂ॥ ಪದೆವೆರ್ದೆ ಬತ್ತೆ ಕೆತ್ತುವಧರಂ ದೆಸೆಗೆಟ್ಟಲರ್ಗಣ್ಣ ನೋಟಮು।
ಣ್ಮಿದ ಬೆಮರೋಳಿವಟ್ಟ ನಿಡುಸುಯ್ ತೊದಳಿಂಗೆಡೆಗೊಂಡ ಮಾತು ಕುಂ॥
ದಿದ ಲತಿಕಾಂಗಮೊಂದಿದ ವಿಕಾರಮದೀಕೆಯೊಳೀಗಳಾದುದಿಂ।
ತಿದು ಕುಸುಮಾಸ್ತ್ರನೆಂಬ[2]ದಟನಿಕ್ಕಿದ ಸೊರ್ಕಿನ ಗೊಡ್ಡಮಾಗದೇ ॥೬೦॥

ವ॥ ಎಂದು ತನ್ನೊಳೆ ಬಗೆದು ಮತ್ತಮಿಂತೆಂದಳ್—

ಚಂ॥ ಕಱಯಲರಾದ ಸಂಪಗೆಯ ಬಣ್ಣದವೋಲೆ ಬೆಳರ್ತ ಬಣ್ಣದೊಳ್।
ಗಱಯಿಸೆ ಕೆಂಪು ಕಣ್ಗಳ ಮೊದಲ್ಗಳೊಳೊಯ್ಯನೆ ತೋ[3][ಱ[3]] ಬಾಡಿ ಪಾ॥
ಡೞದು ಬೞಲ್ದು ಜೋಲ್ದಿರವು ಮೆಯ್ಯೊಳೆ ಮೆಯ್ವಿಡಿದೆನ್ನ ಕಣ್ಗಳೊಳ್।
ಸುೞದುವು [4]ತಾಮೆ ಕನ್ನಡಿಸಿ[5]ದಪ್ಪುವು ಕನ್ನೆಯ ಕನ್ನೆವೇಟಮಂ ॥೬೧॥

ವ॥ ಅದಱನೀಕೆಯ ಬಗೆಯನಱಯಲ್ವೇೞ್ಕುಮೆಂದು ಮೆಲ್ಲಮೆಲ್ಲನೆ ಕೆಲಕ್ಕೆವಂದು ಕುಂಚದಡಪದ ಡವಕೆಯ ಪರಿಚಾರಿಕೆಯರೆಲ್ಲರುಮಂ ಕಣ್ಗೆತ್ತಿ ಕಳಿದೇಕಾಂತದೊಳ್ ಕನ್ನೆಯನಿಂತೆಂದಳ್—

ಚಂ॥ ಮೃಗಮದ ಪತ್ರರೇಖೆಗಳನೇಕೆಗೆ ತಾ[6]ಳ್ದಿರ[7][ದಾದು]ವೀ ಕದಂ।
ಪುಗಳುರಮೇಕೆ ಹಾರ ಮಣಿ ಮಂಜರಿಯಿಲ್ಲದೆ ಬಿನ್ನಗಿರ್ದುದೀ।
ಜಗನಮಿದೇಕೆ ಹೇಮ ರಶನಾ ಧ್ವನಿಯಿಲ್ಲದೆ ಮೂಗುವಟ್ಟುದೀ।
ಬಗೆಯೊಳಲಕ್ತಕ ದ್ರವದೊಳೊಂದದೆ ನಿಂದುವು ಪಾದಪಂಕಜಂ ॥೬೨॥

---

1. ನೋಡಿ ರೋಮಾಂಚಕ ಸ್ತಂಭನ ಕಂಪ ಚಾಪಳತಾ ಸಂತಾಪನಾಹಾರ (ಕ.), ನೋಟ ಕಲ್ಯ (ಖ.), ನೋಡಿ ಕಲ್ಯ (ಗ), ನೋಟ ಕಲ್ಯ (ಘ.); 2. ರಸ (ಗ.), ರಕ (ಘ.); 3. ಱ (ಸ.); 4. ಕಾಮಮಂನ್ನಡಿಸಿದಪ್ಪುವು (ಘ.); 5. ಬರ್ಪುವು (ಕ. ಖ.); 6. ಳ್ದಿರ (ಖ.), ಳ್ದಿದ (ಗ.), ಳ್ದಿದೊ (ಘ.); 7. ದೊಂದುವೀ (ಕ. ಖ. ಗ.), ವೊಂದುವಿಂ (ಘ.).

ಮ॥ ನಗೆಗಣ್ ಸೋರ್ವ ಕದುಷ್ಣ ವಾರಿಚಯದಿಂ ಬಿಂಬಾಧರಂ ಸುಯ್ಯ ಬೆಂ।
ಕೆಗಳಿಂ ನಾಡೆ ಬೆಡಂಗುಗೆಟ್ಟರವಿ[1]ದಿಂತೇಕಾರಣಂ ಮಜ್ಜನಂ॥
ಬುಗದಾರೋಗಿಸಲೊಲ್ಲದಿರ್ಪಿರವಿದೇಂ ನಾ[2]ಣಿಳ್ಕಿದೇಂ ಕಾಮನಂ।
ಬುಗಳತ್ತಿತ್ತೆಡೆಯಾಡೆ ಸೋಂ[3]ಕವೆ ವಲಂ ನಿನ್ನಂ ಸರೋಜಾನನೇ ॥ ೬೩ ॥

ವ॥ ಎಂದು ಮುನ್ನಮೆ ಮುಟ್ಟೆ ನುಡಿಯದೆ ಪೊಱಪೊಱಗನೆ ಬಳಸಿ ಕನ್ನೆಯ ಶಂಕೆಯಂ ಕಿಡಿಸಿ ಮತ್ತಮಿಂತೆಂದಳ್—

ಮ॥ ವನಭೃತ್ಕುಂತಳೆಯಾ ಶಿರೀಷ ಕುಸುಮಾಭಾಂಗಕ್ಕೆ ಕಂದಂ ಕನ।
ತ್ಕನಕಾಂಭೋಜನಿಭಾನನಕ್ಕೆ ಪಿರಿದುಂ ದೀನತ್ವಮಂ [4]ನೀಳ್ದ ಮಾ॥
ವಿನ ಪೋಟಿಂದದ ಕಣ್ಗೆ ಬಾಷ್ಪಜಲಮಂ ಚಿತ್ತಕ್ಕೆ ಸಂತಾಪಮಂ।
ನಿನಗಂ ಮಾಡಿದನಾವನಾತನೆ ವಲಂ ಗಂಧೇಭ ವಿದ್ಯಾಧರಂ ॥ ೬೪ ॥

ವ॥ ಎಂದು ತನ್ನ ಮನಮನಱಿದು ಮುಟ್ಟೆ ನುಡಿದ ಕೆಳದಿಯ ನುಡಿಗೆ ಪೆಱತೇನುಮನೆನಲಱಿಯದೆ ನಾಣ್ಚಿ ತಲೆಯಂ ಬಾಗಿ ನೆಲನಂ ಬರೆಯುತ್ತುಂ ನೀರೊಳ್ ಮುಳುಗಿದರಂತುಮ್ಮನೆ ಬೆಮರುತ್ತುಮ್ಮಳಿಕೆ ವಂದು ಬೆಚ್ಚನೆ ಸುಯ್ದೊಡೆ—

ಕಂ॥ ಉಸಿರದಿರೆ ಮನದೊಳಿರ್ದೆಯುಂ।
ಪಸರಿಸುಗುಂ ಮಱುಕಮದಱಿನೆನಗಿಂತುಟಿ ಎಂ॥
ದುಸಿರುಸಿರ್ದೊಡೆ ಬಗೆ ತೀರ್ಗುಂ।
ಬಿಸಿದುಂ ಬೆಟ್ಟಿತ್ತುಮುಸಿರದೇಂ ತೀರ್ದಪುದೇ ॥ ೬೫ ॥

ಪೇೞ[3]ಂಬುದುಮಾ[5][ಂ] ನಿನಗೆಡೆ।
ವೇೞದೆ ಪೇೞಾರ್ಗೆ ಪೇೞ್ವೆನಿಂದಿನ ಬಂದಾ॥
ಕಾೞಾದ ಪಾೞ್ತಿಗೊಂಡೊಡೆ।
ಪಾೞಾದುದು ಮನಮುಮೆರ್ದೆಯುಮೇನಂ ಪೇೞ್ವೆಂ ॥ ೬೬ ॥

ಭೋಂಕನೆ ಮನಮಂ ಕದಡಿ ಕ।
ಲಂಕಿದಪುದು ಬಿಡದೆ ಮನಮ[6]ನೊ[ನಲಿ]ಸಿದಪುದಾ॥
ದಂ ಕೆಳದಿ ಪಾಣ್ಬರಂಕುಸ।
ನಂಕುಸದಾ ಪೊಳಪುಮವನ ಕಣ್ಗಳ ಬೆಳ್ಪಂ ॥ ೬೭ ॥

---

1. ದುಂ (ಕ. ಖ.) ; 2. ನ (ಖ. ಗ. ಘ.) ; 3. ಕುವಬಳಾ (ಖ. ಗ.), ಕುವವೊಲಾ (ಘ.) ; 4. ಸೀ (ಕ.) ; 5. ಮಾನೀಗಡೆ (ಕ.), ಮಾನಿನಿಗೆಡೆ (ಖ. ಘ.) ; 6. ನೂಱೀ (ಕ.), ನೂಲಿಸಿದಪ್ಪುದಿ ॥ ದಂ (ಖ.), ಮಾಲಿಸಿದಪ್ಪುದು ॥ ಮುಂ (ಗ.), ನೂಲಿಸಿದಪುದು ಮಿಂ ॥ ನುಂ (ಘ.).

ಚಂ॥ ಮನಸಿಜನಂಬರಲ್ಪ ಪೊಸ ಮಲ್ಲಿಗೆ ತೆಂಕಣ ಗಾಳಿಯೆಂಬಿವಿಂ ।
ತನುಬಲದಿಂದಮೆನ್ನನಲೆದಪ್ಪುವವೆನ್ನನೆ ಪೆಟ್ಟುವೆ[1][ಚ಼ಿ] ಚಂ ॥
ದ್ರನ ಬಲದಿಂದಮೆನ್ನನಲೆದಪ್ಪುವದರ್ಕೆನಗೀಗಳೊಂದಿ ಚಂ ।
ದ್ರನ ಬಲ[2]ವೊಳ್ಳಿತಾಗಿ ಸಲೆಯಿಲ್ಲದೊಡಾವುದುಮೊಳ್ಳಿಕೆಯ್ಯುಮೇ॥ ೬೮ ॥

ವ॥ ಎಂದು ಮನದ ಮಱುಕಮುಮನೆರ್ದೆಯ ಕು[3][ದಿ]ಪಮುಮಂ ಬಗೆಯ ಕು[4]ಱಿಪಮುಮಂ ಮೆಯ್ಯ ಬಡತನಮುಮನಱಿಯೆ ತೋಱಿ ನುಡಿದೊಡೆ ರಾಜಹಂಸಿ ಮಾನಸ ಸರೋವರಮನಲ್ಲದೆ ಪೆಱತನೇಕೆ ಬಯಸುಗುಂ ಕಳಹಂಸಗಮನೆಯಾ ಸುರತಮಕರಧ್ವಜನನಲ್ಲದೆ ಪೆಱತನೇಕೆ ಬಯಸುಗುಮೆಂದು ಮನದೊಳ್ ಮಂತಣಮಿರ್ದು ಬಗೆಯೊಳ್ ಗುಡಿಗಟ್ಟಿ ಸಂತಸಂಬಟ್ಟಂತೆಂದಳ್—

ಮ॥ ನನೆಯಂಬಂ ತೆಗೆದೆಚ್ಚನಂಗಜನ ತಪ್ಪೇನಾನುಮಂ ತೋಱಿ[3] ಕಾ ।
ಣ್ಬನಿತಂ ಮಾಡದೆ ಪದ್ಮಜಂ ಮದನನಂ ಬೈದಂತುಟೇ ಬೇಡವಿಾ ॥
ಬಿನದಂ ತಪ್ಪಲೆ ಕಲ್ಪಿತಂ ಪರಿಯದಾತಂಗೆಂದು ನಿನ್ನೀ ಮನಂ ।
ನಿನಗಾತಂ ದೊರೆ ನೆಟ್ಟನಾದಿ ಪುರುಷಂ[5][ಗೇ]ಕಕ್ಕ ನೀನ್ನಾಣ್ಬುವೈ॥ ೬೯ ॥

ವ॥ ನೀನಿದರ್ಕೇನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆದಂತೆ ತೀರ್ಚುವೆನೆಂದನೇಕ ಪ್ರಕಾರ ವಚನ ರಚನೆಗಳಿಂದಾಕೆಯ ಮನಮನಾಱಿ[3] ನುಡಿಯುತ್ತಿರ್ಪಿನಮಿತ್ತ ವಿಕ್ರಮಾರ್ಜುನನುಮೋಲಗಂ ಪರೆದಿಂ ಬೞಿಯಂ ತನ್ನ ಪವಡಿಸುವ ಮಾಡಕ್ಕೊಡನೊಡನೋಲಗಿಸುತ್ತುಂ ಬಂದ ಪಂಡಿತರ್ಕಳುಮನುಚಿತ ಪ್ರತಿಪತ್ತಿಗಳಿಂ ವಿಸರ್ಜಿಸಿ ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಣೊಳ್ ತೊಳಲೆ ಕಣ್ಮುಚ್ಚದೆ ತನ್ನ ಜಸದಂತೆ ಪಸರಿಸಿದಚ್ಚವೆಳ್ದಿಂಗಳನಾಕೆಯ ಕಣ್ಗಳ ಬೆಳ್ಪಿನ ತಳರ್ಪೆನುತ್ತುಂ ಪೆಳ್ಪಳಿಸಿ ಚಂದ್ರನಂ ನೋಡಿ*—

ಚಂ॥ ಪ್ರಿಯ ಸತಿಯಾನನೇಂದುವೊಳಮಿಂದುವೊಳಂ ಬಿದಿ ಮುನ್ನಮಾವುದಂ।
ನಯದೊಳ್ ನೋಡಿ ಮಾಡಿದನದಾವುದನೆಂದಱಿಯಲ್ಕೆ ನಾಡೆ ಸಂ॥
ದೆಯಮದು ನೀಳ ನೀರಜ ವನಂಗಳ ಚೆಲ್ವುಗಳೆಂಬಃವಾ ಲತಾಂ।
ಗಿಯ ಕಡೆಗಣ್ಣ ಬೆಳ್ಪುಗಳ ಸಿಲ್ಕಿದ ಸಿಲ್ಕಿನ ಸಿಲ್ಕಿವಲ್ಲವೇ ॥ ೭೦ ॥

---

**೧೦೬ನೆಯ ಪುಟದಲ್ಲಿಯ ೬೦ನೆಯ ಪದ್ಯದಿಂದ ೧೦೮ನೆಯ ಪುಟದಲ್ಲಿಯ ೬೯ನೆಯ ಪದ್ಯವಾದ ಮೇಲೆ ಬರುವ ವಚನದವರೆಗೂ ಹಿಂದಣ ಮುದ್ರಣಗಳಲ್ಲಿಯೂ ಮಾತೃಕೆಗಳಲ್ಲಿಯೂ ಹಿಂದು ಮುಂದಾಗಿ ಬಿದ್ದು ಅರ್ಥಸಾಮಂಜಸ್ಯವಿಲ್ಲದಿದ್ದ ಈ ಭಾಗವನ್ನು ಇಲ್ಲಿ ಅರ್ಥ ಸಮಂಜಸವಾಗುವಂತೆ ಕ್ರಮ ಪಡಿಸಿದೆ. [ಸಂ.]

1. ಟ್ಟಿ (ಸ.) ; 2. ಮಿಲ್ಲದಿನ್ನಿದಱಿೊಳಾವುದುಮೊಳ್ಳಿತೆಯಲ್ಲ ಕೆಯ್ಯುಮೇ (ಕ. ಖ.) 3. ಱಿಪುಮುಮಂ (ಕ. ಗ.), ಡಿಪುಮುಮಂ (ಖ), ಟಿಪುಮುಮಂ (ಘ) ; 4. ಱಿ (ಕ. ಗ.) ; 5. ಗಕ್ಕಕ್ಕ (ಕ.), ದಕ್ಕಕ್ಕ (ಖ. ಗ.), ದೇತತ್ನ (ಘ.).

ವ|| ಅದಲ್ಲದೆಯುಂ—

ಉ|| ಆ ನವ ಮಾಳಿಕಾ ಕುಸುಮ ಕೋಮಳೆ ರಾಗ ರಸ ಪ್ರಪೂರ್ಣಂ ಚಂ।
ದ್ರಾನನ ಲಕ್ಷ್ಮಿ[1][ಯಿ]ಂ ನಭದೊಳಿರ್ದಮೃತಾಂಶುವಿನುದ್ಧ ಕಾಂತಿ ಸಂ॥
ತಾನಮನಾವಗಂ ತನಗೆ ಮಾಡಿದಳೆಂದೊಡೆ ತದ್ಗೃಹಾಂತರೋ।
ದ್ಯಾನ ಸರಸ್ಸರೋಜ ರುಚಿಯೆಂಬುದಿದಾಕೆಯ ಕೆಯ್ಯದೆನ್ನಿರೇ ॥ ೭೧ ॥

ವ|| ಎಂದು ತನ್ನ ಮನಮುಮನೆರ್ದೆಯುಮನುಱೆ ಸೆಱೆವಿಡಿದಿರ್ದಪೂರ್ವ ರೂಪೆಯ ರೂಪುಮಂ ಮನದೊಳೆ ಬಗೆದು ಭಾವಿಸಿ ಮತ್ತಮಿಂತೆಂದಂ—

ಚಂ|| ಕುಸುರಿಯ ರೂಪನೆಯ್ದೆ ಪೊಗಟಲ್ಕಱಿಯೆಂ ನಡು ಪುರ್ವು ಬಾಸೆ ಕ।
ಣ್ಗೊಸಗೆಯನುಂಟುಮಾಲ್ಪ ಜಘನಂ ಬೆಳರ್ವಾಯ್ ಮೊಲೆಗಳ್ ಕದಂಪುಗು ॥
ರ್ವಸಿಱನೆ ನೋಡೆ ಮೊಕ್ಕಳಮದಾರ್ ನಡೆ ನೋೞ್ಪೊಡಮಂತುಮಿಂತುಮೂ।
ಱಸಿಯವು ಮೂಱು ದೊಡ್ಡಿದುವು ಮೂಱೆಡೆ ತೆಳ್ಳಿದುವಂಬುಜಾಕ್ಷಿಯಾ ॥ ೭೨ ॥

ಕಂ|| ಮೃಗಶಿಶು ನೇತ್ರೆಯ ನಡುವೆರ್ದೆ।
ಯುಗುರ್ಗಳ್ ಕರ[2][ಮಸಿ][3]ದು ಕನಕ ಕಾಂಚೀ ನಿನದ॥
ಪ್ರಗಣಿತಮಗಲ್ದ ನಲ್ಲಳ।
ಜಗನವಿ[4]ದೆನ್ನೆರ್ದೆಯನೆಂತು ಪೊಕ್ಕಳಿಪುವು[5]ದೋ ॥ ೭೩ ॥

ವ|| ಎಂದು ಸೈರಿಸದೆ—

ಮ|| ಮೊಲೆಗಳ್ ಬಟ್ಟಿದುವಾಗಿ ಕರ್ಗಿದ ಕುರುಳ್ ಕೊಂಕಾಗಿ ಕಣ್ಗೆಯ್ದೆ ನೀ।
ಳ್ದಲರ್ಗಣ್ಗಳ್ ಚಪಳಂಗಳಾಗಿ ಜಘನಂ ಕಾಂಚೀ ಕಳಾಪ ಪ್ರಭೋ॥
ಜ್ಜ್ವಲಮುದ್ವೃತ್ತಮುಮಾಗಿ [6]ತಾ[ಮ]ಲೆಗೆ ಮಧ್ಯಸ್ಥಂಗಳಾಗಿರ್ದುವ।
ಕ್ಕ[7]ಲೆಯಲ್ ತಕ್ಕುದೆ ಕೆನ್ನಮಾ ತ್ರಿವಳಿಗ[8]ಳ್ಗಿನ್ನಂ ಸರೋಜಾಕ್ಷಿಯಾ ॥ ೭೪ ॥

ವ|| ಎಂದು ಕಿಱಿದುಂ ಬೇಗಮುಱಿಮುರುಳಂತು ಪಲುಂಬಿ ಪಂಬಲಿಸಿ ಮತ್ತಮಾಕೆಯ ಹಾವ ಭಾವ ವಿಳಾಸ ವಿಭ್ರಮ ಕಟಾಕ್ಷೇಕ್ಷಣಂಗಳ್ ಮನಮ[9]ನೊನಲಿಸೆಯುಮೆರ್ದೆಯಂ ಕನಲಿಸೆಯುಮನಂಗ ಮತಂಗಜ ಕೋಳಾಹಳಾಕುಳೀಕೃತಾಂತರಂಗನಾಗಿ—

1. ಯಂ (ಸ.); 2. ಮೆಸೆ (ಸ.); 3. ವ (ಕ.); 4. ವೆ (ಕ.); 5. ವೋ (ಕ.); 6. ತಾಂಮೊ (ಕ.), ತಾಮೊ (ಖ. ಗ. ಘ.); 7. ಲಲ್ (ಕ. ಖ. ಗ.), ಲತ್ತ (ಘ.); 8. ಳ್ಗೀನಂ (ಕ.), ಳ್ಗೀವಂ (ಗ. ಘ.); 9. ನೊಲಿಸೆಯು (ಕ.), ನೊವರಿಸಿಯು (ಖ.). ನೊಲಿಯಿಸಿತು (ಗ.).

ಮ॥ ಜಗಮುಂ ಮಾಡಿದ ಪದ್ಮಜಂ ಪಡೆದನಿಲ್ಲೀ ಕನ್ನೆಯುಂ ಮಾಡುವ।
ಲ್ಲಿಗೆ ಚಂದ್ರಂ ಮಳಯಾನಿಳಂ ಮಳಯಜಂ ನೀರೇಜಮಿಮ್ಮಾವು ಮ॥
ಲ್ಲಿಗೆಯೆಂದಿಂತಿವನಟ್ಟುಱಿಂದಮರ್ದಿನೊಳ್ ತಾನಟ್ಟಿಯಿಂ ತೊಯ್ದು ಮೆ।
ಲ್ಲಗೆ ಸಂದಂಗಜನೆಂಬಜಂ ಪಡೆದನಂತಾ [1]ಕಾಂತಿಯಿಂ ಕಾಂತೆಯಂ॥ ೭೫॥

ವ॥ ಅಂ[2]ತಲ್ತಪ್ಪಂದಾ ಕಾಂತೆಯಂ ವಿಧಾತ್ರಂ ಮಾಡುವಂದು ಕೊಸಗಿನ ಕೇಸರಂಗಳನಮೃತ ರಸದೊಳಂ ಶೃಂಗಾರ ರಸದೊಳಂ ಭಾವಿಸಿ ರಸ ಸಿದ್ಧಮಪ್ಪ ಪೊನ್ನಲತೆಯ ಮೆಯ್ಯುಮಂ ನೀಲದ ತಲೆ ನವಿರುಮಂ ಪವಳದ ಬಾಯ್ದೆಱೆ[3]ಯುಮಂ ಮುತ್ತಿನ ಪಲ್ಲುಮಂ ರಾಜಾವರ್ತದ ಸೆಳ್ಳುಗುರುಮಂ ಧೂಪದ ಸುಯ್ಯುಮಂ ರತಿಯ ಸೌಭಾಗ್ಯಮುಮಂ ಸೀತೆಯ ಸೈರಣೆಯುಮನದ್ರಿಜಾತೆಯ ಶೃಂಗಾರ ಮುಮಂ ಮನೋಮಥನ ಮದನ ಮೋಹನ ಸಂತಾಪನ ವಶೀಕರಣಂಗಳೆಂಬ ಕಾಮದೇವನಯ್ದಲರಂಬಿನ ಶಕ್ತಿಗಳುಮನೊಂದುಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಮೆಂದು ಮತ್ತಮಾಕೆಯ ನೋಡಿದ ನೋಟಮುಂ ಭಾವಿಸಿ—

ಚಂ॥ ನೆಱೆ[3]ಗೊಳೆ ಗಾಡಿ ನೋಟ್ಪ ಬಗೆ ಬರ್ಪುದುಮಾನೆ ದ[3][ಲ]ಂದು ದಂತಿಯಂ।
ನಿಱಿಸಿ ಮರಲ್ದು ನೋಡುವುದುಮೆನ್ನುಮನಾ ಸತಿ ಸೋಲದತ್ತ ಮ॥
ತ್ತೆಱಗಿ ಬಟಲ್ದು ಜೋಲ್ದಳಿಪಿ ನೋಡಿದಳಿಂತೆಲೆ ಸತ್ತ ಪೊತ್ತ ಕ।
ಣ್ಣಱಿಯದ ಬೆಳ್ಳನಲ್ಲೆನಱಿದೆಂ ಧವಳಾಕ್ಷಿಯ ನೋಟದಂದಮಂ ॥ ೭೬॥

ಹರಿಣೀಪ್ಲುತ॥ ದಳಿತ ಕಮಲಚ್ಛಾಯಾಟೋಪಂ ಮನೋಜ ರಸ ಪ್ರಭಾ।
ವಳಯ ನಿಳಯಂ ಪ್ರೋದ್ಯದ್ಭ್ರೂ ವಿಭ್ರಮಂ ಮುಕುಳೀಕೃತಂ॥
ಲಳಿತ ಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂ।
ದಳಿತಮುಪಸನ್ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ ॥ ೭೭॥

ಚಂ॥ ಉಡಮೊಗಮೆಂಬ ತಾವರೆಯ ನೀಳ್ದೆಸಟಿ[3]ೊಳ್ ಮಱಿದುಂಬಿ ಪಾಯ್ದೊಡಂ।
ಬಡನೊಳಕೊಂಡು ಕಣ್ಮಲರ ಬೆಳ್ಪುಗಳಾಲಿಯ ಕಟ್ಟಿನೊಳ್ ಪೊದ॥
ಳ್ದೊಡನೊಡನೋಡುವಟ್ಟಿನಗೆ ಸಂತಸಮುಂ ಮಱುಕಕ್ಕೆ ಮಾಣ್ದೊಡೀ।
ನಡೆಗಿಡೆ ಸತ್ವ[4]ಮುಂ ತಮಮುಮಂ ಕಡೆಗಣ್ಣೊಳೆ ಕಂಡೆನೋಪಳಾ ॥ ೭೮॥

---

[1]. ಕಾಂತೆಗೀ ಕಾಂತೆಯಂ (ಕ. ಖ. ಗ. ಘ.); [2]. ಅಂತು ತಪ್ಪದಾ (ಕ.), ಅಂತಲು ತಪ್ಪದಾ (ಖ.ಗ.); [3]. ಲೆ (ಸ.); [4]. ಮುಂ (ಕ. ಗ.).

ಚಂ|| ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇಟಿಪ್ಪೊಡೆನ್ನ ಮೇ |
ಳದ ಕೆಳೆಯರ್ಕಳಿಲ್ಲವ[1]ಳುಮಪ್ಪೊಡೆ ಜವ್ವನ ಮ[2][ತ್ತೆ] ನಾಣ ಕಾ ||
ಪದು ಪಿರಿದೋತು ಮಾತಡಕಲೊಂದಿದ ದೂದವರಿಲ್ಲ ನೆಟ್ಟನ |
ಪ್ಪುದಱಿನದಿಂತರಣ್ಯ[3]ರುದಿತಂ ಮಲವೆನ್ನೊಲವಿಂದುವಕ್ತ್ರೆ[4]ಯಾ || ೭೯ ||

ವ|| ಎಂದಿಂತು ನಲ್ಲಳಂ ನೆನೆದು ಕಣ್ಗಾಪನೆ ಕಾದು ಚಿಂತಾ ಸಮುದ್ಭ್ರಾಂತರ ಪರಿವೃತನಾಗಿ ಸೈರಿಸಲಾಱದೆ ಪೊಱಲಂ ತೊಱಲ್ದು ನೋೞ್ಪ ಬಗೆದಂದು ರಾಜ ಮಂದಿರದಿಂ ಪೊಱಮಟ್ಟು ಬರೆ ತನ್ನಂ ಕಾಣಲೊಡಮುಱಿದು ನುಡಿಯಿಸಿ ಮೆಚ್ಚಿ ಮೇಳದ ನಾಗರಿಕ ವಿಟ ವಿದೂಷಕ ಪೀಠಮರ್ದಕರ್ಕಳ್ವೆರಸು ಕಾಮದೇವನೋಲ ಗಕ್ಕೆ ಬರ್ಪಂತೆ ಸೂಳೆಗೇರಿಯೊಳಗನೆ ಬರ್ಪುದುಮಲ್ಲಿ—

ಮ|| ಮೃಗಭೂ[5]ಮುದ್ಧ ವಿಳಾಸಿನೀ ಕಬರಿಕಾ ಬಂಧಂಗಳಂ ಪೊತ್ತು ಮ |
ಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ[6]ರತಿ ಸ್ವೇದ ಬಿಂ ||
ದುಗಳೊಳ್ ನಾಂದು ಕುರುಳ್ಗಳೊಳ್ ಸುೞಿದು ಮುಂದೊಂದಿರ್ದ ಸೌಭಾಗ್ಯ ಘಂ |
ಟಿಗಳೊಂದಿಂಚರದೊಳ್ ಪಳಂಚಿ ಸುೞಿದತ್ತಂದೊಂದು ಮಂದಾನಿಳಂ || ೮೦ ||

ವ|| ಆಗಳಾಱುಂ ಋತುಗಳ ಪೂಗಳನೊಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದೋಜನ ಸಾಲೆಯಿರ್ಪಂತಿರ್ದ ಪೂವಿನ ಸಂತೆ ಯೊಳ್ ವಸಂತ ಕಾಂತೆಯರಂತೆ—

ಉ|| ಎತ್ತಿದ ತೋಳ ಮೊತ್ತಮೊದಲಂಗಜ[7][ಲಂ]ಪಟ ವಿದ್ದೆಗೆತ್ತಿದಂ |
ತೆತ್ತಮಪೂರ್ವಮಾಗೆ ಪೊಸ ಮಾಸಿಗಮಂಗಜ ಚಕ್ರವರ್ತಿಗೆಂ ||
ದೆತ್ತಿದ ಮೀನಕೇತನಮನೊತ್ತರಿಸುತ್ತಿರೆ ಚಲ್ಲವಾಡಿ ಪೂ |
ವೆತ್ತುವ ಮಾಲೆಗಾರ್ತಿಯರನಂದರಿಕೇಸರಿ ನಿಂದು ನೋಡಿದಂ || ೮೧ ||

ವ|| ನೋಡಿ ನಾಡಾಡಿಯಲ್ಲದಾಕೆಗಳ ಜೋಡೆ ಗೆಯ್ತಂಗಳಂ ಕಂಡಿದು ಮನೆ ಯಾಣ್ಮನಂ ಮಾರುವಂದಮಲ್ಲದೆ ಪೂ ಮಾರುವಂದಮಲ್ತೆಂದು ಮುಗುಳ್ನಗೆ ನಗುತುಂ ಬರ್ಪನೊಂದೆಡೆಯೊಳ್ ಮನೆಯಾಣ್ಮನ ಕಣ್ಣೆಮೆಯೆ ಕಾಂಡಪಟಮಾಗೆ ಯುಂ [8][ಬಗೆ]ಯಾಣ್ಮನ ಕಣ್ಣೆಮೆಯೆ ದೂದವಿಯಾಗೆಯುಂ ಬಗೆದೆಡೆಯನೆಯ್ದಿ ಬಗೆದ ಬಗೆಯಂ ಬಗೆದಂತೆ ತೀರ್ಚಿ ಪೋಪ ಜೋಡೆಯರಂ ಕಂಡು ವಿಕ್ರಮಾರ್ಜುನನಿಂತೆಂದಂ—

---

1. ಳ್ ಮಪ್ಪೆಡ (ಖ.), ಳಮಪ್ಪೊಡ (ಗ.), ಳಮಪೆಡ (ಘ.); 2. ತ್ತ (ಸ.); 3. ಮಥಿಕಂ (ಕ.), ಮದಿತಂ (ಖ.ಘ.), ಮದಿಕಂ (ಗ.); 4. ಯಂ (ಸ.); 5. ವೃ (ಖ. ಗ. ಘ.); 6. ತ (ಕ.) ಲಸತ್ (ಘ.); 7. ನಂ (ಸ.); 8. ಮನೆ (ಸ.).

ಮ॥ ಕುಱುಪಂ ಪುರ್ವಿನ ಜರ್ವೆ ತೋಱೆ ಬಗೆಯಂ ಕಣ್ಸನ್ನೆಗಳ್ ಪೇೞೆ ತ।
ನ್ನೆಱಕಂ ತನ್ನ ಮನಕ್ಕೆ ಕೂಡೆ ಕೆಲ[1]ಕಂ ಗಂಡಂಗವೊಳ್ಪಂ ಕರಂ॥
ಮೆಱೆವಾ ಪ್ರೌಢೆಯೆ ಜೋಡೆಯಕ್ಕುಮೆಡೆಯೊಳ್ ದೂಂಟೆಂದೆ ದೂಂಟೆಂಗೆ ಪೆ।
ರ್ವಱೆಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪಾಕೆಯೇಂ ಜೋಡೆಯೇ
॥ ೮೨ ॥

ಉ॥ ಕೂರಿದುವಪ್ಪ ಕಣ್ಮಲರ್ಗಳಳ್ಕೆರ್ದೆಯೊಳ್ ತಡಮಾಡೆ ತಾಮೆ ಕಣ್।
ಪೇರಿಸೆ ಪುರ್ವು ನಾಲಗೆವೊಲಾಗೆ ಮನಂಬುಗಿಸಲ್ಕೆ ಬಲ್ಲೊಡಾ॥
ಜಾರೆಯೆ ಜಾರೆ ಪಾಱೆನೆ ಕರಂ ಪಿರಿದುಂ ಗೞಪುತ್ತುಮಿರ್ಪಳಂ।
ಸಾರಿಕೆಯೆಂಬರಲ್ಲದಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್ ॥ ೮೩ ॥

ವ॥ ಎಂದು ಪಾಣ್ಬರಂಕುಸನಾ ಪಾಣ್ಬೆಯರ ಗೆಯ್ವ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ತು ಗೊಡ್ಡಂಗಳುಮಂ ಕಂಡು ಚೋದ್ಯಂಬಟ್ಟು—

ಮ॥ ಅಲರ್ಗಣ್ಣೊಳ್ ಸ್ಮರನಿರ್ದನಕ್ಕುಮೆಡೆವೋಪಾ ಜೋಡೆ ಕಾಮಂಗೆ ಕಾ।
ದಲೆಯಕ್ಕುಂ ಪೆಱತೇನೊ [2]ಪಾರದರದೊಳ್ ಸಂಸಾರ ಸರ್ವಸ್ವಮಂ॥
ಗೆಲೆವಂದಿಂಪಿನಲಂಪನಾಳ್ದ ಸವಿಯುಂಟಕ್ಕುಂ ಸಮಂತಾವಗಂ।
ತಲೆಯುಂ ಮೂಗುಮನೊತ್ತಿಯಿಟ್ಟು ನೆರೆವಂತುಂತೇನವರ್ ಗಾಂಪರೇ
॥ ೮೪ ॥

ವ॥ ಎನುತ್ತುಂ ಬರ್ಪನೊಂದೆಡೆಯೊಳ್ ಮನಸಿಜನ ನಡಪಿದ ಜಂಗಮ ಲತೆಗಳಂತೆ ಮನೋಜನ ಕಾಪಿನ ಕಲ್ಪಲತೆಗಳಂತೆ ಮನೋಜನೆಂಬ ದೀವಗಾಱನ ಪುಲ್ಲೆಗಳಂತೆ ತಂತಮ್ಮ ಮನೆಯ ಮುಂದಣ ಪಚ್ಚೆಯ ಜಗಲಿಗಳೊಳಂ ಮಣಿಮಯ ಮತ್ತವಾರಣಂಗಳೊಳಮಳವಿಗ[3]ೞದ ವಿಳಾಸಂಗಳೊಳಂ ತಂಡ ತಂಡದೆ ನೆರೆದಿರ್ದ ಪೆಂಡವಾಸದೊಳ್ಪೆಂಡಿರಂ ಕಂಡು—

ಚಂ॥ ಮನಸಿಜನೀಕೆಗಂಡು ರತಿಯಂ ಬಿಸುಟಂ ಹರನೀಕೆಗಂಡು ನೂ।
ತನ ಗಿರಿಜಾತೆಯಂ ತೊಱೆದನಾ ನರಕಾಂತಕನೀಕೆಗಂಡು ತೋ॥
ಟ್ಟನೆ ನಿಜಲಕ್ಷ್ಮಿಯುಂ ಮಱೆದನೆಂಬ ನೆಗೞ್ತೆಯನಪ್ಪುಕೆಯ್ದು ಜ।
ವ್ವನದ ವಿಳಾಸದಂದದ ಬೆಡಂಗಿನ ಪೆಂಡಿರೆ ಪೆಂಡಿರಲ್ಲಿಯಾ ॥ ೮೫ ॥

ತಿಸರಮಿದಾವುದಕ್ಕ ಧರಣೇಂದ್ರನ ಕೊಟ್ಟುದು ವಜ್ರದಾಳಿ ಕ।
ಣ್ಗೆಸೆವುದಿದಾವುದೊಲ್ಲದುೞೆದಟ್ಟಿದೊಡಂದು ಕುಬೇರನಿತ್ತುದೆ॥
ಕ್ಕಸರಮಿದಾವುದಾಂ ಮುಳಿಯೆ ಕಾಳ್ವಿಡಿದಿಂದ್ರನ ಕೊಟ್ಟುದಲ್ತೆ ಪೋ।
ಪುಸಿಯುದಿಗೆಂಬ ಸೂಳೆಯರೆ ಸೂಳೆಯರಲ್ಲಿಯ ಪೆಂಡವಾಸ[4]ದಾ ॥ ೮೬ ॥

1. ನಂ ಕಂ (ಕ.), ನಂಗಂ (ಖ.); 2. ಪಾದರದೊಳೊಳ್ಸಂ (ಕ. ಗ.); 3. ೞೆ (ಕ.); 4. ದೊಳ್ (ಕ.ಗ.).

ವ॥ ಎಂಬುದುಂ ಕೇಳುತ್ತುಂ ಬರೆವರೆ ಮತ್ತಮಾ ಪೆಂಡವಾಸಗೇರಿಯೊಳಗೆ ಸೌಭಾಗ್ಯದ ಭೋಗದ ಚಾಗದ ರೂಪುಗಳ್ ಮಾನಸ ರೂಪಾದಂತೆ—

ಉ॥ ಸೀಗುರಿ [1]ಚಾಪಿ ನಾಣ್ಬುಣಿದು ಮೆಟ್ಟುವ [2]ಗುಜ್ಜರಿಗಟ್ಟಿ ಬೀರಮುಂ।
ಚಾಗದ ಪೆಂಪುಮಂ ಪೊಗಟ್ವ ಸಂಗಡವರ್ಪವರೊಳ್ಪಿನಿಂದೆ ಮೆ॥
ಯ್ಯೋಗಮುಳುಂಬಮಪ್ಪ ಬಿಯಮಾಗೆರ್ದೆಗಂ ಬರೆ ಬರ್ಪ ಪಾಂಗಗು।
ರ್ವಾಗಿರೆ ಚೆಲ್ವನಾಯ್ತುರಬೊಜಂಗರ ಲೀಲೆ ಸುರೇಂದ್ರ ಲೀಲೆಯಿಂ ॥೮೭॥

ವ॥ ಮತ್ತಮಲ್ಲಿ ಕೋಟೆ ಪೊಂಗೆ ಘಂಟೆಯಲುಗುವ ಕಿಱುಕುಳ ಬೊಜಂಗರುಮಂ ಸುಣ್ಣದೆಲೆಯನೊತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮನೊತ್ತೆವಿಡಿಸಲಟ್ಟುವ [3]ಚಿಕ್ಕ ಪೋರ್ಕುಳಿ ಬೊಜಂಗರುಮಂ [4]ಕತ್ತುರಿ ಬಿಯಮಂ ಮೆಱೆದು ಕತ್ತುರಿಯೊಳ್ ಪೂೞ್ದು ಕತ್ತುರಿ ಮಿಗದಂತಿರ್ಪ ಕತ್ತುರಿ ಬೊಜಂಗರುಮಂ ನೋಡಿ ಪೊಲಿಲ ಬೊಜಂಗರ [5]ಬಿಯದಳವಿಗೆ ಮನದೊಳ್ ಮೆಚ್ಚುತ್ತುಂ ಬರ್ಪನೊಂದೆಡೆಯೊಳ್ [6]ಕಳ್ಳೊಳಮುಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರು ಮೊಳ್ಪೆಂಡಿರೊಂದೆಡೆಯೊಳಿರ್ದು ಕಾಮದೇವನೆಂಬ ಬಳಮುರ್ದುಕಾಱನ ಮಾಡಿದ ಮರ್ದಿನಂತೆ ಬಳೆದು ದಳಂಬಡೆದು ಮೂನೂಱಱುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ ಮಧುಮಂತ್ರಂಗಳಿಂ ಮಂತ್ರಿಸಿ ನೆಲದೊಳೆಱೆದು ತಲೆಯೊಳ್ ತಳಿದು ಕಳ್ಳೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು ಕಿಱಿಯರ್ ಪಿರಿಯರಱಿದು ಪೊಡವಟ್ಟು ಧರ್ಮಗಳ್ಗುಡಿವರ್ಗೆಲ್ಲಂ ಮಿಾಸಲ್ಗಳ್ಳನೆಱೆದು ಪೊನ್ನ ಬೆಳ್ಳಿಯ ಸಿಪ್ಪುಗಳೊಳ್ ಕಿಱಿ ಕಿಱಿದನೆಱೆದು ಕುಡಿ ಬಿದಿರ ಕುಡಿಯ ಮಾವಿನ ಮಿಡಿಯ ಮಾರು[7]ದಿನ ಮೆಣಸುಗಡಲೆಯ ಪು[8]ಡಿಯೊಳಡಸಿ ದಲ್ಲವಲ್ಲಣಿಗೆಯ [9]ಚಕ್ಕಣಂಗಳಂ ಸವಿಸವಿದು—

ಮ॥ ಮಧು [10]ಸೀತುಂ ಕಟು ಸೀದು ಪೋ ಪುಳಿತ ಕಳ್ಳಲ್ತುಂ ಕರಂ ಕಯ್ತುಬ।
ರ್ಪುದು ಮಾರೀಚಿ ತೊಡರ್ಪುಳಿಂದೆ ಸರ[11]ದಿಂ ಕಂಪಿಲ್ಲ ಸೊ[12]ರ್ಕಿಪ್ಪಲಾ॥
ಱದು ಚಿಂತಾಮಣಿಗೇವುದಕ್ಕ ದಳಮಿಲ್ಲೀ ಕಕ್ಕರಕ್ಕಿಂತುಟ।
ಪ್ಪುದು ಕಳ್ಳಪ್ಪುದು ತಪ್ಪದೆಂದು ಕುಡಿದರ್ ಕಾಮಾಂಗಮುಂ ಕಾಂತೆಯರ್ ॥೮೮॥

1. ಕಾ (ಗ.ಘ.); 2. ವ (ಖ.ಘ.); 3. ಬೆ (ಖ.ಘ.); 4. ಕತ್ತುರಿ ಬೀಯ (ಕ.), ಕತ್ತುರಿಯ ಬಿಯ (ಖ.ಘ.); 5. ಬೀ (ಕ.) : 6. ಕಡಲೊಳ (ಘ.) ; 7. ಡಿ (ಖ.ಘ.), ತಿ (ಗ.); 8. ಳಿ (ಗ.ಘ.); 9. ಚಿ (ಕ.), ಸಿ (ಖ.); 10. ತಾನುಂ ಕಡು ಸೀತು ಸೀದು ಪುಳಿ ಕಳ್ ತಾನುಂ (ಘ.); 11. ದಂ (ಖ.ಘ.); 12. ರ್ಕೊಪ್ಪ (ಖ.ಘ.).

ವ॥ ಅಂತು ಕುಡಿಯೆ ಕಕ್ಕರ[1]ಗೆಯ್ತುದಿಂ ತುದಿನಾಲಗೆಯೊಳ್ ತೊಡಳ್ದಿರಸು ನುಡಿವ ನುಡಿಗ[2][ಳುಂ] ಪೊಡರ್ವ ನಿಡಿಯ ಪುರ್ವುಗ[3]ಳುಂ ನಿಡಿಯಲರ್ಗಣ್ಗಳೊಳ್ ವಿಕಾರಂ ಬೆರಸು ನೆಗೞ್ದ[4][ಭಿ]ನಯಂಗಳುಂ ಮುಳಮುಳಿಪ ರೂಪು ಕಣ್ಗಳೊಳ್ ಜಿ[5]ಳ್ಪ ನೞಿಯೆ ಸೋಂಕುವ ಕೆಂಪುಗ[6]ಳುಂ ತಮ್ಮ ಕೆಂಪಂ ಕಣ್ಗಳ್ಗೆ ಕೊಟ್ಟು ಕಣ್ಗಳ ಬೆಳ್ಪಂ ತಮಗೆ ಮಾಱುಗೊಂಡಂತೆ ತನಿ[7][ಗೆ]ತ್ತುವೆ[8][ಸು] ಬತ್ತಿ ಸೊಗಯಿಸುವ ಬೆಳರ್ವಾಯ್ಗಳೊಳಿಂಪಂ ತಾಳ್ದಿ ಪೊಱಮಡುವ ತಣ್ಗಂಪುಗಳುಮಮೃತ ಬಿಂದುಗಳಂತೆ ನೆಗೞ್ದ ಬೆಮರ ಬಿಂದುಗಳುಮಳವಲ್ಲದೊಪ್ಪೆ ಪಲರುಮೊಳ್ಪಿಂಡಿರೊಂದೆಡೆಯೊಳಿರ್ದಲ್ಲಿ ಯೊರ್ವಳ್—

ಪೃಥ್ವಿ॥ ಬೆಳರ್ತ ಬೆಳರ್ವಾಯ್ ಕರಂ ಪೊಳೆವ ಪಾಂಗೆ ಕಣ್ಣಿಂದಳು ।
ತುರ್ಳುಂಕೆ ನಿಡುವುರ್ವುಗಳ್ ಪೊಡರೆ ಬಾಯ ಕಂಪಿಂಗೆ [9][ಸಾ] ॥
ವರ್ಳಿಪ್ರಕರಮುಂದು ಸೀಗು[10]ಡಿವೊಲಾಗೆ ನಾಣ್ಗೆಟ್ಟು ಮೊ ।
ಕ್ಕಳಂ [11][ಜ]ತಿಗೆ ಮೆಟ್ಟುವಳ್ ಪಿಡಿದು ಮೆಟ್ಟುವಳ್ ನೋಳ್ಪರಂ ॥ ೮೯ ॥

ವ॥ ಮತ್ತಮೊರ್ವಳೂರ್ವಶಿಯನೆ ಪೋಲ್ವಾಕೆ ತನ್ನ ಗಂಭೀರ ನವ ಯೌವನ ಮದದೊಳಂ ಮದಿರಾಮದದೊಳಮಳವಿಗೞಿಯೆ ಸೊರ್ಕಿ—

ಚಂ॥ ಮುಡಿ ಮಕರಧ್ವಜಂಬೊಲೆೞಲುತ್ತಿರೆ ಬೆಂಬಿಡಿದೊಯ್ಯನೊಯ್ಯನು ।
ಳ್ಪುಡೆ ಕಟಿಸೂತ್ರದೊತ್ತಿನೊಳೆ ಜೋಲ್ದಿರೆ ನಾಣ್ ತಲೆದೋಱೆ ಕೂಡೆ ಕೂ ॥
[12]ಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ [13]ತನ್ನ ತೊಡಂಕದೆಯ್ದೆ ನೂ ।
ರ್ಮಡಿ ಮನದೊಳ್ ಪಳಂಚಲೆಯೆ ಡಕ್ಕೆಯೊಳಟ್ಕಜವಾಗೆಯಾಡಿದಳ್ ॥ ೯೦ ॥

ವ॥ ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ ಗಂಧೇಭ ವಿದ್ಯಾಧರನಿಂತೆಂದಂ—

ಚಂ॥ ನುಡಿವರೆ ನೋಡ ಕಳ್ಗುಡಿವರೆಂಬುದಿದಾಗದ ಸೂರುಳಂತದಂ ।
ಕುಡಿವನುಮಂತೆ ಕಳ್ಗುಡಿವರೆಂದೊಡೆ ನಾಣ್ಚುವರಂತುಟಪ್ಪುದಂ ॥
ಕುಡಿದುಮಿವಂದಿರಾರೆರ್ದೆಯುಮಂ ಸೆಱೆಗೆಯ್ದಪರೆಯ್ದೆ ದೋಷದೊಳ್ ।
ತೊಡರ್ವುದುಮೊಂದುಪಾಶ್ರಯ ವಿಶೇಷದೊಳೊಳ್ಪನೆ ತಳ್ವದಾಗದೇ ॥ ೯೧ ॥

---

[1]. ಗೆಯ್ತುದಿ (ಖ.), ಗೈತು ತುದಿ (ಗ.ಘ.) ; [2]. ಳುಮಂ (ಸ.) : [3]. ಳಂ (ಕ.ಖ.), ಣ್ಮಂ (ಗ.), ಳುಮಂ (ಘ.) ; [4]. ವಿ. (ಸ.) ; [5]. ಳ್ಪನಿ (ಕ.), ಳುಪಿನ (ಖ.ಗ.ಘ.) ; [6]. ಳಂ (ಕ.ಖ.) ; [7]. ಗಿ. (ಸ.) ; [8]. ಸಿ (ಸ.) ; [9]. ಸೋ (ಸ.) ; [10]. ರಿ (ಕ.ಖ.), ದಿ (ಘ.) ; [11]. ವ (ಸ.) ; [12]. ಕಿಱುವ (ಗ.), ಡಿಡಿರಿವ ಬಿಕ್ಕುವಾಗುಳಿ (ಘ.) ; [13]. ಬಾಗುವ ಪಾಡುವಂದ (ಕ.ಖ.).

ವ|| ಎನುತುಂ ಬರ್ಪನೊಂದೆಡೆಯೊಳೊರ್ವಂ [1][ಪ]ೞಿಕೆಯ್ದು ನಲ್ಲಳನುೞಿಯಲಾಱದೆ ಸುೞಿಯೆ ಮುಳಿದಾತನ ಕೆಳೆಯನಿಂತೆಂದಂ—

ಚಂ|| ಬಸನದೊಡಂಬಡಿಂಗಲಸಿ ಮಾಣ್ದೊಡಮಿಂತಿದನೀವೆನೆಂದ[2][ನ]ಂ |
ಪುಸಿದೊಡಮಾಸೆದೋಱ[3] ಬಗೆದೋ[3][ಱ]ದೊಡಂ ನೆರೆದಿ[4]ರ್ದೊಡಂ ಸಗಾ ||
ೞ[5][ಸದೊ]ಡಮಾಯುಮುಂ ಚಲಮುಮುಳ್ಳೊಡೆ ಪೇಸದವಳ್ಗೆ ಮತ್ತಮಾ |
ೞಸುವುದೆ ಮತ್ತಮಂಜುವುದೆ ಮತ್ತಮೞಲ್ವುದೆ ಮತ್ತಮೀವುದೇ ||೯೨||

ವ|| ಎಂದು ನುಡಿದು ಬಿಸುಡಿಸಿದಂ ಮತ್ತೊರ್ವಂ ತನಗೆರಡಱಿಯದೊಲ್ದ ನಲ್ಲಳನೇತಱೊಳಪ್ಪೊಡಮೋವಮಂ ಮಾಡದೆ ಬೇಟಮಂ ಸಲಿಸುವುದರ್ಕೆ ಸಂತಸಂಬಟ್ಟು ಮುಂತಣ್ಗೆ ಕಾಪನಿಟ್ಟಂತೆಂದಂ—

ಮ|| ಇನಿಯಂ ನೊ[6][ಯ್ದು]ವೊಡಂಬಡಂ ನುಡಿದೊಡೆಂದೆಂದಪ್ಪೊಡಂ ನಿನ್ನೊಳೆ |
ಳ್ಳನಿತುಂ ದೋಷಮನುಂಟುಮಾಡದಿರೆಯುಂ ಕಣ್ಬಿಂತೆ ಸಂದಪ್ಪುದೊಂ ||
ದನೆ ಕೇಳ್ದೋಪಳೆ ಕೂರ್ಮೆಗೆಟ್ಟೆನಗೆ ನೀನೇನಾನುಮೊಂದೇವಮಂ |
ಮನದೊಳ್ ಮಾಡಿದೊಡಂದೆ ದೀವಳಿಗೆಯುಂ ಮಾನಾಮಿಯುಂ ಮಾಡೆನೇ ||೯೩||

ವ|| ಎಂದು ನುಡಿದಂ ಮತ್ತಮೊಂದೆಡೆಯೊಳೊರ್ವ[ನೊರ್ವ]ಳ ನಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಕ್ಕು ತನ್ನ ಕೆಳೆಯಂಗೆ ತೋಱಿ—

ಚಂ|| ನಯದೊಳೆ ನೋಡಿ ನೋಟದೊಳೆ ಮೇಳಿಸಿ ಮೇಳದೊಳಪ್ಪುಕೆಯ್ದು ಗೊ |
ಟ್ಟಿಯೊಳೊಳಪೊಯ್ದು ಪತ್ತಿಸುವ ಸೂಳೆಯರಂದಮನೆಯ್ದೆ ಪೋಲ್ವ ಸೂ ||
ಳೆಯರ [7]ತುಱುಂಬು ಸೂಳೆಯರ ಮೆಲ್ನುಡಿ ಸೂಳೆಯರಿರ್ಪ ಪಾಂಗು ಸೂ |
ಳೆಯರ ನೆಗೞ್ತೆ ನಾಡೆ ತನಗೞ್ತೆ ದಲಕ್ಕ[8]ನೆ ಸೂಳೆಯಾಗಳೇ ||೯೪||

ವ|| ಎನೆ ಕೇಳ್ದು ಮುಗುಳ್ನಗೆ ನಗುತ್ತುಂ ಬರ್ಪನೊಂದೆಡೆಯೊಳೊಂದು ಕಂದದ ಮೊದಲುಮಂ ವೃತ್ತದ ತುದಿಯುಮನೊಂದುಮಾಡಿ ಪದಮಿಕ್ಕೆಯೋದಿ ಪಂಡಿತಿಕ್ಕೆಗೆ ಮುಯ್ವಾಂತುಮಾವ ಕಾಳೆಗದೊಳಂ ತಾನೆ [9]ಓಡಿಯಾರೋಡಿದರೆಂಬಂತೆ [ಬೀರಕ್ಕೆ] ಮು[10]ಯ್ವಾಂತುಮೊಂದು ವೀಸನಪ್ಪೊಡಮಾರ್ಗಮಿತ್ತ್ರಱಿಯದೆ ಚಾಗಕ್ಕೆ ಮುಯ್ವಾಂತು[ಂ] ತಮ್ಮ[ಂ] ನಗುವರನಱಿಯದೆಣ್ಬರೇಱಿದಕೞ್ತೆಯಂತೆ ದೆಸೆ ದೆಸೆಗೆ ಬೆಸೆವ ಪಚ್ಚಪಸಿಯೆಗ್ಗರುಮಂ ಕಂಡು—

1. ಬ (ಸ); 2. ಣ (ಸ); 3. ಱಿ (ಸ); 4. ರ್ದ ಗಂಡ (ಘ); 5. ಸುವೊ (ಸ.); 6. ಯ್ಯು (ಗ.); 7. ಕ (ಕ.); 8. ಲೆ (ಕ), ಳೆ (ಖ.ಗ.ಘ.); 9. ವೊಡೆಯು (ಕ.ಗ.); 10. ಯ್ಯಾಂ (ಕ.ಗ.)

ಚಂ॥ ಇಱಿಯದ ಬೀರವಿಲ್ಲದ ಕುಲಂ ತಮಗಲ್ಲದ ಚಾಗಮೋದದೋ ।
ದಱಿಯದ ವಿದ್ದೆ ಸಲ್ಲದ ಚದುರ್ ನೆ[1]ಱೆ ಕಲ್ಲದ ಕಲ್ಪಿ ಕೇಳ ಮಾ ॥
ತಱಿಯದ ಮಾತು ತಮ್ಮ ಬ[2]ಱು[ವಾ]ತುಗಳೊಳ್ ಪುದಿದೆಗ್ಗ ರೆಯ್ದೆ ಕ ।
ಣ್ದೆಱೆವಿನಮಾರ್ [3][ಪ]ೞಿಯದೇನೆಳೆಯಂ ಕಿಡಿಸಲ್ಕೆ ಬಲ್ಲರೋ ॥ ೯೫ ॥

ವ॥ ಎನೆ ನಗುತ್ತುಂ ಬರೆಯೊಂದೆಡೆಯೊಳ್ ನಾಲ್ವರಯ್ವರ್ ಗಾೞ್ಕೊಡೞ್ತಿರ್ದಲ್ಲಿಗೊರ್ವನೆಗ್ಗಂ ಗೊಟ್ಟಿಗೆ ವಂದು ಕಣ್ಣಱಿಯದೆ ಸೋಂಕೆಯುಂ ಮನವಱಿಯದೆ ನುಡಿಯೆಯುಮಾತನನಾಕೆಗಳ್ ಬಾಸೆಯೊಳಿಂತೆಂದರ್—

ಉ॥ ಭಾವಕನೆಂದೊಡಂ ಚದುರನೆಂದೊಡಮಾರ್ ಪೆಱರಾರೊ ನೀನೆ ನಿ ।
ನ್ನಾವ ಗುಣಂಗಳಂ ಪೊಗೞ್ವೊಡೆಲ್ಲವಱಿಂ ನೆಱೆದೆಮ್ಮೊಳಿಂತು ಸ ॥
ದ್ಭಾವದೆ ಗೊಟ್ಟಿರಲ್ ಬಯಸಿ ಬಂದೆಯದೀಗಳಿದೊಳ್ಳಿತಾಯ್ತು ಮಾ ।
ದೇವರ ಮುಂದಣಾತನೆನಲಲ್ಲದೆ ಪೇೞ್ ಪೆಱತೇನನೆಂಬುದೋ ॥ ೯೬ ॥

ವ॥ ಎಂದಾತನನಾಕೆಗಳ್ ಕಾಡಿ ಕೊಱಚಾಡಿ ಕಳೆದರ್ ಮತ್ತಮೊಂದೆಡೆಯೊಳೊರ್ವಳ್ ತನ್ನನುೞಿದ ಪೊಸ ಬೇಟದಾಣ್ಮನನೇಗೆಯ್ದುಂ ಪೋಗಲೀಯದೆ ತನ್ನಳಿಪನೆ ತೋಱಿ—

ಚಂ॥ ಮನೆಯನಿವಂ ಮನೋಭವನಿವಂ ಪೊಸ ಸುಗ್ಗಿಯೊಳಾದದೊಂದು [4]ಕಿ ।
ತ್ತನಿವನಿದೆನ್ನನೇನುೞಿಯಲೀಗುಮೆ ನೀನುೞಿದಾಗಳೆಂದು ಪೋ ॥
ಪನನಿರದೋಪನಂ ಮಿಡುಕಲೀಯದೆ ಕಾಲ್ವಿಡಿದಟ್ಟು ತೋರ ಕ ।
ಣ್ಬನಿಗಳನಿಕ್ಕಿದಳ್ ತರಳ ಲೋಚನೆ ಸಂಕಲೆಯಿಕ್ಕಿದಂತೆವೋಲ್ ॥ ೯೭ ॥

ವ॥ ಮತ್ತೊರ್ವಂ ತನ್ನ ಸೂಳೆಯೊಳಾದ ಬೇಸಱಿಂ ತನ್ನ ಕೆಳೆಯಂಗಿಂತೆಂದಂ—

ಚಂ॥ ಮುಳಿಸಱಿದಂಜಿ ಬಾೞ್ಕೆಯಱಿದಿತ್ತು ಮನಂಗೊಳೆಯುಂ ಕನಲ್ವುದ ।
ರ್ಕಳವಿಯುಮುಂತುಮಿಲ್ಲ ಷನಿಯನ್ನಳೆ ಕುಂಟಣಿ ಪೋದ ಮಾರಿಯ ॥
ನ್ನಳೆ ಮನೆದೊಟ್ಟು ಸೀರ್ಕರಡಿಯನ್ನಳೆ ನಾ[5]ದುನಿಯೊಲ್ದುಮೊಲ್ಲದ ।
ನ್ನಳೆ ಗಡ ಸೂಳೆಯೆಂದೊಡಿನಿತಂ ತಲೆವೇಸಱನೆಂತು ನೀಗುವೆಂ ॥ ೯೮ ॥

ವ॥ ಎಂದು ನುಡಿದು ಗೆಂಟಾದಂ ಮತ್ತೊರ್ವ ಬೇಟಕಾರ್ತಿ [6]ತಾಯ ಕಣ್ಣಂ ಬಂಚಿಸಿ ತನ್ನ ಮೋ[7]ಪಿನಾಕೆಯ ಮನೆಗೆ ಪೋಪ ಬೇಟ[8]ದಾಣ್ಮನಂ ಪಿಡಿದು—

1. ರವ (ಕ), ರೆ (ಱೆ)ವ (ಖ. ಘ.) ; 2. ಱುಮಾ (ಕ. ಘ.), ರಿಮಾ (ಖ.). ರುಮಾ (ಗ.) ; 3. ವ (ಸ) ; 4. ಚಿ (ಗ.) ; 5. ದಿ (ಕ. ಖ.) ; 6. ನಾಯಕಂ ತನ್ನಂ ವಂಚಿಸಿ (ಕ.) ; 7. ಹಿಪಾ (ಕ.) ; 8. ದೋಪ (ಕ.).

ಉ॥ ತ[1]ಪ್ಪುದು ಮಾ[2][ತು] [3]ದೂದವರ ಕೆಯ್ಯೊಳೆ ಕಾಲ್ವಿಡಿದಟ್ಟೆ ಕಣ್ಣನೀರ್ ।
ತಪ್ಪುವು ನಿಚ್ಚಮು[4]ಚ್ಚಿಗದೊಳಟ್ಟು ಕರಂ ಬಿಸುಸುಯ್ಯೆ [5]ಸುಯ್ದುಸುಯ್ ॥
ತಪ್ಪುದು ತ[6]ಪ್ಪುದೆನ್ನ ತನು ಬೇಟದ ಕಾಟದೊಳಿಂತು ಕಂಡುಮಿ ।
ನ್ನಪ್ಪೊಡಮಾಸೆವಾತನೆನಗೋಪನೆ ನೀಂ ದಯೆಗೆಯ್ಯಲಾಗದೇ ॥ ೯೯ ॥

ವ॥ ಎಂದು ಕರುಣಂಬಡೆ ನುಡಿದೊಡಗೊಂಡು ಪೋದಳ್ ಮತ್ತಮೊಂದೆಡೆ ಯೊಳೊರ್ವಳ್ ಕುಂಟಣಿಯುಪರೋಧಕ್ಕೆ ಪಿರಿದೀವ ಮುದುಪನನುೞಿಯಲಂಜಿ ತನ್ನ ಬೇಸಱಿಂ ತನ್ನ ಸಬ್ಬವದಾಕೆಗಿಂತೆಂದಳ್—

ಚಂ॥ ಕೊರೆವೊಡೆ ಬೆಟ್ಟುಗಳ್ [7]ಬಿರಿವುವುಣ್ಮುವ ಲಾಳೆಯ ಲೋಳೆಗಳ್ ಪೊನ ।
ಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವ ವಿಯೋಗಮಪ್ಪುದೆಂ ॥
ದಿರದೆರ್ದೆಗಪ್ಪುದತ್ತಳಗಮಾ ನರೆಪಂ [8][ನೆರೆವಂದು] ಪೊಂಗಳಂ ।
ಸುರಿವೊಡಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ ॥ ೧೦೦ ॥

ವ॥ ಎಂದು ನಗಿಸುತ್ತಿರ್ದಳ್ ಮತ್ತಮೊಂದೆಡೆಯೊಳೊರ್ವಳ್ ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ವ ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊಳ್ವ[9][ಳ]ಂ ಕಂಡು—

ಚಂ॥ ಬಿ[10]ರಯಿ[11]ಸಿ ಬೇಟದೊಳ್ ಬಿರಿವ ನಲ್ಲರಗಲ್ದು ಕನಲ್ದೊನ[12]ಲ್ದು ನ ।
ಲ್ಲರ ದೆಸೆಯಿಂದಮಟ್ಟುವರೆ ಕೋಗಿಲೆಯಕ್ಕೆಲರಕ್ಕೆ ತುಂಬಿಯು ॥
ಕ್ಕರಗಿಳಿಯಕ್ಕೆ ಬಂದೊಡಮೊಱಲ್ದೆರ್ದೆಯಾಱುವರೆಂದೊಡೋತ ದೂ ।
ತರೆ ತರೆ ಬಂದ ಸಬ್ಬವದ ಮಾತುಗಳಂ ಗುಡಿಗಟ್ಟೆ ಕೇಳರೇ ॥ ೧೦೧ ॥

ವ॥ ಅಂತುಮಲ್ಲದೆಯುಂ—

ಚಂ॥ ಮನದೊಳಲಂಪನಾಳ್ದನಿಯನಟ್ಟಿದ ದೂದರ ಸೀಯನಪ್ಪ ಮಾ ।
ತಿನ ರಸದೊಳ್ ಕೊನರ್ವುದು ತಳಿರ್ವುದು ಪೂವುದು ಕಾಯ್ಪುದಂತು ಕಾ ॥
ಯ್ತುನಿತಱಿೊಳಂತು ನಿಂದು ಮನದೊಳ್ ತೊದಳಿಲ್ಲದ ನಲ್ಮೆಯೆಂಬ ನಂ ।
ದನ ವನ[13]ಮೋಪರೊಳ್ ನೆರೆದೊಡಂತು ರಸಂ ಬಿಡೆ[14]ಪಣ್ತುದಾಗದೇ
॥ ೧೦೨ ॥

ವ॥ ಅಂತುಮಲ್ಲದೆಯುಂ—

---

1. ಪ್ಪ (ಕ.ಖ.) ; 2. ತ (ಸ.) ; 3. ದಂ (ಕ.ಖ.) ; 4. ಚ್ಚೆ (ಕ.ಖ.) ; 5. ಸುಯ್ದುಸಯ್ (ಕ.ಗ.ಘ.) ; 6. ಪ್ಪ (ಕ.ಘ.) ; 7. ಕಿ (ಕ.ಖ.) ; 8. ನರೆಬಂದ (ಸ.) ; 9. ರ (ಸ.) ; 10. ರಿ (ಕ.) ; 11. ಸೆ (ಕ.ಗ.) ; 12. ಲ್ವ (ಕ.) ; 13. ಮೋ (ಕ.ಖ.ಗ.) : 14. ಪೆಂಪಿ (ಕ.), ಪಂಪು (ಖ.ಗ.ಘ.).

ಚಂ|| ಅನುವಿಸೆ ಬೇಟಕಾಱ[1][ನೊ]ಲವಿರ್ಪುಡಿಯುಪ್ಪುದು ಬಯ್ಯೆ ಬೇಟಕಾ |
ಱನ ಬಗೆ [2][ನಿಲ್ಲದಿ]ಕ್ಕೆಗೊಳಗಪ್ಪುದು ನಿಟ್ಟಿಸೆ ಬೇಟ ಬೇಟಕಾ ||
ಱನ ರುಚಿ ಬಂಬಲುಂ ತುಱುಗಲುಂ ಕೊಳುತಿರ್ಪುದು ನೂಂಕೆ ಬೇಟಕಾ |
ಱನ ಮನವಟ್ಟೆ ಪತ್ತುವುದು ಬೇಟವಿದೇಂ ವಿಪರೀತ ವೃತ್ತಿಯೋ || ೧೦೩ ||

ವ|| ಇಂತುಮಿಾ ದೂದವರೆಂಬ[ರ್] ಬೇಟಕಾಱರ ಬೇಟಮೆಂಬ ಲತೆಗಳಡರ್ಪಿರ್ಪಂತಿರ್ದರೆಂತಪ್ಪ ಬೇಟಂಗಳುಮವರ್ ಪೊಸ[ಯಿ]ಸೆ ಪೊಸತಪ್ಪುದು ಕಿಡಿಸೆ ಕಿಡುವುದಂತುಮಲ್ಲದೆಯುಂ—

ಚಂ|| ನುಡಿಗಳೊಳಾಸೆಯುಂಟೆನಲೊಡಂ ತಳೆದಂತಿರೆ ನಿಲ್ವುದೆಂತುಮಾ |
ವೆಡೆಯೊಳಮಾಸೆಗಾಣೆನೆನೆ ತೊಟ್ಟನೆ ಪೋಪುವು ನಲ್ಲರಿರ್ಪರೀ ||
ರೊಡಲೊಳಗಿರ್ಪ ಜೀವಮದುಕಾರಣದಿಂದಮೆ ಪೋಪ ಬರ್ಪೊಡಂ |
ಬಡನೊಳಕೊಂಡ ದೂದವರ ಕೆಯ್ಯೊಳೆ[3]ಕೆಯ್ಯೆಡೆಯಿರ್ಪುದಾಗದೇ ||೧೦೪||

ವ|| ಎಂದು ನುಡಿಯುತ್ತುಂ ಬರೆವರೆ ಮತ್ತೊಂದೆಡೆಯೊಳೊರ್ವಂ ಗರ್ಭೇಶ್ವರಂ ತನ್ನ ಹೃದಯೇಶ್ವರಿಯನಗಲ್ದು ಬಂದು ಪೆಱರಾರುಮಂ ಮೆಚ್ಚದಾಕೆಯಂ ನೆನೆದು—

ಚಂ|| ಮಿಱುಗುವ ತೋರ ಹಾರಮುಮನಪ್ಪಿನ ಕಾೞ್[4]ಸೆಗಡ್ಡಮೆಂಬ ಬೇ |
ಸಱನೊಳೆ ಕಟ್ಟಲೊಲ್ಲದನಿತಟ್ಟಿಱನಿಟ್ಟಿಳಿಗೊಂಡಲಂಪಿನ ||
ತ್ತೆಱಗಿದ ನಲ್ಲಳಳ್ಳೆರ್ದೆಯೊಳಕ್ಕಟ ಬೆಟ್ಟುಗಳುಂ ಬನಂಗಳುಂ |
ತೊಱೆಗಳುಮಿಾಗಳೊಡ್ಡಱಿಯಡೊಡ್ಡಿಸೆ ಸೈರಿಸುವಂತುಟಾದುದೇ ||೧೦೫||

ಮುನಿಸಿನೊಳಾದಮೇವಯಿಸಿ ಸೈರಿಸದಾದಟಿಲೊಳ್ ಕನಲ್ದು ಕಂ |
ಗನೆ ಕನಲುತ್ತುಮುಮ್ಮಳಿಸಿ ಸೈರಿಸಲಾಱದೆ ಮೇಲೆ ವಾಯ್ದು ಬ ||
[5]ಯ್ದನುವಿಸಿ ಕಾಡಿ ನೋಡಿ ತಿಳಿದಟ್ಟಿಱನಿ[6]ಟ್ಟಿಳಿಗೊಂಡಲಂಪುಗಳ್ |
ಕನಸಿನೊಳಂ ಪಳಂಚಲೆವು[7][ವೆ]ನ್ನೆರ್ದೆಯೊಳ್ ತರಳಾಯತೇಕ್ಷಣೇ ||೧೦೬||

ವ|| ಎಂದು ಸೈರಿಸಲಾರದೆ ತನ್ನ ಪ್ರಾಣವಲ್ಲಭೆಯೊಡನಿರ್ದಂದಿನ ಮುಳಿಸೊಸಗೆಗಳಂ ನೆನೆದು—

ಚಂ|| ಬಗೆ ಗೆಲಲೆಂದು ಕಾಡಿ ಪುಸಿ ನಿದ್ದೆಯೊಳಾನಿರೆ ಲಲ್ಲೆಗೆಯ್ದು ಲ |
ಲ್ಲೆಗೆ ಮಱೆದಿರ್ದೊಡಟ್ಟಿಱನೊಳೊಂದಿ ಮೊಗಂ ಮೊಗದತ್ತ ಸಾರ್ಚಿ ಬೆ ||
ಚ್ಚಗೆ ನಿಡುಸುಯ್ದ ನಲ್ಲಳ ಮುಖಾಂಬುಜ ಸೌರಭದೊಳ್ ಪೊದ[8]ಳ್ದದೇಂ |
ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ ||೧೦೭||

---

1. ರೊ (ಸ.) ; 2. ನಿಲ್ಲ ಬೆ (ಕ.ಖ.ಗ.), ನಿಲ್ಲಜಿ (ಘ.) ; 3. ಕೆಯ್ಯ (ಕ.), ಕೈವೊ (ಖ.) ; 4. ಸಿ (ಕ.ಗ.) ; 5. ಯ್ಯುನಿಱಿ (ಕ.ಖ.); 6. ಕ್ಕ್ರ್ (ಕ.) ; 7. ದೆ (ಸ.) ; 8. ಱಿಕ್ಕೊಡೇಂ (ಕ.).

ವ|| ಎಂದು ತನ್ನೊಳ್ ಪಲುಂಬುತಿರ್ದನಂ ಕಂಡೀತನುಮೆಮ್ಮಂದಿಗನು ಮೆಮ್ಮ ನಂಟನುಮಕ್ಕುಮೆಂದು ಮುಗುಳ್ನಗೆ ನಗುತ್ತುಂ ಬರ್ಪನೊಂಡೆಡೆಯೊಳ್–

ಚಂ|| ಒಲವಿನೊಳಾದ ಕಾಯ್ಪು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾ |
ದಲಳಟುತುಂ ತೆಱಂದಿರಿದು ನೋಡಿದ ನೋಟದೊಳೆಯ್ದೆ ತಳ್ತ ಪೆ ||
ರ್ಮೊಲೆ ಪೊಱ[1]ಮುಯ್ಯ್ವ ಬೆನ್ನಿನಿತುಮೊರ್ಮೆಯೆ [2]ನಾ[ಂಬಿ]ನಮುಣ್ಮೆ
ಪೊ[3]ಣ್ಮೆ ಕ |
ಣ್ಮಲರ್ಗಳಿನೆಚ್ಚು ಸಾಯ್ದುವರಲಂಬುಗಳಂತೆ ವಿಲೋಚನಾಂಬುಗಳ್
|| ೧೦೮ ||

ವ|| ಮತ್ತಮೊಂದೆಡೆಯೊಳೊಂದು ಕಾಳಾಗರು ಧೂಪ ಧೂಮ ಮಲಿನ ಶ್ಯಾಮಲಾಲಂಕೃತ ವಿಚಿತ್ರ ಭಿತ್ತಿ ವಿರಾಜಿತ ರಮ್ಯ ಹರ್ಮ್ಯತಳದೊಳ್ ಪಲಕಾಲ ಮಗಲ್ದ ನಲ್ಲರಿರ್ವರುಮೊಂದೆಡೆಯೊಳ್ ಕೂಡಿ—

ಮ|| ಸಮಸಂದಪ್ಪಿಅಲಂಪನೀಯೆ ಶಯನಂ ಘರ್ಮಾಂಬುವಿಂ ನಾನೆ ಮು
ನ್ನಮೆ ನಾಣೊ[4][ಲ್ಕು]ಡಿವೋಗಿ ಸೂಸುವ ಪದಂ ಗಂಗಾಂಬುವಂ
ಪೋಲೆ ವಿ ||
ಭ್ರಮಮಂ ಕಂಠ ರವಕ್ಕೆ ತಾ[5]ಡನ ರವಂ ತಂದೀಯೆ ತಚ್ಛಯ್ಯೆಯೊಳ್ |
ಸಮ ಹಸ್ತಂಬಿಡಿವಂತುಟಾಯ್ತು ಸುರತ ಪ್ರಾರಂಭ ಕೋಳಾಹಳಂ ||೧೦೯||

ವ|| ಅಂತನೇಕಪ್ರಕಾರ ಪುರ ಜನ ಜನಿತ ವಿಕಾರಂಗಳಂ ತೊಟಲ್ದು ನೋಟ್ಪ ನ್ನೆಗಂ—

ಚಂ|| ಸೊಡಗರ್ದುಡಿ[6]ಯೊಯ್ಯನಾಗೆ ಪೊಸ ಮಲ್ಲಿಗೆ ಮೆಲ್ಲಗೆ [7]ಕಂಪು ನಾಱ[3] ತ |
ಣ್ಪಿಡಿದೆಲರೂಡೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳಂ ||
ಗೆಡೆಗೊಳೆ ಚಂದ್ರಿಕಾ ಪ್ರಭೆ ಮೊದಲ್ಗಿಡೆ ನಾಡೆ ವಿತರ್ಕದಿಂ ಬೆರ |
ಲ್ಮಿಡಿದು ಗುಣಾರ್ಣವಂ ನೆಱ[3]ಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ
|| ೧೧೦ ||

ವ|| ಆಗಳ್ ತನ್ನೊಡನೆ ತೊಟಲ್ವ ನಾಗ[8]ರಕ ವಿಟ ವಿದೂಷಕ ಪೀಠಮರ್ದ ಕರ್ಕಳನಿರಲ್ವೇಟ್ಟು ರಾಜಮಂದಿರಮಂ ಪೊಕ್ಕು ತನ್ನ ಪವಡಿಸುವ ಮಾಡಕ್ಕೆ ವಂದು ಹಂಸ ಧವಳ ಶಯ್ಯಾತಳದೊಳ್ ಗಂಗಾ ನದೀ ಪುಳಿನ ಪರಿಸರ ಪ್ರದೇಶದೊಳ್ ಮಱ[3]ದೊಱಗುವೈರಾವತದಂತೆ ಪವಡಿಸಿ ಕಿಱದಾನುಂ ಬೇಗದೊಳ್ ಸುಭದ್ರೆಯುಂ

---

1. ಪೊಯ್ದು (ಕ.), ಮೊಯ್ದು (ಖ.), ಮೊಯ್ವ (ಗ.) ; 2. ನಾಣ್ಚ (ಕ. ಖ.), ನಾಂಚಿ (ಗ.ಘ.) ; 3. ಣ್ಮೆ (ಕ. ಖ. ಗ.) ; 4. ಳ್ಕ (ಸ.) ; 5. ಟ (ಖ. ಗ. ಘ.) ; 6. ಮೆ (ಕ.), ಮ್ಯೆ (ಖ.), ಮ (ಘ.) ; 7. ಕಂಮನಾಗೆ (ಕ. ಖ.) ; 8. ರ (ಕ. ಖ.).

ಕನಸಿನೊಳ್ ಕಂಡು ನನಸೆಂದು ಬಗೆದು ಮಂಗಳ ಪಾಠಕ ರವಂಗಳೊಳ್ ಭೋಂಕ ನೆೞ್ಚಿತ್ತನನ್ನೆಗಂ—

ಚಂ॥ ಪುದಿದ ತಮಂ ಮದೀಯ ಕಿರಣಾಳಿಯನಾನದವೋಲೆ ನಿನ್ನ ನಾ।
ವದಟರುಮಾನರೆನ್ನುದಯಮಭ್ಯುದಯಂ ನಿನಗೆಂದು ಕನ್ನೆಯಂ॥
ಪಡೆದೊಡಗೊಂಡು ಪೋಗಿರದಿರೆಂದು ಗುಣಾರ್ಣವ ಭೂಭುಜಂಗೆ ಕ।
ಟ್ಟೆದಿರೊಳೆ ಬಟ್ಟೆದೋಱುವವೊಲಂದೊಗೆದಂ ಕಮಳೈಕ ಬಾಂಧವಂ॥೧೧॥

ಇದು ವಿವಿಧ ವಿಬುಧ ಜನ ವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಚತುರ್ಥಾಶ್ವಾಸಂ

# ಪಂಚಮಾಶ್ವಾಸಂ

ಕಂ॥ ಶ್ರೀ ವೀರಶ್ರೀ ಕೀರ್ತಿ।
ಶ್ರೀ ವಾಕ್‌ಶ್ರೀಯೆಂಬ ಪೆಂಡಿರಗಲದೆ ತನ್ನೊಳ್॥
ಭಾವಿಸಿದ ಪೆಂಡಿರೆನಿಸಿದ।
ಸೌ[1]ವಾಗ್ಯದ ಹರಿಗನೆಮ್ಮನೇನೊಲ್ದಪನೋ ॥ ೧ ॥

ಎಂಬ ಬಗೆಯೊಳ್ ಸುಭದ್ರೆ ಪ।
ಲುಂಬಿ ಮನಂಬಸದೆ ತನುವನಾಱಿಸಲಲರಿಂ॥
ತುಂಬಿಗಳಿಂ ತಣ್ಣೆಲರಿಂ।
ತುಂಬಿದ ತಿಳಿಗೊಳದಿನೆಸೆವ ಬನಮಂ ಪೊಕ್ಕಳ್ ॥ ೨ ॥

ತಳತಳಿಸಿ ಪೊಳೆವ ಮಾವಿನ।
ತಳಿರ್ಗಳಶೋಕೆಗಳ ಮಿಸುಪ ಲತೆಗಳ ನೆಲೆ ಬ॥
ಳ್ವಳ ಬಳೆದ ಬೇಟದುರುಳಿಯ।
ಬಳಗಮಿದೆಂದೆಳೆಯಳಳಸಿ ತಳವೆಳಗಾದಳ್ ॥ ೩ ॥

ಕೊಳದ ತಡಿವಿಡಿದು ಬೆಳೆದೆಳ।
ದಳಿರ್ಗಳಶೋಕೆಗಳ ಲತೆಯ ಮನೆಗಳೊಳೆ ತೆಱಂ॥
ಬೊಳೆವಲರ ಬಸದೆ ಸುಱಿವಳಿ।
ಗಳ ಬಳಗದ ದನಿಗೆ ಕಿನಿಸಿ ಕಿಂಕಿ[2]ಱಿವೋದಳ್ ॥ ೪ ॥

ಸುರಯಿಯ ಬಿರಿ ಮುಗುಳ್ಗಳ ಪೊರೆ।
ವೊರೆಯೊಳ್ [3]ಪೊಱ[3]ವೊರಕನಲ್ಲದಲ್ಲುಗುವ ರಜಂ॥
ಬೊರೆದು ಪ[4]ರಕಲಿಸಿದಳಿಕುಳ।
ಪರಿಕರಮುಮನತನು ಶಿಖಿಯ ಕಿಡಿಗಳೆ ಗೆತ್ತಳ್ ॥ ೫ ॥

ವ॥ ಅಂತು ನನೆಯ ಕೊನೆಯ ತಳಿರ ನಿಱಿದಳಿರ ಮುಗುಳ ಬಿರಿಮುಗುಳ ಮಿಡಿಯ ಕಿಱುಮಿಡಿಯ ಬಳ್ಮಿಡಿಗಳೊಳೆಱಗಿ ತುಱುಗಿದ ಬನಮಂ ಪೊಕ್ಕಲ್ಲಿಯುಂ ಮೆಯ್ಯನಾಱಿಸಲಾಱದೆ ಪೂತ ಚೂತ ಲತೆಗಳೊಳ್ ತಳ್ಪೊ[5]ಯ್ದು ಪೊಸ ಮುತ್ತಿನ ಬಾಸಣಿಗೆಯೊಳ್ ಬಾಸಣಿಸಿದ ಬಿರಿ ಮುಗುಳ್ಗಳೊಳ್ ತುಱುಗಿದದಿರ್ಮುತ್ತೆಯ ಸುತ್ತಿನೊಳೆಸೆದುಪಾಶ್ರಯಂಬಡೆದ ಸಾಂದ್ರ ಚಂದ್ರಕಾಂತದ ಶಿಲೆಯನೊಳಗು ಮಾಡಿ—

---

1. ಭಾ (ಖ.ಗ.ಘ.); 2. ರಿ (ಖ.), ನಿ (ಗ.ಘ.); 3. ಪೊರೆವೊರ (ಖ. ಗ.), ಪೊರೆವೊರೆ (ಘ.); 4. ರಿ (ಕ.); 5. ಯ್ದು (ಕ.ಖ.ಗ.).

ಮ॥ ಇದಿರೊಳ್ ಕಟ್ಟಿದ ತೋರಣಂ ನಿಱಿದಳಿರ್ ಪೂಗೊಂಚಲಂದೆತ್ತಮೆ
ತ್ತಿದ ಪೂಮಾಲೆ ಪರಾಗ ರಾಗಮುದಿತಾಶಾ ಭಾ ಸಮುದ್ಯನ್ಮಧೂ॥
ನ್ಮದ ಭೃಂಗ ಧ್ವನಿ ಮಂಗಳ ಧ್ವನಿಯೆನಲ್ ಸಾಲ್ವನ್ನೆಗಂ ತಾನೆ ತ।
ಕ್ಕುದು ಕಾಮಂಗೆ ವಿವಾಹ ಮಂಟಪಮೆನಲ್ಕಾ ಮಾಧವೀ ಮಂಟಪಂ ॥೬॥

ವ॥ ಆ ಮಾಧವೀ ಲತಾಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕದಱೊಳಗೆ ಕಪ್ಪುರವಳುಕಿನ ಜಗಲಿಯುನಗಲಿತಾಗಿ ಸಮೆದು ಚಂದನದೆಳದಳಿರ್ಗಳಂ ಪಾಸಿ ಮಲ್ಲಿಗೆಯಲರ್ಗಳಂ ಪೂವಾಸಿ ಮೃಣಾಳ ನಾಳದೊಳ್ ಸಮೆದ ಸರಿಗೆಗಂಕಣಂಗಳುಮಂ ಯವ ಕಳಿಕೆಗಳೊಳ್ ಸಮೆದ ಕಟಿಸೂತ್ರಮುಮಂ ಸಾರ ಕರ್ಪೂರದೊಳ್ ವಿರಚಿಸಿದ ಹಾರಮುಮಂ ಕರಿಯ ನೆಯ್ದಿಲ ಕಾವಿನೊಳ್ ಭಾವಿಸಿದ ನೂಪುರಮುಮನದಱ ಬಿರಿಮುಗುಳ್ಗಳೊಳ್ ಚಿತ್ರಿಸಿದ ಕರ್ಣಪೂರಮುಮಂ ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರ ಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ ಕಪ್ಪುರವಳುಕಿನ ಲಂಬಣಮುಮಂ ತೊಟ್ಟು ಕುಳಿರ್ಕೋಟ್ಟ ಚಂದನ ರಸಮನೆರ್ದೆಯೊಳಂ ಮೆಯ್ಯೊಳಂ ತಳ್ಕಿಱಿದು ಕರಿಯ ಕರ್ಬಿನ ಕಾವಿ[1][ನೆ]ಳ ಮೆಯ್ಯಂದವಾಱಿಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಟ್ಟು ತಣ್ಪುಗೆಯ್ಯೆ ಮನದ ಮೆಯ್ಯ ಸಂತಾಪದೊಳ್ ಬಿಸುಸು[2]ಯ್ದು ಬಿಸುಪಿನೊಳನಿತುಮಂ ಗೆಲ್ದು—

ಉ॥ ಕೆಂದಳಿರ್ವಾಸು [3]ಸೇಕದ [4]ತೊವಲ್ಗೆಣೆಯಾಯ್ತು ಮೃಣಾಳ ನಾಳಮೊಂ।
ದೊಂ[5]ದ[ಡೆ]ವೊತ್ತಿ ಪತ್ತಿದುವು ಸೂಸುವ ಶೀತಳ ವಾರಿ ಮೆಯ್ಯನೆ॥
ಯ್ತಂದಿರದೆತ್ತ ಬತ್ತಿದುವು ತಚ್ಛಶಿಕಾಂತ ಶಿಳಾತಳಂ [6][ಸಿ]ಡಿ।
ಲ್ದಂದೊಡೆದತ್ತಿದೇಂ ಬಿಸಿದೊ ಬೇಟದ [7]ಬೆಂಕೆ ಮೃಗಾಂಕ ವಕ್ತ್ರೆಯಾ ॥೭॥

ಚಂ॥ ಅರಿಗನ ಬೇಟದೊಂದೆ ಪೊಸ ಬೇಟದ ಕೇಸುರಿಯಿಂದಮೆಯ್ದೆ ದ।
ಳ್ಳುರಿ ನೆಗೆ[8]ದಂದು ಕೆಂದಳಿರ ಪಾಸುಗಳಿಂ ಕುಳಿರ್ವಾಲಿ ನೀರ್ಗಳಿಂ॥
ತುರಿಪದೆ ಸೂಸುತುಂ ಕೆಳದಿಯರ್ [9]ನದಿಪುತ್ತಿರೆ ನೋಡೆ ದಾಹಮೊ।
ತ್ತರಿಸಿದುದೊಂದು ಪೊನ್ನ ಸಲಗಿರ್ಪವೊಲಿರ್ದುದು ಮೆಯ್ ಸುಭದ್ರೆಯಾ
॥೮॥

ಮದನ ದವಾನಲಾರ್ಚಿ ತನುವಂ ಸುಡೆ ತಳ್ತಿಮೆಯೊಳ್ ಪಳಂಚಿ ಬೀ।
ಗಿದ ಬೆಳವಾರ್ಯೊಳುಚ್ಚಳಿಸಿ ತುಂಗ ಕುಚಂಗಳ ಪೊ[10]ಯ್ಲೊಳೆತ್ತಲುಂ॥

---

1. ನೊ (ಸ.); 2. ಯ್ದು (ಸ.); 3. ಸೆಕ್ಕ್ರದ (ಕ.); 4. ಕೊನಗ್ಗ್ರತಳಿಗ್ಗ್ರಣೆಯಾಯ್ತು ನಾಳವೊಂ (ಕ.) : 5. ದೊಡ (ಕ.); ದಡ (ಖ. ಗ. ಘ.); 6. ಸ (ಸ.); 7. ಚಿಂತೆ (ಕ. ಗ.); 8. ದಂತು (ಕ. ಖ.); ತಂದು (ಗ. ಘ.); 9. ನಡ (ಕ.), ನೆರಿ (ಖ.), ನಡಿ (ಗ.), ನೆದಿ (ಘ.); 10. ಯ್ಯೊ (ಕ. ಖ. ಗ.).

ಕೆದಱಿ ವಳಿತ್ರಯಂಗಳ ತೊಡರ್ಪುಗಳೊಳ್ ತೊಡರ್ದೊಯ್ಯನೊಯ್ಯನೆ ।
ಯ್ದಿದುವು ವಿಲೋಲ ನೇತ್ರ ಜಲ[1]ಬಿಂದುಗಳಾಕೆಯ ನಿಮ್ನ ನಾಭಿಯಂ॥ ೯ ॥

ಚಂ॥ ನಗೆನೊಗಮಂ ಪೊ[2]ದಳ್ದಲರ್ದ ತಾವರೆಯೆಂಬ ವಿಮೋಹದಿಂ ಮೊಗಂ ।
ಬುಗಲೊಡಮಾ ತಳೋದರಿಯ ಸುಯ್ಗಳ ಬೆಂಕೆಯೊಳ[3]ಚ್ಚಿಗೆಟ್ಟು ತೊ ॥
ಟ್ಟಗೆ ಕೊಳೆ ಮುಂದೆ ಬಿಟ್ಟು ಮಗುಟ್ದಾ ಸತಿಯಿಕ್ಕಿದ ಕಣ್ಣ ನೀರ ಧಾ ।
ರೆಗಳೊಳೆ ನಾಂದೆಲರ್ಚಿ ಪೊದಳ್ದೊರ್ಮೆಯೆ ಪಾಱಿದು[4]ವುನ್ಮದಾಳಿಗಳ್
॥ ೧೦ ॥

ವ॥ ಅಂತಾ ಬಾಲೆ ಕಾಯ್ದು ಪುಡಿಯೊಳಗೆ ಬಿಸುಟ್ಟೆಳವಾಟೆ[3]ಯಂತೆ ಸುರತ ಮಕರಧ್ವಜನೊಳಾದ ಬೇಟದೊಳ್ ಮಮ್ಮಲ ಮಱುಗುರ್ತಿರ್ದಳತ್ತ ಮನುಜ ಮನೋಜನುಂ ಮ[5]ದನಪರಿತಾಪಕ್ಕಾಱದುಮ್ಮಳಿಸಿ ಮಧುಮಥನನ ಕಣ್ಣಂ ಬಂಚಿಸಿ ವಿಜೃಂಭಮಾಣ ನವ ನಳಿನ ಪರಿಕರಾಕೃಷ್ಟ ಮಧುಕರ ರಮಣೀಯಪುಳಿನ ಪರಿಸರ ಪ್ರದೇಶ ನಿವೇಶಿತ ವಿರಹಿ ಜನನಿಚಯ ನಿಚಿತ ಮಾನಸೋನ್ಮತ್ತ ಕಾಮಿನೀ ಗಂಡೂಷ ಸೀಧು ಸೇಕ ಪುಳಕಿತ ವಕುಳ ಮುಕುಳ ವಿದಳಿತ ಮನೋಹರಾಶೋಕ ಲತಾ [6][ರ]ಮಣೀ ರಮಣೀಯ ನೂಪುರ [ರವ] ರಮ್ಯ[7][ಮ]ನವಿರಳ ಕುಸುಮ[8]ಧೂ[ಳೀ ಧೂಸರ]ಪುಳಿನ ಧವಳಿತ ಧರಾತಳಮನುತ್ಫುಲ್ಲ ಪಲ್ಲವ ಲೀಲಾಯಮಾನ ಮತ್ತ ಕೋಕಿಲೋಲ್ಲಾಸಿತ ಶೀಕರೋದ್ದಾಮ ದುರ್ದಿನ ವನಮನೆಯ್ದಿವಂದು—

ಚಂ॥ ಬಿರಿದಲರೊಳ್ ತೆಱಂಬೊಳೆವ ತುಂಬಿ ತಳಿರ್ತೆಳಮಾವು ಮಾವಿನಂ ।
ಕುರಮನೆ ಕರ್ಚಿ ಬಿಚ್ಚಱಿಪ ಕೋಗಿಲೆ ಕಂಪನವುಂಕಿ ಪೊತ್ತು ನಿ ॥
ತ್ತರಿಪೆರಲೆಂಬಿವೇವುವೊ ಮದೀಯ ಮನೋಗತ ಕಾಮ ರಾಗ ಸಾ ।
ಗರದೊದವಿಂಗೆ ನಲ್ಲಳ ವಿಲೋಕನ ಚಂದ್ರಿಕೆಯೊಂದೆ ಸಾಲದೇ ॥ ೧೧ ॥

ವ॥ ಎನುತ್ತುಂ ಬಂದು ಬಿರಿದ ಬಿರಿಮುಗುಳ್ಗಳೊಳೆಱಗಿ ತುಱುಗಿದಶೋಕ ಲತೆಯುನಟ್ಟಿಕಿರ್ತು ನೋಡಿ—

ಚಂ॥ ಅಲರಲರ್ಗಣ್ ಮುಗುಳ್ ನಗೆ ಮಡಲ್ ತೊಡೆ ತುಂಬಿ ಕುರುಳ್ ತಳಿರ್
ತಳಂ ।
ಗೊಲೆ ಮೊಲೆ [9]ಕೆಂಪು ಕೆಂಪು ಕೊನೆ ಸೆಳ್ಳುಗುರ್ಗಳ್ ಕುಡಿ ತೋಳ್
ನಯಂ ನಯಂ ॥

1. ಬಾಷ್ಪ (ಖ. ಘ.) ; 2. ಡರ್ದ (ಕ. ಖ.) ; 3. ಟ್ಟು ಕೊಟ್ಟು (ಕ. ಖ.) ; 4. ವೀ ಮ (ಕ.) ; 5. ನದ (ಕ.) ; 6. ಮಣಿ (ಕ. ಗ.), ಮಣಿತ (ಘ.) ; 7. ಮಾ (ಕ. ಗ. ಘ.) ; 8. ದೂವಿ ಮಧುಕರ (ಕ. ಗ. ಘ.) ; 9. ಕಂಪು ಕಂಪು (ಕ. ಘ.), ಕೆಂಪು ಕಂಪು (ಖ.), ಕಂಪು ಕೆಂಪು (ಗ.).

ನೆಲೆ ನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಲ್ಲಿದೆಂತೊ ಕೋ।
ಮಲ ಲತೆ ಪೇೞಿಮೆನ್ನಿನಿಯಳಂ ಮಱೆಗೊಂಡುದೊ ಸೂಱೆಗೊಂಡುದೋ ॥ ೧೨ ॥

ವ॥ ಎಂದು ಕಿಱಿದಾನುಂ ಬೇಗಮ[1]ಱಿ ಮರುಳಾದಂತಾ ಲತೆಯೊಳ್ ಪ[2]ೞಿಗಾಳೆಗಂಗಾದಿ ಬರೆವರೆ ಕಾಮದೇವನಿಮ್ಮಾವಿನ ನನೆಯ[ನ]ಂಬುಗಳುಮನವಱಿ ಬಲ್ಮಿಡಿಯನೆ ವಿಟ್ಟಿ[ಯುಮಂ] ಮಾಡಿ ತನ್ನನೇಸಾಡಿ ಕಾಡೆ—

ಚಂ॥ ಅಸಿಯಳನೊ[3]ಲ್ಗು ಮೊಲ್ಲನಣಮೆನ್ನದೆ ರೂಪನೆ ನೋಡಿ ಕೂಡಲಾ।
ಟಿಸಿ ಪರಿದೆಯ್ದಿ ಪತ್ತಿದಲರ್ಗಣ್ಗಳನೇನುಮನೆನ್ನದಂತುಪೇ॥
ಕ್ಷಿಸಿ ಮನಮೆಲ್ಲಮುಂ ಕವರ್ದಪಂ ತನುವಂ ಬಡಮಾಡಿ ಕಾಡಿ ದಂ।
ಡಿಸಿದಪನಂಗಜನ್ಮನ ಕವರ್ತೆಯ ದಂಡದ ಪಾಂಗಿದೆಂತುಟೋ ॥ ೧೩ ॥

ವ॥ ಎಂದು ನಂದನವನೋಪಕಂಠಂಗಳೊಳನಂಗಶರವಶನಾಗಿ ತೊೞಲ್ದು ನೋಡುತ್ತುಂ ತನ್ನ ಮನದೊಳಿಂತೆಂದು ಬಗೆಗುಂ—

ಚಂ॥ ಉರಿವೆರ್ದೆಯಾಱೆ ಚಿಂತಿಪ ಮನಂ ಗುಡಿಗಟ್ಟೆ ಮರಲ್ದು ನೋಡುವ।
ಚ್ಚರಿಯೊಳೆ ಬೆಚ್ಚ ಕಣ್ಮಲರ್ಗೆ ಸಂತಸದಾಗರಮಾಗೆ ಬೇಟದೊಳ್॥
ಬಿರಿವೊಡಲೊಯ್ಯನಂಕುರಿಸೆ ಸೈಪಿನೊಳಿಂತೆನಗೀಗಳೀ ವನಾಂ।
ತರದೊಳೆ ಕಾಣಲಕ್ಕುಮೊ ಮದೀಯ ಮನೋರಥ ಜನ್ಮಭೂಮಿಯಂ ॥ ೧೪ ॥

ವ॥ ಎಂದು ಬಗೆಯುತ್ತುಮಾಕೆಯಿರ್ದ ಮಾಧವೀ ಮಂಟಪಕ್ಕೆ ಮೊಗಸಿ ಪಲರ ಪಲವುಂ ತೆಱದ ಬೇಟದ ಪಡೆಮಾತುಗಳಂ ಕೇಳ್ದಲ್ಲಿಯಾರಾನುಮೆಮ್ಮಂದಿಗರಿರ್ದರಕ್ಕುಮೆನುತ್ತುಂ ಬರ್ಪ ಗಂಧೇಭ ವಿದ್ಯಾಧರನಂ ಸುಭದ್ರೆ ಭೋಂಕೆನೆ ಕಂಡು—

ಚಂ॥ ಪಡಿದೆಱೆವಂದದಿಂದಮೆರ್ದೆಯುಂ ತೆಱೆದತ್ತು ಪೊದಳ್ದ ಸಂಕೆಯಿಂ।
ನಡುಕಮುಮಾಗಳುಬ್ಬ[4]ದಿಗಮಾದುದು ಸಾಧ್ವಸದಿಂ ಬೆಮರ್ ಬೆಮ॥
ರ್ಡೆಗಳಿನುಣ್ಮಿ ಪೊಣ್ಮಿದುದು ಕಣ್ ನಡೆ ನೋಡದೆ ತಪ್ಪು ನೋಡಿ ನಾ।
ಣೆಡೆಯೊಳಮಾದುದಾ ಸತಿಗೆ ನೋಡಲೊಡಂ ಪಡೆಮೆಚ್ಚೆಗಂಡನಂ ॥ ೧೫ ॥

ವ॥ ಆಗಳ್ ಸುರತಮಕರಧ್ವಜನುಮನಂಗಾಮೃತ ಪಯೋಧಿಯೊಳ್ ಮೂಡಿ ಮುೞುಗಾಡಿದರಂತೆ ಕಿಱಿದು ಬೇಗಮನಿರ್ದು ತನ್ನಿಂ ತಾನೆ ಚೇತರಿಸಿ ಸುಭದ್ರೆಯ ರೂಪನಾಪಾದಮಸ್ತಕಂಬರಮೆಯ್ದೆ ನೋಡಿ ತನ್ನೊಳಾದ ಬೇಟದೊಳ್ ಬಡವಟ್ಟುಮೇೞ್ಗೆವಾಡಿವದ ಸಸಿಯಂತೆ ಸೊಗಯಿಸುವಸಿಯಳಂ ಕಂಡು—

---

1. ಱೆ (ಕ.) ; 2. ೞು (ಕ.) ; 3. ಲ್ದು (ಕ. ಖ.) ; 4. ಡಿ (ಕ.), ರಿ (ಘ.).

ಚಂ|| ಸರಸ ಮೃಣಾಳನಾಳವಳಯಂಗಳೊಳುಜ್ಜ್ವಳ ವೃತ್ತ ಮೌಕ್ತಿಕಾ|
ಭರಣ ಗಣಂಗಳೊಳ್ ಶಶಿಕರಂಗಳೊಳಾಱದೆ ಬೇಟದೊಳ್ ಕನ||
ಲ್ದುರಿವೆರ್ದೆ ನೋಡ ನೋಡಲೊಡನಾಱಿದುದೇನಮರ್ದಿಂದೆ ತೊಯ್ದು ಕ|
ರ್ಪುರವಳುಕಿಂದಜಂ ಕಡೆದು ಕಂಡರಿಪಂ [1]ವಲಮೆನ್ನ ನಲ್ಲಳಂ ||೧೬||

ಉ|| ವೃತ್ತ ಕುಚಂಗಳಿಂದುದಿರ್ದ ಚಂದನದೊಳ್ ತಳಿರ್ವಾಸು ಬೆಳ್ಪನಾ|
ಳ್ದತ್ತುದುಕೂಲದೊಂದು ಮಡಿವಾಸಿ[2]ದ ಮಾಟಿಕ್ಕೆವೊಲಾಯ್ತು ಮೆಯ್ಯನಿ||
ಕ್ಕುತ್ತಿರೆ ಪತ್ತಿ ಕೆಂದಳಿರ್ಗಳಚ್ಚುಗಳಚ್ಚಿಱಿದಂತೆ ಕಾಮನ|
ಚ್ಚೊತ್ತಿದ ಬೇಟದಚ್ಚುಗಳ ಮಾಟಿಕ್ಕೆಯೊಳಿರ್ದುದು ಮೆಯ್ ಸುಭದ್ರೆಯಾ
||೧೭||

ವ|| ಅದಱಿನೀಕೆಯುಮೆನಗೆರಡಱಿಯದ ನಲ್ಲಮನಂದೋಱುವುದು ಸಲ್ಗೆ ದೋಱುವುದುಮಾವುದು ದೋಸಮೆಂದಾಕೆ ಕುಳ್ಳಿರ್ದ ತಳಿರ ಸೆಜ್ಜೆಯೊಡನೆ ಕುಳ್ಳಿರ್ಪುದುಂ ನಾಣ್ಚಿ ಪೋಗಲೆಂದಟ್ಟಿ ಕನ್ನೆಯುಂ ಚೂತಲತಿಕೆಯೆಂಬ ಕೆಳದಿ ಜಡಿದು ಕುಳ್ಳಿರಿಸಿ ಗಂಡೇಭ ವಿದ್ಯಾಧರನನಿಂತೆಂದಳ್—

ಚಂ|| ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೊ|
ಳ್ಗದಿ ಮನದಿಂದಮಿಂದು ಪೊಱಮಾಱುಗೆ ಚಂದ್ರಕರಂಗಳಿಂದು ತ||
ಣ್ಣಿದುವೆರ್ದೆಗಕ್ಕೆ ಕೆಂದಳಿರ ಸೆಜ್ಜೆಯ [3]ಜಿಂಜಿಣಿ ಪೋಕೆ ನಿನ್ನ ಕೂ|
ಟದೊಳಿನಿದಕ್ಕೆ ಮತ್ಸಖಿಗೆ ಬೇಱೆ ಪಳಾಳದೊಳೇಂ ಗುಣಾರ್ಣವಾ ||೧೮||

ಬೆಳಗುವ ಸಾಂದ್ರಚಂದ್ರ ಕಿರಣಾಳಿಗಳೋಳಿಗಳಿಂದಮೆತ್ತಮು|
ಜ್ಜ್ವಳಿಸುವಿರುಳ್ಗಳಂ ಕಳೆದುಮೆಯ್ದೆ ತಳಿರ್ತೆಳಮಾವುಮಂ ಮನಂ||
ಗೊಳೆ ನಡೆ ನೋಡಿಯುಂ ಕಿವಿಯನಿಂದೊಳದಿಂಚರಕಾಂತುಮಿಂತು ಕೋ|
ಮಳೆಯಸು ಮತ್ತಮಿಾಯೊಡಲೊಳಿರ್ದುದಿದೆಮ್ಮಯ ಸೈಪು ಭೂಪತೀ
||೧೯||

ವ|| ಎಂಬನ್ನೆಗಂ ಸುರತಮಕರಧ್ವಜನ ಸುಭದ್ರೆಯ ವಿರಹ ಪರಿತಾಪದೊಳಾದ ಪಡೆಮಾತಂ ಕರ್ಣಪರಂಪರೆಯಿಂ ಕೇಳ್ದು ಸಂತಸಂಬಟ್ಟು ಚಕ್ರಿ ಚಕ್ರಿಕಾವರ್ತಿಯಪ್ಪುದಱಿಂದಾ ವನಾಂತರಾಳಕ್ಕೊರ್ವನೆ ಬಂದು ಮಾಧವೀ ಮಂಟಪಮಂ ಪೊಕ್ಕು ಆವರಿರ್ವರ ನಾಣುಮಂ ನಡುಕಮಂ ಪತ್ತುವಿಟ್ಟು ನುಡಿದು—

ಮ|| ಕುಡಲಿರ್ಪಂ ಬಲದೇವನೆನ್ನನುಜೆಯಂ ದುರ್ಯೋಧನಂಗಾನೊಡಂ|
ಬಡೆನೀವಟ್ಟಿಯದಾಗಳುಂ ನಿನಗೆ ದಲ್ ಪದ್ಮಾಸನಂ ತಾನೆ ನೇ||

---

1. ಬೊ (ಕ.); 2. ನ (ಕ. ಖ.); 3. ಸಿಂಜಿನಿ (ಕ. ಖ.).

ರ್ಪಡಿಸಲ್ ಕೂಡಿದನಿರ್ಪುದಲ್ತು ನಯಮಿನ್ನೀ ಪೊೞ್ತೆ ಪೋೞ್ತಾಗೆ ನೀ।
ನೊಡಗೊಂಡುಯ್ವುದು ಕನ್ನೆಯಂ ತಡೆಯದಿರ್ ವಿದ್ವಿಷ್ಟವಿದ್ರಾವಣಾ
॥ ೨೦ ॥

ವ॥ ಅಂತು ಪೋಗೆವೋಗೆ ಬಲದೇವನನುಮತದೊಳ್ ಪೆಱಗಂ ತಗುಳ್ವ ಯಾದವ ಬಲಮುಂಟಪ್ಪೊಡದನಂಬುಗಾಣಿಸಲ್ ನೀನೆ ಸಾಲ್ವೆಯುೞಿದುದಂ ಮಾಣಿಸಲಾನೆ ಸಾಲ್ವೆನಿದುವೆ ಮುಹೂರ್ತಮಾಗಿ ನಡೆವುದೆಂದು ಶೈಬ್ಯ ಬಳಾಹಕ ಮೇಘವರ್ಣ ಸುಗ್ರೀವಂಗಳೆಂಬ ನಾಲ್ಕು ಕುದುರೆಗಳೊಳ್ ಪೂಡಿದ ದಿವ್ಯ ರಥಮ ನೆಸಗಲ್ ದಾರುಕನೆಂಬ ಸಾರಥಿಯನೀವುದುಮಾ ರಥಮಂ ಮನೋರಥಂಬೆರಸೇಱೆ ಚೂತಲತಿಕೆವೆರಸು ಸುಭದ್ರೆಯನೇಱಲ್ವೇೞ್ದುದಾತ್ತನಾರಾಯಣಂ ನಾರಾಯಣನ ಪರಸಿದ ಪರಕೆಗಳುಮಂ ಕೆಯ್ಕೊಂಡು ಬೀೞ್ಕೊಂಡಿಂದ್ರಪ್ರಸ್ಥದ ಬಟ್ಟೆಯೊಳ್ ಸುಖ ಪ್ರಯಾಣಂಗೆಯ್ದನನ್ನೆಗಮಿತ್ತ ಬಲದೇವಂ ಸುಭದ್ರೆಯಂ ಸಾಮಂತ ಚೂಡಾಮಣಿ ಯುಯ್ದನೆಂಬುದಂ ಕೇಳ್ದು—

ಮ॥ ಉಱದೆನ್ನಂ ಕುಡಲಿರ್ದ ಕೂಸನೊಡಗೊಂಡುಯ್ವಾತನಂ ತಾಗಿ ತ।
ಳ್ತಿಱಯಲ್ ಕೋಡಗಗಟ್ಟುಗಟ್ಟಿ ತರಲಿನ್ನಾರಾರ್ಪರಂತಪ್ಪ ಪೊ॥
ಚ್ಚಱ ಸಾಮಂತರೆ ಪೋಗಿಮೆಂದು ಪಲರಂ ಪೇೞ್ದಾಗಳೆಯ್ತುಂದರಂ।
ತೊಱೆ[1] ಕೊಳ್ವಂತಿರೆ ಕೊಂ[2]ಡುವಂದರಿಗನೆಚ್ಚುಗ್ರೇಷು ಧಾರಾಜಳಂ ॥ ೨೧॥

ವ॥ ಆಗಳ್ ತನ್ನ ಪೇೞ್ದ ನಾಯಕರ ಸಾವಂ ಕೇಳ್ದು ಯಾದವ ಬಲ ಜಳನಿಧಿವೆರಸು ಪ್ರಳಯಕಾಲ ಜಳನಿಧಿಯಂತೆ[3]ತೆರಳಲ್ ಬಗೆದ ಬಲದೇವನಂ ವಾಸು ದೇವನಿಂತೆಂದಂ—

ಮ॥ ಕುಲಮಂ ಪೇೞ್ವೊಡೆ ಸೋಮವಂಶತಿಲಕಂ[4]ಬಿಲ್ಲಾಳ್ತನಂ ಬೇೞ್ವೊಡು।
ಜ್ಜ್ವಲ ತೀವ್ರಾಸ್ತ್ರನಿಘಾತ ಪಾತಿತ ರಿಪುವ್ಯೂಹಂ ಬಲಂಬೇೞ್ದೊ॥
ರ್ವಲದೊಳ್ ಕೇಳ್ ನಿನಗಂ ಬಲಸ್ಥನೊಡೆಯಂ ಕೂಸಿಂಗೆ
ಕೊಂಡು[5]ಯ್ವುದೇ।
ಚಲ[6]ಮೇದೋಷಮದರ್ಕೆ ನೀನ್ ಮುಳಿವುದೇ ನೀನ್ ಪೇೞ್ವೊಡಾನ್
ಸಾಲೆನೇ ॥೨೨॥

ವ॥ ಎಂದು ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದು ಮಧುರ ವಚನ ರಚನಾ [7]ಜಲಂಗಳಂ ತಳಿದು [8]ನ[ದಿ]ಪಿದನಿತ್ತ ವಿಕ್ರಮಾರ್ಜುನನುಂ

---

1. ಕೊಳ್ವಂ (ಕ.); 2. ದು (ಕ.); 3. ತಳರಲ್ (ಕ.); 4. ಬ (ಕ. ಖ. ಗ.); 5. ಯ್ದು (ಕ. ಗ.); 6. ಮೇಂ (ಕ.); 7. ಜಾಲಂಗಳಿಂ ಕಳಿದ (ಘ.); 8. ನಂದಿಸಿ (ಕ.), ನಡಿಪಿ (ಖ. ಗ. ಘ.)...

ಕತಿಪಯ ದಿನಂಗಳಿಂದನೇಕಸಹಕಾರಾಶೋಕಾನೋಕಹನಂದನವನಪ್ರಸ್ಥಮನಿಂದ್ರಪ್ರಸ್ಥಮನೆಯ್ದಿ ವಂದು ಮುನ್ನಮೆ ತನ್ನ ಬರವನಱಿದು ಪೊೞಲೊಳಷ್ಟಶೋಭೆಯಂ ಮಾಡಿ ತನಗಿದಿರ್ವಂದ ಕೊಂತಿಯ ಧರ್ಮಪುತ್ರ ಭೀಮಸೇನಾದಿಗಳ ಪಾದ ಪದ್ಮಂಗಳಂ ತನ್ನ ಕರಕಮಲಂಗಳಿಂದರ್ಚಿಸಿ ತದೀಯಾಶೀರ್ವಚನಂಗಳನಾಂತು ತನಗೆ ಪೊಡಮಟ್ಟ ನಕುಲ ಸಹದೇವರಂ ಪರಸಿ ಪುನಃಪುನರಾಲಿಂಗನಂಗೆಯ್ದು ಮುಹುರ್ಮುಹುರಾಳೋಕನಂಗೆಯ್ಯುತ್ತುಂ ಬಂದು ದಿವಿಜೇಂದ್ರ ವಿಳಾಸದಿಂ ಪೊೞಲಂ ಪುಗೆ—

ಕಂ॥ ಪರಸುವ ಪುರಜನದೊದವಿದ।
ಪರಕೆಗಳಂಬುಧಿನಿನಾದಮಂ ಮಿಗೆ ತಮ್ಮ॥
ಯ್ವರುಮೊಡನೆ ಮೆಱೆದು ಪರಮಾ।
ನುರಾಗದಿಂ ಬಂದು ಪೊಕ್ಕರಂದರಮನೆಯಂ ॥ ೨೩ ॥

ವ॥ ಅಂತು ರಾಜಮಂದಿರಮಂ ಪೊಕ್ಕು ಧರ್ಮಪುತ್ರನನಗಲ್ದ ಪನ್ನೆರಡು [1]ಮಾಸದೊಳಾದ ದಿಗ್ವಿಜಯ ಪ್ರಪಂಚಮುಮಂ ಸುಭದ್ರಾಹರಣಮುಮಂ ಪುರುಷೋತ್ತಮನ ಪರಮ ಮಿತ್ರತ್ವಮುಮನಱಿದು ಸಂತಸಂಬಟ್ಟು ತಮ್ಮೆಸಿಬರು ಮೇಕಸ್ಥರಾಗಿ—

ಮ॥ [2]ಎರೆದಿಂತಟ್ಟಲಿವೇೞ್ಪ ಕನ್ನೆ ಬೞಿಯಂ ಬಂದಳ್ ಮ[3]ರುಳ್ದಂಬುಜೋ।
ದರನಿಂತಟ್ಟಿದನಿಂತು ನೋಂತರೊಳರೇ ಸೈಪಿಂಗೆ ನಾಮಿನ್ನಿಳಾ॥
ಧರನುಂ ಯಾದವ ವಂಶಜರ್ವೆರಸು ಬರ್ಪಂತಟ್ಟೆ ಮಾೞ್ಪಂ ಮನೋ।
ಹರಮಪ್ಪಂತು ವಿವಾಹ ಮಂಗಳಮನೆಂದಂದಟ್ಟಿದರ್ ದೂತರಂ ॥ ೨೪ ॥

ವ॥ ಅಟ್ಟಿದೊಡವರ್ ಪೋಗಿ ಬಲದೇವನುಮಂ ವಾಸುದೇವನುಮಂ ಕಂಡು ತಮ್ಮ ಬಂದ ಕಜ್ಜಮನೊಡಂಬಡಿಸಿ ಯಾದವರ್ವೆರಸು ಮುಂದಿಟ್ಕೊಡ ಗೊಂಡು ಬರೆ ಬರವನಱಿದು ಪಾಂಡವರಯ್ವರುಮಿದಿರ್ವೋಗಿ ಯಥೋಚಿತ ಪ್ರತಿಪತ್ತಿಗಳಿಂ ಕಂಡು ಪೊೞಲ್ಗೊಡಗೊಂಡು ಬಂದು ಶುಭ ದಿನ ನಕ್ಷತ್ರ ಯೋಗ ಕರಣಂಗಳಂ ನಿಟ್ಟಿಸಿ—

ಮ॥ ಪಸುರ್ವಂದರ್ ಪಸೆ ವೇದ ಪಾರಗ ರವಂ ಕಣ್ಬೇಟದುದ್ಧಾನಿಯಂ।
ಪಸರಂ ಗೆಯ್ದುವೊಲಪ್ಪ ಪೊಚ್ಚೞಿ ಮಹಾ ಸಾಮಂತ ಸೀಮಂತಿನೀ।
ಪ್ರಸರಂ ಮಂಗಳ ತೂರ್ಯನಾದಮೆಸೆಯುತ್ತಿರ್ಪನ್ನೆಗಂ ಚಕ್ರಿ ರಾ।
ಗಿಸಿ ಕೆಯ್ನೀರೆಱೆದಂ ಗುಣಾರ್ಣವ ಮಹೀಪಾಲಂಗಮಾ ಕನ್ನೆ [4]ಯಂ
॥ ೨೫ ॥

---

1. ವರುಷ (ಕ. ಖ. ಗ. ಘ.) ; 2. ಯಿರದಿಂ (ಖ. ಘ.), ಯೆರದುಂ (ಗ.) ; 3. ರಲ್ದಂ (ಕ. ಗ.) ; 4. ಗಂ (ಗ. ಘ.) .

ವ॥ ಅಂತವರಿರ್ವರ ಬೇಟಮೆಂಬ ಲತೆಯ ಬೆಳಸಿಂಗೆ ಪೊಯ್ನಾರೆಱೆ[3]ಪಂತೆ ಕೆಯ್ನಾರೆಱೆ[3]ದು ಬಿಯಮುಂ ಮೆಱೆ[3]ದು—

ಪಿರಿಯಕ್ಕರಂ॥ ತೊಟ್ಟ ತು[1]ಡುಗೆಗಳ್ ಕೌಸ್ತುಭ ರತ್ನಮನೋರೊಂದೆ ಮುಸುಳಿಸೆ ಪಾಲ್ಗಡಲೊಳ್।
ಪುಟ್ಟಿದಾನೆಯನಾನೆಗಳ್ ಗೆಲೆವರೆ ಕುದುರೆಗಳ್ ಕುದುರೆಯಂ ಕೀೞ್ಮಾಡೆ॥
ತೊಟ್ಟ ಮದನನ ಪೂಗಣೆಗೆಣೆಯಾಗೆ ಗಣಿಕೆಯರ್ ಗಣಿದಮಂ ಬಗೆಯ ದಿಂತು।
ಕೊಟ್ಟಂ ತಂಗೆಗೆ ಬ[2]ೞಿವೞಿಯೆಂದಿಂತು ಸರ್ವಸ್ವಮೆಲ್ಲಮುಂ ಪುರು ಷೋತ್ತಮಂ ॥ ೨೬ ॥

ವ॥ ಅಂತು ಬ[2]ೞಿವೞಿಗೊ[3]ಟ್ಟಂಬೞಿಯುಂ ಧರ್ಮಪುತ್ರಂ ಬಲದೇವನನೆನಿತಾನುಮುಚಿತ ಪ್ರತಿಪತ್ತಿಗಳಿಂ ಸಂತಸಂಬಡಿಸಿ ದ್ವಾರಾವತಿಗೆ ಕೞಿಪಿದನಾ ವಿವಾಹೋತ್ಸವಾನಂತರದೊಳ್—

ಚಂ॥ ತಳಿರ್ಗಳ ಪಾಸಿನೊಳ್ ಪೊರಳುತಿರ್ದ[4]ಬಿಲಂ ಕಿಡೆ ಸೋಂಕೆ ಸೋಂಕುಗಳ್।
ಕಳೆದುವು ಮೆಯ್ಯ ಸುಯ್ಯ ಪದವೆಂಕೆಗಳಂ ಬಿಗಿಯಪ್ಪಿದಪ್ಪುಗಳ್॥
ಕಳೆದುವು ನಾಣುಮಂ ಕಿಱಿದು ಜಾಣುಮನಟ್ಟುಱನೀವ ಚುಂಬನಂ।
ಕಳೆದುವು [5]ಗರ್ಮಮಂ ಕಳೆದುವಂತವರಿರ್ವರ ಮನ್ಮಥ ದ್ರವಂ ॥ ೨೭ ॥

ಮಾಲಿನಿ॥ ಅಭಿನವ ಮದಲೇಖಾ ಲಾಲಿತಂ ವಿಭ್ರಮ ಭ್ರೂ।
ರಭಸ ಗತಿ ವಿಳಾಸಂ ದೀಪ್ತ ಕಂದರ್ಪ ದರ್ಪ॥
ಕ್ಷುಭಿತ ಗಳ ನಿನಾದ[ಂ] ಪ್ರಸ್ಫುರದ್ಘರ್ಮ ವಾರಿ।
ಪ್ರಭವಮೆಸೆದುದಂತಾ ಕಾಂತೆಗಾ ಕಾಂತ ಸಂಗಂ ॥ ೨೮ ॥

ವ॥ ಅಂತು ಕಾಮದೇವನುಂ ರತಿಯುಂ ವಸಿಷ್ಠನುಮರುಂಧತಿಯುಮೀಶ್ವರನುಂ ಪಾರ್ವತಿಯುಮೆನಿಸಿ ಸಮರೂಪ ಸಮಸತ್ವ ಸಮರತಂಗಳೊಳೆ ಸಮಾ[6]ನುರಾಗಮಂ ಪಡೆಯೆ ಸುಖಮಿರ್ಪನ್ನೆಗಂ ಸುಭದ್ರೆಗೆ ಗರ್ಭಚಿಹ್ನಂಗಳ್ ತೋಱೆ[3]—

ಕಂ॥ ಒಟ್ಟಜೆಯಿಂ ಭಾರತದೊಳ್।
ಕಟ್ಟಾಳ್ಗಳನಿಱಿದು ತವಿಸಲಾ ಜೆಟ್ಟಿಗ[7][ರಂ]॥
ಪುಟ್ಟಿದನೆಂಬವೊಲದಟಂ।
ಪುಟ್ಟಿದನಭಿಮನ್ಯು ಕಲಿತನಂ ಪುಟ್ಟುವವೋಲ್ ॥ ೨೯ ॥

---

1. ಡಿ (ಕ. ಖ. ಘ.); 2. ೞಿ (ಕ.); 3. ಟ್ಟಂ (ಘ.); 4. ರ (ಕ. ಖ.): 5. ಗರ್ವ್ವ (ಕ. ಖ.), ಕರ್ಮ (ಗ.); 6. ನಾನು (ಕ.); 7. ನಾಂ (ಕ.), ರಾಂ (ಗ. ಘ.).

ವ|| ಅಂತಾತಂ ಪುಟ್ಟುವುದುಂ ತಮಗೆ ಸಂತಸಂ ಪುಟ್ಟೆ ಸುಖಮಿರ್ಪನ್ನೆಗಂ—

ಚಂ|| ಅಗರುವ ಮೆಚ್ಚುವಚ್ಚ ಸಿರಿಕಂಡದೊಳಗ್ಗಲಿಸಿತ್ತು [1]ಸೂಡು ಶ |
ಯ್ಯೆಗಳ ಬಿಯಕ್ಕೆ ಜೊಂಪ[2]ದಲರ್ವಾಸುಗಳೊಳ್ ನೆಲಸಿತ್ತು ಪೂತ ಗೊ ||
ಜ್ಜಗೆಗಳ ಸಿಂ[3]ದುರಂಗಳೊಳಗೋ[4]ಗರಗಂಪನೆ ಬೀಱುತಿರ್ಪ ಮ |
ಲ್ಲಿಗೆಯೊಳರಲ್ದ ಸಂಪಗೆಯೊಳಗ್ಗಲಿಸಿತ್ತು ಬಸಂತ ಮಾಸದೊಳ್ || ೩೦ ||

ಉ|| ಮುಂ ಮಹಿಯೆಲ್ಲಮಂ ಶಿಶಿರ ರಾಜನೆ ಬಿಚ್ಚತಮಾಳ್ದನೀಗಳಾ |
ತಂ ಮಿಡುಕಲ್ಕೆ [5][ಸಲ್ಲಿರದೆ] ಪೋಪುದದೇಕೆನೆ ಕಾಮದೇವನಿ ||
ತ್ತಂ ಮಧು ಪೆತ್ತನೀ ನೆಲನನಿಂತಿದು [6]ಪತ್ತಳೆಯೆಂದು ಸಾಱು[7]ವಂ |
ದಂ ಮಿಗೆ ಕರ್ಚಿ ಪಾಱುದುವು ಕೆಂದಳಿರಂ ಗಿಳಿವಿಂಡಿನೋಳಿಗಳ್ || ೩೧ ||

ಚಂ|| ಕೆಟಿಗಣ ಕೆಂದಳಿರ್ ಪುದಿದ ಮೇಗಣ ಪಂದಳಿರೊಂದಿದೊಂದು ಕೆ |
ಯ್ಗಱಿದ ಪಸುರ್ಪುಮಂ ಪೊಳೆವ ಕೆಂಪುಮನಾಳ್ದಿರೆ ಬೇಟದೊಳ್ ಕನ ||
ಲ್ದಱಿದ ವಿಯೋಗಿಯಳ್ಕಿರ್ದೆಯನಾಯ್ದದ[8][ನಾ]ಟಿಸಲೆಂದೆ ಮನ್ಮಥಂ |
[9]ಘಟಿಯಿಸಿ ಕೆಂಪುವಾಸಿದವೊಲಿರ್ದುವು ಮಾಮರಗಳ್ ಬಸಂತದೊಳ್||೩೨||

ಪ[10]ರೆಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತೆಂಬೆರಲ್ |
ಪೊರೆವೊರೆಯುಂ ಸಡಿಲ್ಚೆ ನಡು ಪೊಂಗಿರೆ ಮಲ್ಲಿಗೆಗಳ್ ಬಸಂತದೊಳ್ ||
ಬಿರಿದೊಡೆ ನಲ್ಲರಂ ನೆನೆದ ನಲ್ಲರ ಮೆಲ್ಲೆರ್ದೆಗಳ್ ಬಸಂತದೊಳ್ |
ಬಿರಿದುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ || ೩೩ ||

ನನೆ[11]ಯೆಳಗಂಪನೆತ್ತಿಯುಮಣಂ ನನೆ [12]ನಾಱದರಲ್ದನೇಕ ಕೋ |
ಕನದ ವನಂಗಳೊಳ್ ಸುಱಿದು ತ[13]ಣ್ಣಸಮಾಗದೆ ಕೂಡೆ ಬಂದಮಾ ||
ವಿನ ಪೊಸ ಪೂವಿನೊಳ್ ಪೊರೆದು ಪೊಣ್ಮಿದ[14][ಕ]ಂಪು ಮೊಗಂಗಳಂ ಚಳಿ |
ಲ್ಲೆನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತ ಮಾಸದೊಳ್||೩೪||

ಮುಗು[15]ಳ್ವದನಾದ ಸಂಪಗೆ ಮಡಲ್ತದಿರ್ಮುತ್ತೆ ಮರಲ್ದರಲ್ದ ಮ |
ಲ್ಲಿಗೆ ನನೆಗರ್ಚಿ ಕಾಕಳಿಯೊಳಾಣತಿ ಗೆಯ್ವ ಮದಾಳಿ ಪೋ ಪು[16][ಗ]ಲ್ ||
ಪು[ಗ]ಲೆನುತಿರ್ಪ ಪಕ್ಕಿ ಮನಮಂ ಕವರುತ್ತಿರೆ ಯೋಗಿಗಂ ವಿಯೋ |
ಗಿಗಮರಿದಾಯ್ತು ಪೊಕ್ಕ ಪುಗಿಲಿಂತು ವಸಂತ[17]ಕ ಚಕ್ರವರ್ತಿಯಾ || ೩೫ ||

---

1. ಷೋಡಶೈ (ಕ. ಖ. ಗ.), ಸೋಡು ಸ (ಘ.); 2. ಲರ್ದ ಪಾ (ಕ.); 3. ಧು (ಕ. ಖ. ಘ.); 4. ಜ. (ಘ.); 5. ಕಲ್ಲೆರಡೆ (ಕ. ಖ.), ಸಲ್ಲೆರಡೆ (ಗ. ಘ.); 6. ಪೆತ್ತಿಳೆ (ಕ.); ಪೆತ್ತಳೆ (ಖ.), ಪತ್ತೆಳೆ (ಘ.); 7. ತಂ (ಕ. ಖ.); 8. ಪಾ (ಸ.); 9. ಮು (ಕ. ಖ.); 10. ರಿ(ಗ.) 11. ಗಳಕಂ (ಕ.); 12. ದಾ (ಗ.), ಯಾ (ಘ.); 13. ನ್ನೆ (ಖ. ಘ.); 14. ಕೆ. (ಸ.); 15. ಳದ ನಾಗ (ಕ.); 16. ಗಿ (ಸ.); 17. ನ (ಕ. ಖ.).

ವ|| ಅಂತು ಭುವನಕ್ಕೆಲ್ಲಮೊಸಗೆವರ್ಪಂತೆ ಬಂದ ವಸಂತದೊಳೊಂದು ದಿವಸಮನ್ನವಾಸದೋಲಗದೊಳುದಾತ್ತನಾರಾಯಣನುಂ ಸಾರಾಯಣನುಮಿರ್ದಲ್ಲಿ ಗೊರ್ವಂ—

ಕಂ|| ತೊಟ್ಟೈಕ್ಕವಡಂ ಮರವಿಲ್ |
ಕಟ್ಟಿದ ಪಣೆಕಟ್ಟು ಬೇಂಟೆವಱಿ[3] ದೊರೆಯೊಳೊಡಂ ||
ಬಟ್ಟಸಿಯ ಸುರಗಿ ದಳಿವದ |
ತೊಟ್ಟಂಗಿಗೆ ತನ್ನೊಳಮರೆ ಬೇಂಟೆಯನೊರ್ವಂ || ೩೬ ||

ಬಂದು ಪೊಡವಟ್ಟು ಕಂಡಿಂ |
ತೆಂದಂ ಪೊಲನುಡುಗಿ ಬಂದುದುಡಿದುದು ಪುಲ್ ಕಾ ||
[1]ಡುಂ ದಲೆಲೆಯಿಕ್ಕಿ ಘಳಿಲೆನೆ |
ನಿಂದುವು ತಣಿದುವು ಮೃಗಂಗಳೆತ್ತಲು[2]ಮಿಾಗಳ್ || ೩೭ ||

ಸುೞಿಯದು ಗಾಳಿ ಮೃಗಂ ಕೆ |
ಯ್ವೞಿಗಳ ಮೇತದೊಳೆ ತಣಿದಪುವು ಪಂದಿಗಳುಂ ||
ಪೞಿ ನವಿರಿಕ್ಕಿದುವಾ[3]ಳಂ |
ಪೞು ಪರಿದಾಡಲ್ ಕರಂ ಬೆಡಂಗವನಿಪತೀ || ೩೮ ||

[4]ಬರವಂ ಕಾಡಂ ಬೇಗೆಗೆ |
ಕರಮುಱಿದೆರಡುಂ ಮೃಗಂಗಳುಂ ತಣ್ಬುೞಲೊಳ್ ||
ನೆರೆದೊಡವಂದುವು ತಪ್ಪದಿ |
ದರಿಕೇಸರಿ ಕಂಡು ಮೆಚ್ಚುವೈ ಕೋಳ್ಪಾಂಗಂ || ೩೯ ||

ಕಾಡೊಡಮೆ [5]ವೇಳೆ ಸಲೆ ಕೆ |
ಯ್ಯೊಡಿದುದೆನೆ ನೆಲದೊಳಿರ್ದ ನೆಲ್ಲಿಯ ಕಾ[6]ಯುಂ ||
ನೋಡ ನೆಲಮುಟ್ಟ[7]ಲಟ್ಟಿಯೊ |
ಳಾಡುವೊಡೀ ದೆವಸಮಲ್ತೆ ಬೇಂಟೆಯ ದೆವಸಂ || ೪೦ ||

ವ|| ಮತ್ತಂ ಬೇಂಟೆ [8]ಜಾಱಲ್ಲದೆ ಬೇಂಟೆಯ ಮಾತಂ ಬಿನ್ನಪಂಗೆ[9]ಯ್ವೆಂ—

ಪಿರಿಯಕ್ಕರ|| ಆಡಲಾಡಿಸಲ್ ಪಾೞಿಯಂ ನಿಱಿಸಲುಂ ಪರಿಗೊಳಲ್
ತೊವಲಿಕ್ಕ ಲೊಳಗಂಬರಲ್ |

---

1. ಡಂದವೆಳೆಯಿಕ್ಕಿ (ಖ.), ಡಂದವೆಲೆಯೆಕ್ಕಿ (ಘ.); 2. ನಿರ್ಗಳ್ (ಖ.), ಪರಿನಿರ್ಗಳ್ (ಗ. ಘ.); 3. ದಂ (ಕ.); 4. ಬರದಂ (ಖ. ಘ.), ಪಿರದಂ (ಗ.); 5. ಯೆಳಸಲೇ (ಕ.); 6. ಯಂ (ಕ. ಖ. ಗ.): 7. ದ (ಗ. ಘ.); 8. ಕಾಜಿರ (ಕ. ಖ.); 9. ಯ್ಯೊಂ (ಕ.).

ಕಾಡ ಬೇಲಿಯುಂ ಮಾರ್ಕಾಡನಱಿಯಲುಂ ಮೂಡಿಗೆ[1]ಕಕ್ಕುಂಬಂ ಸುಱಿಸಿ ಜೊಂಪಂ ||
ಬೀಡು ಬಿಡುವಿಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದೆಡೆಯಱಿದುಂ |
ಮಾಡಲ್ ಮಾಡಿಸಲ್ ಪಡೆ ಮೆಚ್ಚೆ ನೀಂ ಬಲ್ಲೆ ನೀಂ ಮೆಚ್ಚೆ ಹರಿಗ ಕೇಳಾನೆ ಬಲ್ಲೆಂ || ೪೧ ||

ಕಂ|| ಮೃಗದೊಲವರಮುಮನರಸನ |
ಬಗೆಯುಮನಱಿದಲಸದೆಳಸಲೋಲಗಿಸಲ್ ನೆ ||
ಟ್ಟಗೆ ಬಲ್ಲನುಳ್ಳೊಡವನ |
ಲ್ತೆ ಗುಣಾರ್ಣವ ಬೇಂಟೆಕಾಱನೋಲಗಕಾಱಂ || ೪೨ ||

ಪಿರಿಯಕ್ಕರ|| ಮೃಗಮುಂ ಗಾಳಿಯನಿರ್ಕೆಯುಂ ಪಕ್ಕೆಯುಂ ಗಣಿದಮುಂ ಕಂಡಿಯುಂ ಮಾರ್ಕಂಡಿ[2]ಯುಂ |
ಪುಗಿಲಂ ಪೋಗಂ ಬಾರಿಯುಂ ಸನ್ನೆಯುಂ ನೂಱುವಮುರ್ಚುವ ನಿಲ್ವೆಡೆಯುಂ ||
ಬಗೆಯಂ ತೆಗೆಯನಲ್ಲಾಟಮುಂ ಕಾಟಮುಂ ನೋವುದಂ ಸಾವುದನೆಲ್ಲಂದದಿಂ|
ಬಗೆದಾಗಳರಸರೊಳೆಲ್ಲ [3]ಕೇಳ್ ನೀಂ ಬಲ್ಲೆ ಬೇಂಟೆಕಾಱರೊಳೆಲ್ಲವಾನೆ ಬಲ್ಲೆಂ || ೪೩ ||

ವ|| ಮತ್ತಂ ನೆಲನುಂ [4][ಗಾ]ಳಿಯುಂ ಕೆಯ್ಯುಂ ಮೃಗಮುಮನಱಿದು ಕಾಲಾಳೊಳಂ ಕುದುರೆಯೊಳಮೊಳಗಂ ಬರಲಾನೆ ಬಲ್ಲೆನಿದು ಪೆರ್ವೇಂಟೆಯುಂದಂ ದೀವದ ಬೇಂಟೆಯುಂ ಬಿನ್ನಪಂಗೆಯ್ವೊಡೆ ಗಾಳಿಯುಂ ಕಱುವು[ಮು]ಱುವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಱುಂ[ಕೆದಱುಂ] ಪೆರ್ಚುಂ ಕುಂದುಮನಱಿದು ಕಾಣಲುಂ ಕಾಣಿಸಲುಂ ಕಡಂಗಲುಂ ಕಡಂಗಿಸಲುಮಡಂಗಲುಮಡಂಗಿಸಲುಮೊಡ್ಡಲುಮೊಡ್ಡಿಸಲುಂ ಪುಗಿಸಲುಂ ಮಿಗಿಸಲುಂ ಕಾಣದುದಂ ಕಾಣಿಸಲುಂ ಮಾಣದುದಂ ಮಾಣಿಸಲು ಮೇಱದುದನೇಱಿಸಲುಂ ಜಾಣನಾಗಿ ಮೂಱು ಕೊಂಬುಮನಾಱು ಸಾಣ್ಪೋಗುಮನೆರಪ್ಪಜ್ಜೆಯುಮಂ ಮೂಱು ಪೊಟ್ಟುಮಂ ಮೃಗದ ಮೂಱರವುಮನಾಱಾರಯ್ಕೆಯುಮಂ ಗಾಳ[5]ಯು[ಮನೆ]ಱಂಕೆಯುಮಂ ಬಲ್ಲನಾಗಿ ನಂಬಿದ ಬರವುಮಂ ನಂಬದ ಬರವುಮನಱಿದು ಮಲೆಯದುದಂಮಲೆಯಿಸಲುಂ ಮಲೆದುದಂ

---

1. ಕುಕ್ಕುಂ (ಖ. ಗ.), ಕುಕ್ಕಂ (ಘ.); 2. ಯಿಂ (ಕ. ಖ. ಗ.); 3. ಮರಿಗ ಕೇಳ್ (ಕ.); 4. ಗೂ (ಸ.); 5. ಯ ಮೆರುಕೆ (ಕ. ಖ.), ಯು ಮೆಱಂಕೆ (ಗ. ಘ.).

ತೊಲಗಿಸಲುಂ ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಮೊಳಪುಗುವುದರ್ಕೆಡೆ ಮಾಡಲುಮೆಡೆಯಾಗದ ಮೃಗಮನವುಂಕಿಸಲುಮೊಲ್ದ[1][ಮೊಲ್ಲ]ದನಲ್ಲರಂತೆ ಮಿಡುಕಿಸಲುಂಪಣಮುಡಿದರಂತಡ್ಡಂಮಾಡಲುಮೆಸೆದ ದೆಸೆಗಳ್ಗೋಡಿಸಲುಂ ಕುಮಾರಸ್ವಾಮಿಯ ನಿಮ್ಮಡಿ[2]ಯ ಕೆಲದೊಳಾನೆ ಬಲ್ಲೆಂ—

ಕಂ॥ ಬರೆದಂತೆ ಬೆನ್ನ ಕರ್ಪೆಸೆ।
ದಿರೆ ಸೂಚಮನುರ್ಚಿ ಪುಲ್ಲೆಗಾಟಿಸಿ ಮಲೆ[3]ತ ॥
ರ್ಪೆರಲೆಯ ಸೋಲಮನಟ್ತಿಯೊ ।
ಅರಿಕೇಸರಿ ನಿಂದು ನೋೞ್ಪುದೊಂದರಸಲ್ತೇ ॥ ೪೪ ॥

ಪದಮುಮನಿಂಬುಮನಣಮಱಿ ।
ಯದ[4][ದೇವು]ದು ಬದ್ದೆ ಬೆಳ್ಮೃಗಂ ಪಜ್ಜೆದಲೆಂ ॥
ಬುದನೆರಡುಮನಱಿವಾತನೆ ।
ಚದುರಂ ಚದುರಂಗೆ ಬದ್ದೆ ವಜ್ಜೆಗಳೊಳವೇ ॥ ೪೫ ॥

ವ॥ ಮತ್ತಂ ಪಂದಿವೇಂಟೆಯ ಮಾತಂ ಬಿನ್ನಪಂಗೆಯ್ವೆಂ—

ಪಿರಿಯಕ್ಕರ॥ ನೆಲನಂ ನಿಱುಗೆಯಂ ನಡೆವೊಂದು ಪದಮುಮಂ ಸೋವಳಿ ಮೇವಳಿ ಬಿಸುವಳಿಯಂ।
ಬಲಮಂ ಶಕುನಮನೊಳ್ಳಿತ್ತುಪಾಯಮುಮಂ ಪಿಡಿವಂದೀತನೆ ವಂದಿ ಕುರುಡು ಕುಂಟೆಂ॥
ದಲಸದಱಿದಿಂತು ಬಲ್ಮೆಗೆ ಬೆರಲೆತ್ತಿ ಪಜ್ಜೆಯಂ ನೆಲೆಗಳಂ ಕಿಡಲೀಯದೆ।
ಸಿಲೆಯ ಮೇಲಾದೊಡಂ ಶಕುನಮಂ ನಿಱಿಪಂತೆ ನಿಱಿಸುವೆಂ ಪಂದಿಯಂ ನೀಂ ಮೆಚ್ಚಲುಂ ॥ ೪೬ ॥

ವ॥ ಮತ್ತಂ ಪಂದಿವೇಂಟೆಯ ನಾಯೆಂತಪ್ಪುವೆಂದೊಡಸಿಯ ನಡುವುಮಗಲುರಮುಂ ತಳ್ತು ಕಟ್ಟಿದ ಕಿವಿಯುಂ ಕವಿದ ಪುರ್ವುಂ ತೋರಮಾಗಿನಿರ್ಮಾಂಸಮಪ್ಪ ಕಾಲ್ಗಳುಂ ನೆಲನಂ ಮು[5]ಟ್ಟದುಗುರ್ಗಳಮನುಳ್ಳುದಾಗಿ ಜಾತ್ಯಶ್ವದಂತೆ ಬೇಗಮಾಗಿ ಕೋಳಿ ಕಾಳಿಕಾಱನಂತೆ ಬೞಿಯಱಿವಿಡಿದು ತುಂಬಿನ ನೀರ[6]ನುರ್ಚಿದಾಗ[7]ಳಡೆ ಪರಿದುಮನ್ನೆಯರಾಳಂತೆ ಕಾ[8]ದಿಯಲಸದೆ ಸೂಳೆಯಂತೆ [9]ಕೋಳಂಪಟ್ಟಟ್ಟಸದೆ ತಕ್ಕನಂತೆ ನಂಬಿಸಿಯುಮೊತ್ತರದಂತೊತ್ತಿಯುಮುರಿಯುಳುರ್ವಂತಳುರ್ದುಕೊಳ್ವುದಿದು ಪಂದಿವೇಂಟೆಯ ನಾಯ್ ಮತ್ತಂ ಕಿಱುವೇಂಟೆಯ ನಾಯ[ಂ] [10]ಕೊಂಡುಂ

---

1. ಬಲ್ಲಿ (ಕ.), ಬಲಿ (ಖ. ಗ. ಘ.) ; 2. ಯರ (ಸ) ; 3. ನ|ಪ್ಪೆ (ಖ.), ದ|ಪ್ಪೆ (ಘ.) ; 4. ದಂತೆವ (ಕ. ಖ.), ದಂಗೆವ (ಗ. ಘ.) 5. ಟ್ಟ (ಕ. ಖ. ಗ.) 6. ಮ (ಕ.), ತು (ಖ.) ; 7. ಳದೆ ಸವಿದು (ಕ. ಖ.), ಳ್ಕಡೆ ಪರಿದು (ಗ.) ; 8. ಡಿ (ಕ.) ; 9. ಕೋಳಂ ಪತ್ತಿ (ಕ.), ಕೋಡಂ ಪಟ್ಟ (ಗ.), ಕೋಳಂ ಪಟ್ಟಲಿ (ಘ.) ; 10 ಕೊಂದು ಬಾನಿ (ಖ.), ಕೊಡುಂ ಜಾರಿ (ಗ.), ಕೊಂದುಂ ಬಾಲಿ (ಘ.).

ಜಾಱಿಯುಂ ನೆಲನುಂ ಪೊೞ್ತುಂ ಪೊಲನುಮನಱಿದು ಬೞಿಯೊಳ್ ಪೊಸತುಂ ಪೞದುಮನಱಿದು ಪರಿಯಿಸಲ್ ನೀನೆ ಬಲ್ಲೆಯದನಾನೆ ಬಲ್ಲೆನೆಂದು ಬಿನ್ನಪಂಗೆಯ್ದೆ ನಂತುಮಲ್ಲದೆ ಬ[1]ಲ್ಮೃಗಂ ಬಸನಕ್ಕಂ ಸವಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯು ಮಲ್ಲದುೞಿದ ಬೇಂಟೆಯುಂ ಬೇಂಟೆಯೆನ್ನೆಂ—

ಪಿರಿಯಕ್ಕರ|| ಪಸಿವು ದೊರೆಕೊಳ್ಗು ಮುಣಿಸುಗಳನಿಕೆಯ್ಗು ಮಾವಂದದೊಳ್
ಕನಲ್ದಾದ ಮೆ[2]ಯ್ಯು|
ನಸಿಯನಾಗಿ[3]ಪುದುಳಿದುವಪ್ಪುವು ಬಗೆಗೊಳಲಪ್ಪುದು ಮೃಗದ ಮೆಯ್ಯೊಳ್||
ನಿಸದಮೆಸೆವುದಂ ಬಲ್ಲಾಳ ಬಿಲ್ಬಲ್ಮೆ ತನ್ನೊ[4]ಳಮಿಸುತೆ ಲೇಸಪ್ಪುದು|
ಬಸನಮೆಂದಱಿಯ[5]ದೇಳಿಸುವರ್ ಬೇಂಟೆಯಂ ಬೇಂಟೆ[6]ಯೆ ಬಿನದಂ
ಗಳರಸಲ್ತೇ || ೪೭ ||

ವ|| ಎಂದು ಬಿನ್ನಪಂಗೆಯ್ದ ಬೇಂಟೆಯಾತಂಗೆ ಮೃಗ ವ್ಯಾಯಾಮ ಕಾರ್ತಿಕೇಯಂಮೆಚ್ಚಿಮೆಚ್ಚುಗೊಟ್ಟುತೊವಲನಿಕ್ಕೆಂದುಮುಂದೆಪೇೞ್ದಟ್ಟಿನಾರಾಯಣನುಂ ತಾನುಮಂತಃಪುರ ಪರಿವಾರಂ ಬೆರಸು ಬೇಂಟೆಗೆ ಪೋಱಮಟ್ಟು ಪಿರಿಯ ತಾಣಕ್ಕೆ ವಂದು ಬೀಲಿಯ ಕೆಲದೊಳಲ್ಲದೆ ಪೆಱಗ[7]ಣುಲಿಪಿಂಗಮುಳ್ಳೊಳಕ್ಕಂ ಗೆಂಟಾಗಿ ಬೀಡಂ ಬಿಡಿಸಿ ಬೇಂಟೆಕಾಱನ ಸಮೆದ ಮಕರ ತೋರಣಮುಮಂ ಗುಣಣೆಯ ಬಾಣಸಿನ ಮಜ್ಜನದ ರಾಣಿವಾಸದ ಮನೆಗಳುಮಂನನೆಯ ಪಂದ[8]ರುಮಂ ತಳಿರ ಕಾವಣಂಗಳುಮಂ [9]ಮಾ[ಡ]ದ ನೆಲೆಯ [10]ಚೌಪಳಿಗೆಗಳುಮನವಱ ಮೇಲಿ[11]ರ್ದೆಲೆಯಡಕೆಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ[12] ಪಣ್ವೆರಸು ನಟ್ಟ ಮ್ಯೆಂದವಾೞೆಗಳುಮಂ ತೊವಲ್ವೆರಸು ನಟ್ಟಾಲಂಗಳುಮನಮರೆ ಮಾಡಿದ ಬಿಟ್ಟುಳಿಯ [13]ಕಕ್ಕುಂಬ ತೊಡಂಬೆಯ ಮೂಡಿಗೆಯ ಕದಳಿಕೆಯ [14]ಕಂಡಪಟಂಗಳುಮಂ ಪಲವುಂ ತೆಱದ ಪಲವುಂ ಪೊಱೆಯಾಗಿ ಕಟ್ಟಿದ ಬಲಿಗಳುಮಂ [15]ಪಡಿಗಳ[16]ನಮರ್ಚಿ ಬಿಲ್ಲುಂ ಕುದುರೆಯುಂ ಕಾಲಾಳುಂ ನಾಯ್ಗಳುಮಂ ತಿಣ್ಣಮಿರಿಸಿ ಕೆಯ್ಯಂ ನೇಣುಮನಳವಿಯೊಳ್ ಕೂಡಿ ನಡೆಯಲ್ವೇೞ್ದು ಬೇಂಟೆವಸದನಂ ಗೊಂಡು [17][ಕ]ಂಡಿಯ ಬಾಗಿಲೊಳುದಾತ್ತ ನಾರಾಯಣನುಂ ನಾರಾಯಣನುಮಿರ್ದು ಪುಗಿಲ ಪುಲ್ಲೆಯ ಮೊದಲುರಮುಮಂ ಪೆಱಗಣ ಪುಲ್ಲೆಯ

1. ಲೆ (ಕ. ಖ. ಗ.); 2. ಯುಂ|ಮ (ಕ. ಖ.), ಯ್ಯುಂ|ಮ (ಗ. ಘ.); 3. ಪ. (ಕ. ಖ. ಗ.); 4. ಳೆಸುಡೆ (ಖ.), ಳಮೆಸುಡೆ (ಗ.), ಳಮೆಸುದೆ (ಘ.); 5. ದೆಳ (ಕ.), ದೆಳೆ (ಖ.); 6. ಯ (ಕ.), ಯಂ (ಖ.), ಯೆಂ(ಗ. ಘ.); 7. ಣುರಿವಿಂ (ಕ.). ಣ ವಿಪಿನಂ (ಗ.); 8. ರ್ಗಳು (ಕ.); 9. ಮೊಡೆದ(ಕ. ಖ. ಗ.), ಮಾಡಿದ (ಘ.); 10. ಚಾವಡಿ (ಘ.); 11. ರ್ದೆಳಅ (ಕ.); 12. ಪಣರ್ವೆರಸು (ಕ.); 13. ಕು (ಕ. ಖ. ಗ.); 14. ಜವನಿಕೆಯ ಕಂದ (ಗ.), ಜವನಿಕೆಯ ಕಂಡ (ಘ.); 15. ಪಿ (ಘ.); 16. ಲಮರ್ಚಿ (ಖ. ಗ.), ಲರ್ಚಿ (ಘ.); 17. ಖ (ಸ.).

ನಡುವುಮನಯ್ದಱೊಳ್ ಮೂಱುಮಂ ಮೂಱೊಳೆರಡುಮನೆರಡಱೊಳೊಂದುಮನೆಚ್ಚು ಬಿಲ್ಲ ಬಲ್ಮೆಯಂ ಮೆಱೆದು—

ಕಂ|| ಮುಂದಣ ಮಿಗಮಂ ಕೞಿಪದೆ |
ಸಂ[1]ದಿಸಿ ಬೞಿಗೊಳ್ವ ಮಿಗಮುಮಂ ಕೞಿಪದೆ ತಾ ||
ನೊಂದಳವಿದಪ್ಪುದೆಚ್ಚು ಬ |
ಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗೞಿಸಿದಂ || ೪೮ ||

ವ|| ಮತ್ತಂ ಬೆರ್ಚಿ ಪೊಳೆದು [2]ಪರಿವ ಪೊಳೆವುಲ್ಲೆಗಳುಮಂ ತಲೆಯಂ ಕುತ್ತಿ ವಿಶಾಲಂಬರಿವ ಕರಡಿಗಳುಮನಡಂಗಿ ಪರಿವ ಪುಲಿಗಳುಮಂ ಸೋಂಕಿ ಪರಿವೆಯ್ಗಳುಮಂ ತಡಂಮೆಟ್ಟಿ ಪರಿವ [3]ಕಡವಿನ ಕಾಡೆಮ್ಮೆಯ ಮರೆಯ ಪಿಂಡುಗಳುಮನಳವಿದಪ್ಪದೊಂದೊಂದನಿಸುವಂತೆ ಪಲವನೆಚ್ಚು ನೆಲಂ ಬಿರಿಯೆ ಗಜಱಿ ಗರ್ಜಿಸಿ ಪಾಯ್ವ ಸಿಂಗಂಗಳುಮಂ ಕಂಡು—

ಕಂ|| ಅಸುಕರಂ ಗಡ ತಮಗತಿ |
ಭಾಸುರ ಮೃಗರಾಜ ನಾಮಮುಮಂ ಗಡಮೆಂದಾ ||
ದೋಸಕ್ಕೆ ಮುಳಿದು ನೆಗೞ್ದರಿ |
ಕೇಸರಿ ಕೇಸರಿಗಳನಿತುಮಂ ತಳ್ತಿಱಿದಂ || ೪೯ ||

ಇಱಿದವಱ ನೆತ್ತರೊಳ್ ತ |
ಳ್ಕಿಱಿದಂ ತನ್ನುರಮನುರು ಗಜಂಗಳನಾಟಂ ||
ದಱಿಸಿ ಕೊಲುತಿರ್ಪುವೆಂಬೀ |
[4]ಕಱುಪಿನೊಳರಿಗಂಬರಂ ಗಜಪ್ರಿಯದೊಳರೇ || ೫೦ ||

ವ|| ಅಂತು ನರ ನಾರಾಯಣರಿರ್ವರುಮನವರತ ಶರಾಸಾರ ಶೂನ್ಯೀಕೃತ ಕಾನನಮಾಗೆಚ್ಚು [5]ಮೃಗವ್ಯ ವ್ಯಾಪಾರದಿಂ ಬೞಲ್ದು ಮನದಂತೆ ಪರಿವ ಜಾತ್ಯಶ್ವಂಗಳನೇಱಿ ಬರೆವರೆ—

ಚಂ|| ಜವಮುೞಿದೊಂದು ಸೋಗೆನವಿಲೊಯ್ಯನೆ ಕರ್ಕಡೆಗಾಸಿಯಾಗಿ ಪಾ |
ಱುವುದುಮಿದೆನ್ನ ನಲ್ಲಳ ರತಿ ಶ್ರಮ [6]ವಿಶ್ಲಥ ಕೇಶ ಪಾಶದೊಳ್ ||
ಸವ ಸವನಾಗಿ [7]ತೋಱಿದಪುದೆಂಬುದೆ ಕಾರಣದಿಂದದಂ ಗುಣಾ |
ರ್ಣವನಿಡಲೊಲ್ದನಿಲ್ಲ ಹಯ ವಲ್ಗನ ಸಂಚಳ ರತ್ನ ಕುಂಡಳಂ || ೫೧ ||

---

1. ಧಿ (ಕ.); 2. ಪರಿವ (ಖ), ಪರಿದು ಪೊಳೆವ (ಘ); 3. ತ (ಕ); 4. ಕುಱುಪಿ (ಖ), ಕುಱುಪಿ (ಗ), ಕಱುಪಿ (ಘ); 5. ಮೃಗವ್ಯಾಪಾರ (ಕ. ಖ.); 6. ವಿಶ್ರುತ (ಖ. ಗ. ಘ.); 7. ಪಾ (ಖ. ಗ. ಘ.).

ವ॥ ಅಂತು ಬೇಂಟೆಯನಾಡಿ ಬೞಲ್ದು ಬೇಸಗೆಯ ನಡುವಗಲೊಳ್ ವನ ಕ್ರೀಡೆ[1]ಗಂ ಜಲಕ್ರೀಡೆಗಮಾಸಕ್ತರಾಗಿ ಯಮುನಾ ನದೀ ತಟ ನಿಕಟವರ್ತಿಗಳಾದ ರಲ್ಲಿ—

ಚಂ॥ ಸರಳ ತಮಾಳ ತಾಳ ಹರಿಚಂದನ ನಂದನ ಭೂಜ ರಾಜಿಯಿಂ।
ಸುರಿವ[2]ಲರೋಳಿ ತದ್ವನಲತಾಂಗಿಯ ಸೂಸುವ ಸೇಸೆಯಾಯ್ತು ಭೃಂ॥
ಗ ರವಮದೊಂದು ಮಂಗಳ ರವಕ್ಕೆಣೆಯಾಯ್ತು ಮನೋನುರಾಗದಿಂ।
ಕರೆವವೊಲಾಯ್ತು ಮತ್ತ ಕಳಹಂಸ ರವಂ ಪಡೆಮೆಚ್ಚೆಗಂಡನಂ ॥ ೫೨ ॥

ಕಂ॥ ಯಮುನಾ ನದೀ ತರಂಗಮ।
ನಮುಂಕಿ ವನಲತೆಯ ಮನೆಗಳಂ ಸೋಂಕಿ ವನ॥
ಭ್ರಮಣ ಪರಿಶ್ರಮಮುಂ ಮು।
ನ್ನಮೆ ಕಳೆದುದು ಬಂದದೊಂದು ಮಂದಶ್ವಸನಂ ॥ ೫೩ ॥

ವ॥ ಅಂತು ಕಾಳಿಂದೀ ಜಲ ಶಿಶಿರ ಶೀಕರ ವಾರಿ ಚಾರಿಯುಂ ಮೃಗಯಾ ಪರಿಭ್ರಮ ಶ್ರ[3][ಮೋತ್ಥಿ]ತ ಸ್ವೇದ ಜಲ ಲವಹಾರಿಯುಮಾಗಿ ಬಂದ ಮಂದಾನಿಲಕ್ಕೆ ಮೆಯ್ಯನಾಱಿಸುತ್ತುಮಾ ಪುಣ್ಯನದಿಯನೆಯ್ದೆವಂದು ತನ್ನ ಬಾಳ ನೀರಂತೆ ಕಱಂಗಿ ಕರ್ಗಿದ ನೀರಂ ನೋಡಿ ವಿಕ್ರಮಾರ್ಜುನಂ ಕಾಳಾಹಿಮಥನನ ಮೊಗಮಂ ನೋಡಿ—

ಕಂ॥ ತನ್ನೊಳಗಣ ಪನ್ನಗನಂ।
ಮುನ್ನೀನ್ ಪಿಡಿದೊಗೆಯೆ ಕಾಯಲಾಱದೆ ಪಿರಿದುಂ॥
ಬನ್ನದ ಕರ್ಪೆಸೆದುದು ತೊಱೆ[3]।
ಗ[4]ನ್ನುಂ ಹರ ಗಳ ತಮಾಳ ನೀಳಚ್ಛವಿಯಿಂ ॥ ೫೪ ॥

ತಡಿವಿಡಿದು ಪೂತ ಲತೆಗಳ।
ನೊಡನೊಡನೆಲರಲೆಯೆ ಬಿಡದೆ ಸುರಿವಲರ್ಗಳನಂ॥
ದೆಡೆಗುಡದೆ ನೂಂಕಿ ಮೆಲ್ಲನೆ।
ತಡಿಯಂ ಸಾರ್ಚಿದಪುದಿದಱ ಬಂಬಲ್ದೆರೆಗಳ್ ॥ ೫೫ ॥

ವಿದಳಿತ ನುತ ಶತಪತ್ರದ।
ಪುದುವಿನೊಳಿರದಗಲೆವೋದ ಹಂಸನನಱಸಲ್॥
ಪದೆದೆಳಸುವ ಪೆಣ್ಣಂಚೆಯ।
ಪದ ಕೊರಲಿಂಚರದ ಸರಮೆ ಸವಿ ಕಿವಿಗಿದಱೊಳ್ ॥ ೫೬ ॥

---

1. ಯಿಂ (ಕ.), ಯಂ (ಖ.); 2. ರಲೋ (ಕ.); 3. ಮಸ್ಥಿ (ಸ); 4. ನ್ನೀಂ (ಕ.).

ಕಂ॥ ನೆಱೆ[3]ಯುಲರ್ದಂಭೋರುಹದಲ।
ದರ್ಱಱುಗಲನ[1]ಲೆದೊಗೆ[2][ದು]ವೆಸೆಯೆ ಜಲದೇವತೆಗಳ್॥
ನಿಱುವಿಡಿದು[3]ಡಲ್ ನಿಮಿರ್ಚಿದ।
ಕುಱುವಡಿಯ ತರಂಗದಂತೆ ಬಂಬಲ್ದೆರೆಗಳ್ ॥೫೭॥

ಚಂ॥ ತುರಗ ಚಯಂಗಳಂತಿರೆ ತರಂಗ ಚಯಂ ಚಮರೀರುಹಂಗಳಂ।
ತಿರೆ ಕಳಹಂಸೆ ಬೆಳ್ಗೊಡೆಗಳಂತಿರೆ ಬೆಳ್ನೊರೆ ಗೊಟ್ಟೆ ಗಾಣರಂ॥
ತಿರೆ ಮಱಿದುಂಬಿ ಮೇಳದವರಂತಿರೆ ಸಾರಿಕೆ ರಾಜ ಗೇಹದಂ।
ತಿರೆ ಕೊಳನಲ್ಲಿ ತಾಮರಸರಂತಿರೆ ತಾಮರಸಂಗಳೊಪ್ಪುಗುಂ ॥೫೮॥

ವ॥ ಎಂದು ಭಾಸ್ಕರ ತನೂಜೆಯನುಭಯ ತಟ ನಿಕಟ ಕುಸುಮ ನಿವಹ ತತ್ಪರಾಗ ಪಟಳ ಪಿಶಂಗ ತರತ್ತರಂಗ ಸರೋಜೆಯಂ ಮೆಚ್ಚಿ ಪೊಗೞ್ದು ಜಲಕ್ರೀಡೆಯಾಡಲ್ ಬಗೆದು ತಾನುಮನಂತನುಮಂತಃಪುರ ಪರಿವಾರಂ ಬೆರಸು—

ಕಂ॥ ಒತ್ತಿದ ತಳ್ಕೈತ್ತಿದ ತೞ[3]।
ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನಮಂ॥
ಪತ್ತಿಸಿ ಜೊತ್ತಿಸೆ ಮದನೋ।
ನ್ಮತ್ತೆಯರವಯವದೆ ಬಂದರರಸಿಯರರೆಬರ್ ॥೫೯॥

ಇದು ಮೃದು ಕಳಹಂಸದ ರವ।
ಮಿದು ನೂಪುರ ನಿನದಮಿದು ರಥಾಂಗ ಯುಗಂ ಮ॥
ತ್ತಿದು ಕುಚ ಯುಗಮಿದು ಸರಸಿಜ।
ಮಿದು ಮೊಗಮೆನಿಸಿದುದು ನೆರೆದ ಪೆಂಡಿರ ತಂಡಂ ॥೬೦॥

ವ॥ ಅಂತು ಮದನನ ಮನೋರಾ[4]ಜ್ಯಮೆ ಬರ್ಪಂತೆ ಬಂದು ತಂಡ ತಂಡದೆ ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಿಂ ಕೆದಱಿಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ—

ಕಂ॥ ನೀಲದ ಬೆಳ್ಳಿಯ ಗಾಡಿಯು।
ಮಿಾ ಲಲಿತಾಂಗಿಯರ ಕಣ್ಗೆ [5]ಪೋಲ್ತುಂ[ನಾಂ]ಕ॥
ಣ್ಗೇಳಿದಮಾಗಿರೆವೆಂದೆಳ।
ವಾಳೆಗ[6]ಳೋಡಿದುವು ಬಾಲೆಯರ್ ಪುಗುವಾಗಳ್ ॥೬೧॥

---

[1]. ರೆವೊಗೆದ (ಕ. ಖ.); [2]. [3]. ದ (ಸ.); [4]. ಜ್ಯಮುಂ (ಕ. ಖ.), ಜ್ಯಂಮುಂ (ಗ.); [5]. ಪೊಲ್ತುಂ ಮೇಣ್ (ಕ.), ಪೋಲ್ತುಂ ಮಿಾಣ್ (ಖ.), ಪೋಲ್ತಾಮಿಂ (ಗ.), ಪೋಲ್ತುಮಿಾಂ (ಘ.); [6]. ಳಾ (ಖ. ಗ. ಘ.).

ವ|| ಅಂತು ಪೊಕ್ಕಾಗಳ್—

ಕಂ|| ಆದಲೆ ನೀರ್ ಗುಂಡಿತ್ತೆಂ |
ದೀದಲೆಯೊಳೆ ನಿಂದು ಸತಿಗೆ ಹರಿಗಂ ತೋಱು ||
ತ್ತಾದರದೆ ಜಾನುದಘ್ನಮು |
ರೋದಘ್ನಂ ಕಂಠದಘ್ನಮೆಂಬಳವಿಗಳಂ || ೬೨ ||

ವ|| ಅಂತು ಜಗುನೆಯ ಮಡುವಂ ತಮ್ಮರಸಿಯರ ವಿಕಟ ನಿತಂಬ ಬಿಂಬಂಗಳ ಘಟ್ಟಣೆಯೊಳಮರೆ ಬಗಿದೊಗೆದ ಮೊಲೆಗಳಳ್ಳೇಱಿನೊಳಳ್ಳಾಡಿ ತಳ್ಳಂ[1]ಕಗುಟ್ಟಿ ನೀರಾಟಮಾಡುವಾಗಳ್—

ಚಂ|| ಪೊಸತಲದೊರ್ಂದು ತಾವರೆಯೆಗೆತ್ತು ಮುಖಾಬ್ಜಮನೊಂದು ತುಂಬಿ ಚುಂ |
ಬಿಸೆ ಸತಿ ಬೆರ್ಚಿ ಪೆಳ್ಪಳಿಸಿ ನೋಟ್ಪುದುಮಾಕೆಯ ಕಣ್ಣ ಬೆಳ್ಪುಗಳ್ ||
ಪಸರಿಸೆ ತುಂಬಿಗಳ್ ಕುವಲಯಂಗಳರಲ್ದುವೆ ಗೆತ್ತು ಮತ್ತೆಯುಂ |
ಮುಸುಱುವುದುಂ ಗುಣಾರ್ಣವನನಾಗಳವಳ್ ಭಯದಿಂದಮಪ್ಪಿದಳ್
|| ೬೩ ||

ಅಸಿಯಳವುಂಕಿ ಕೆಂದಳದೊಳೊತ್ತುವ ನೀರ್ ಮೊಗಮಂ ಪಳಂಚೆ ಬಂ |
ಚಿಸಲಿನಿಸಾನುಮಂ ಮುಳುಗಿದಾಗಡೆ ಭೋಂಕನೆ ಬಂದು ಬಾಳೆಮೀನ್ ||
ಮುಸುಱೆ ನಿರಂತರಂ ಕರ್ದುಕೆ ಸತ್ಕವಿಯೊಳ್ ಸಮನಾಗಿ ಮಾರ್ಗಮಂ |
ಪೊಸಯಿಸಿ ದೇಸಿಯಂ ಪೊಸತು ಮಾಡಿದಳೊರ್ವಳಪೂರ್ವ ರೂಪದಿಂ || ೬೪ ||

ಕಂ|| ಆ ಸಕಳ ಸ್ತ್ರೀ ನಿವಹದ |
ಪೂಸಿದ ಮೃಗಮದದ ಮುಡಿ[2]ಯ ಪೂವಿನ ರಜದಿಂ ||
ವಾಸಿಸಿದ ನೀರ ಕದಡಿಂ |
ದಾಸವದೊಳ್ ಸೊರ್ಕಿ ಬೆಂ[3]ಡು ಮಗುಳ್ದುವು ಮೀಂಗಳ್ || ೬೫ ||

ಮುಡಿ ಬಿಡೆ ಪರೆದೆಸಟ್ಗಳ ಪೊಸ |
ದುಡುಗೆಯ ಮುತ್ತುಗಳ ಕುಚದ ಸಿರಿಕಂಡದ ಬೆ ||
ಳ್ಪೊಡನೊಡನೆಸೆದಿರೆ ಜಗುನೆಯ |
ಮಡು ಗಂಗೆಯ ಮಡುವನಿನಿಸನನುಕರಿಸಿರ್ಕುಂ || ೬೬ ||

ವ|| ಅಂತು ನಾಡೆಯುಂ ಪೊಟ್ತು ಜಲಕೇಳೀ ಲೀಲೆಯೊಳ್ ಮೆಱೆದು ನಿಮಿರ್ದ ಕುರುಳ್ಗಳುಂ ಕೆಂಪೇಱಿದ ಕಣ್ಗಳುಂ ಬೆಳ್ಪೇಱಿದ ಬಾಯ್ದೆಱೆ[3]ಗಳುಂ

---

[1]. ಕು (ಖ. ಗ. ಘ.); [2]. ದ (ಕ.); [3]. ದು (ಕ. ಖ.).

ಪಳಂಚಿದ ಬಣ್ಣಂಗಳುಮೆಸೆಯೆ ಸೊಗಯಿಸುವ ನಿಜ ವಧೂ ಜನಂ ಬೆರಸು ಪೊೞಿಮಟ್ಟಾಗಳ್—

ಕಂ॥ ತೆಱಪುವಡೆದಂಗಜಂ ಕೆ।
ಯ್ಸೆಱೆಗೊಳೆ ನೋಟಕರ ಮನಮುನಾಗಳ್ ಕೊಳದಿಂ॥
ಪೊೞಮುಡೆ ಜಗಿಲ್ತು ಪತ್ತಿದ।
ಕುಱುವಡಿಗಳೆ ಮೆಱೆದುವವರ ನಾಣ್ಗಳ ತೆಱಪಂ ॥ ೬೭ ॥

ವ॥ ಆಗಳ್ ಮಡಿಯ ಭಂಡಾರದ ಮಾಣಿಕ್ಯ ಭಂಡಾರದ ನಿಯೋಗಿಗಳ್ ತಂದು ಮುಂದಿಟ್ಟ ಪೊನ್ನ ಪಡಲಿಗೆಗಳೊಳೊಟ್ಟಿದ ದೇವಾಂಗ ವಸ್ತ್ರಂಗಳುಮನನೇಕ ವಿಧದ ತುಡುಗೆಗಳುಮನೆನಿತಾನುಂ ತೆಱದ ಸುಗಂಧ ದ್ರವ್ಯಂಗಳುಮನರಸಿಯರ್ಗ ಮರಸುಮಕ್ಕಳ್ಗಮಿತ್ತು ತಾಮಿರ್ವರುಂ ಉಟ್ಟುಂ ತೊಟ್ಟುಂ ಪೂಸಿಯುಂ ನೆಱೆಯೆ ಕೆಯ್ಗೆಯ್ದು ದಿವ್ಯಾಹಾರಂಗಳನಾರೋಗಿಸಿ ಕೆಯ್ಗೊಟ್ಟಗೊಂಡು ತಂಬುಲಂಗೊಂಡಿಂ ಬೞಿಯಮಚ್ಯುತಂ ವಿಕ್ರಮಾರ್ಜುನನ ಕೆಯ್ಯಂ ಪಿಡಿದುಕೊಂಡು ತನ್ನ ಬಾಲ ಕ್ರೀಡೆಯ ಸಾಹಸಂಗಳಂ ತೋಱಲೆಂದು—

ಉ॥ ಕೊಂದೆನವುಂಕಿ ಸಂದ ಖರ ಧೇನುಕರಂ ಮುಳಿಸಿಂದಮಿಲ್ಲಿ ಕಾ।
ಳಿಂದಿಯ ಪಾವನಪ್ಪಳಿಸಿದೆಂ ಪಿಡಿದೀ ಸಿಲೆಯಲ್ಲಿ ಮತ್ತಮಾ॥
ಟಂದರನುಗ್ರ ದೈತ್ಯರನಳುರ್ಕೆಯಿನಿಕ್ಕಿದೆನಿಲ್ಲಿ ಮುನ್ನಮೆಂ।
ದಂದು ಗುಣಾರ್ಣವಂಗೆ ಮಧು ಕೈಟಭ [1] ಹಾರಿ ತೊಟಲ್ದು ತೋಱದಂ ॥ ೬೮ ॥

ವ॥ ಅಂತಾ ವನಾಂತರಾಳಮಂ ತೊಟಲ್ದು ತೋಱುತ್ತಿರ್ಪನ್ನೆಗಮನೂನ ದಾನಿಯು ದಾನದುದ್ದಾನಿಯ ದಾನಮುನಾನಲಾನಲ್ಲದೆ ಪೆಱರ್ ನೆಱೆಯರೆಂಬಂತೆ ತೊಟ್ಟನೆ ಕಟ್ಟಿದಿರೊಳ್—

ಕಂ॥ ಉರಿವುರಿಯನೆ ತಲೆನವಿರನು।
ಕರಿಸಿರೆ ಸಂತಪ್ತ ಕನಕ ವರ್ಣಮುಮುರಿಯೊಂ॥
ದುರುಳಿವೊಲಿರೆ ಜಠರಾನಳ।
ನುರಿವಿನಮಂತೊರ್ವನುರಿಯ ಬಣ್ಣದ ಪಾರ್ವಂ ॥ ೬೯ ॥

ವ॥ ಅಂತು ವರ್ಪನಂ ಕಂಡು ಸಾಮಂತ ಚೂಡಾಮಣಿ ತನ್ನೊಳಿಂತೆಂದು ಬಗೆದಂ—

---

[1] ರಾತಿ (ಖ. ಗ. ಘ.).

ಕಂ॥ ತಪ [1]ನಿಯಮ ನಿಯತನೀ ಬ।
ರ್ಪ ಪಾರ್ವನೇನಱ್ತಿ ತನಗದಂ ಬೇಡಿದೊಡಿ॥
ನ್ನುಪಗತ ದುರಿತರ್ ಸಂಪೂ।
ರ್ಣ ಪುಣ್ಯರಾನಲ್ಲದಿಲ್ಲ ಪೇಟ್ ಪೆಱರೊಳರೇ ॥ ೭೦ ॥

ವ॥ ಎಂಬನ್ನೆಗಂ ಸಾಮಂತ ಚೂಡಾಮಣಿಯನೆಯ್ದೆವಂದು ನಾಲ್ಕುಂ ವೇದಂಗಳೊಳ್ ನಾಲ್ಕುಂ ಋಚಂಗಳಂ ಪೇೞ್ದು ಸಿತ ದೂರ್ವಾಂಕುರ ವಿಮಿಶ್ರಂಗಳಪ್ಪ ಶೇಷಾಕ್ಷತೆಗಳಂ ಕೊಟ್ಟು ಮುಂದೆ ನಿಂದನಂ ನಿಮಗೆ ಬಾೞ್ತಿಯಪ್ಪುದಂ ಬೇಡಿಕೊಳ್ಳಿಮೆನೆ—

ಚಂ॥ ಮಣಿ ಕನಕಾದಿ ವಸ್ತುಗಳನೊಂದುಮನೊಲ್ಲೆನವೇವುವಾದವಿ।
ನ್ನುಣಿಸೆನಗಱ್ತಿ ಮೆಯ್ ಪಸಿದು [2]ಜೊಮ್ಮನೆ ಪೋದಪುದೆನ್ನ ವೇೞ್ಪುದಂ॥
ತಣಿಯುಣಲೀವೊಡೀವುದೆನೆ ಪಾರ್ಥನದೇವಿರಿದಿತ್ತೆನಾವುದು।
ಣ್ಬುಣಿಸೆನೆ ಪೇೞ್ವೆನೆಂಬ ಪದದೊಳ್ ನರಕಾಂತಕನಗ್ನಿದೇವನಂ ॥ ೭೧ ॥

ವ॥ ಕಾಣಲೊಡಮಱಿದು ಶರಣಾಗತ ಜಳನಿಧಿಯನೆಯ್ದೆ ವಂದನೀ ಬಕವೇಷಿ ನಿನ್ನನೇನಂ ಬೇಡಿದಂ ನೀನೀತಂಗೇನನಿತ್ತೆಯೆನೆ—

ಚಂ॥ ಪಸಿದುಣ[3]ವೇಡಿದಂ ಬಡವನಾನುಣಲಿತ್ತೆನದಲ್ಲದಿಲ್ಲಿ ದಲ್।
ಕುಸುರಿಯ ಮಾತುಗಾಣೆನೆನೆ ಕೇಳ್ದು ಮುರಾಂತಕನೇಂ ತಗುಳ್ದೆ ಯಿ॥
ನ್ನುಸಿರದಿರೀವ ಮಾತನಿವನುಣ್ಬುದು ಖಾಂಡವವಿಮಾತನಗ್ನಿ ಮುಂ।
ಪುಸಿದಿವನಿಂತೆ ಪಾಯಿಸಿದನಿಂದ್ರನೊಳಾದಿ ನರೇಂದ್ರರೆಲ್ಲರಂ ॥ ೭೨ ॥

ವ॥ ಈತನಜಮುಖ ವ್ಯಾಘ್ರಂ ಶ್ವೇತ ಕೃಷ್ಣ ಕಾರಕನೀತನ ಮಾತು ಮಾತಲ್ಲ ವೆಂದೊಡಾ ಮಾತು ತನ್ನಂ ಮೂದಲಿಸಿದಂತಾಗೆ ವಿದ್ವಿಷ್ಟ ವಿದ್ರಾವಣನಿಂತೆಂದಂ—

ಚಂ॥ ಎರೆದನ ಪೆಂಪುವೇೞ್ಪೊಡನಲಂ ಪೊಣರ್ವಾತನ ಪೆಂಪುವೇೞ್ಪೊಡಾ।
ಸುರಪತಿ ಕೊಟ್ಟ ತಾಣದೆಡೆವೇೞ್ಪೊಡಮಾ ಯಮುನಾನದೀ ತಟಾಂ॥
ತರಮೊಸೆದಿ[4][ತ್ತೆ]ನಾನೆರೆಯೆ ಕೇ[5]ಳ್ದನಿಳಾಧರನೀನದರ್ಕೆ ಮಾ।
ತೆರಡಣಮಾಡಲಾಗದಿದು ಸೈಪಿನೊಳಲ್ಲದೆ ಕೂಡಿ ಬರ್ಕುಮೇ ॥ ೭೩ ॥

ಮ॥ ದನುಜಾರೀ ದಿವಿಜೇಂದ್ರ ಶಾಶ್ವತಗುಣಾ ನಿನ್ನ[6][ಳ್ಕದೇಂ] ಬೇಡಿ [7][ದಾ]।
ನನಲಂ ತೀರ್ಥ ಸಮಿಾಪಮಂಬುನಿವಹ ವ್ಯಾಳೋಳ ಕಾಳಿಂದಿಯಾ॥

---

1. ನೀಯಮನಿವತನಿ ಬ। ರ್ಪನೆ (ಕ.ಖ.ಗ.); 2. ಜೋಂಪನೆ (ಕ.ಖ.) 3. ಬೇ (ಕ.ಖ.ಗ.); 4. ತ್ತೆ (ಸ.); 5. ಳ್ದೆ (ಖ.ಘ.); 6. ಕ್ಕದೇ (ಕ.), ಪಕ್ಕದೆ (ಖ.ಗ.ಘ.); 7. ದಂ। ದ (ಕ.), ದ। ನ (ಖ.ಗ.ಘ.).

ವನಮುಂ [1]ಕೇಳ್ದವು ಭೂತಮಯ್ದುಮಱಿಗುಂ ಕೊಟ್ಟೆರ್ದುದಾ [2]ದಂತಱಿಂ ।
ದೆನಗಿಂ ಮಾಣ್ಬುದು ಸೂಟ[3] ಖಾಂಡವಮನಾಂ ತಳ್ವಿಲ್ಲದಿಂದೂಡುವೆಂ ॥ ೭೪ ॥

ಉ॥ ಒತ್ತಿ ತಱುಂಬಿ ನಿಂದ ರಿಪು ಭೂಜ ಸಮಾಜದ ಬೀರ್ಗಳಂ ನಭ ।
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ ಚಾಗದೊಳ್ಪಿನ ॥
ಚೊತ್ತದೆ [3]ಮಾಣ್ದ ಬಾಳ್ವ ಪುಱುವಾನಸನೆಂಬನಜಾಂಡಮೆಂಬುದೊಂ ।
ದತ್ತಿಯ ಪಣ್ಣೊಳಿರ್ಪ ಪುಱುವಲ್ಲದೆ ಮಾನಸನೇ ಮುರಾಂತಕಾ ॥ ೭೫ ॥

ವ॥ ಎಂದು ಮಱುಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆಮೆಚ್ಚೆಗಂಡನ ಗಂಡವಾತುಮಂ ನನ್ನಿವಾತುಮಂ ಮುರಾಂತಕಂ ಮೆಚ್ಚಿ—

ಮ॥ ಸಮಕಟ್ಟಂಗೊರೆಗಾರುಮಿಲ್ಲರಿಗ ಕೇಳ್ ನಿನ್ನೊಳ್ ಸಮಂ ಧಾತ್ರಿಯೊಳ್ ।
ಹಿಮ[4]ಕೃದ್ಭೂಧರದಂತೆ ನಿನ್ನ ಗುಣ ಸಂದೋಹಂಗಳಂ ಕಾಣಲ ॥
ಕ್ಕುಮೆ ಮತ್ತೊರ್ವನೊಳಾಗದೆಂತೆನೆ ಸಮಸ್ತೋರ್ವೀಧರಾಶೇಷ ಶೇ ।
ಷ ಮಹಾ ನಾಗ ಫಣಾಮಣಿ ದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ ॥ ೭೬ ॥

ಚಂ॥ ಮುನಿಯಿಸಿದಂ ಕರಂ ಪಿರಿಯನಪ್ಪುದು ಬೇಳ್ಪನ ಬೇಳ್ಪ ವಸ್ತು ಕಾಂ ।
ಚನ ಗಿರಿಯಿಂದಮುಗ್ಗಳಮೆನಿಪ್ಪುದದಾದೊಡಮೇನೊ ಜೀವಮು ॥
ಳ್ಳನಮಿಱುದರ್ಥಮುಳ್ಳನೆಗಮಿತ್ತು ನೆಗಳ್ತೆಯನಾಂ[5]ಪುದೆಂಬ ಪೆಂ ।
ಪಿನ ಸಮಕಟ್ಟು ಕಣ್ಗೆ ದೊರೆಯಾರರಿಕೇಸರಿ ನಿನ್ನವೋಲ್ ಪೆಱಂ ॥ ೭೭ ॥

ವ॥ ಎಂದು ತನಗೆ ಕೊಟ್ಟ ಕೋಡಿಂಗೊಡಂಬಟ್ಟ ದಿತಿಜ ಕುಲ ದಾವಾನಲನು ಮನರಾತಿ ಕಾಲಾನಲನುಮನನಲನಿಷ್ಟಾರ್ಥ ಸಿದ್ಧಿಯಕ್ಕುಮೆಂದು ಪರಸಿ ಮನಃ ಪವನ ವೇಗದಿಂ ಪಾಲ್ಗಡಲನೆಯ್ದಿ ತನ್ನ ಬಯ್ತಿಟ್ಟ ದಿವ್ಯ ಸಂಭವಂಗಳಪ್ಪ ಶ್ವೇತಾಶ್ವಂಗಳೊಳ್ ಪೂಡಿದ ದಿವ್ಯ ರಥಮುಮಂ ದಧೀಚಿ ಗಂಡಸ್ಥಮಪ್ಪ ಗಾಂಡೀವಮೆಂಬ ಬಿಲ್ಲುಮಂ ದಿವ್ಯ ಶರಂಗಳೊಳ್ ತೆಕ್ಕನೆ ತೀವಿದ ತವದೊಣೆಗಳುಮಂ ತಂದೆನ್ನ ಪ್ರತಿಜ್ಞೆಯಂ ತೀರ್ಚುವೊಡಮಿಂದ್ರನಂ ಗೆಲ್ವೊಡಮಿವನನೋಘಂ ಕೆಯ್ಕೊಳಲ್ವೇಳ್ಕುಮೆಂದೊಡತಿರಥಮಥನನಗ್ನಿದೇವಂಗೆ ಪೊಡವಟ್ಟು ಕೆಯ್ಕೊಂಡು ಬೃಹಂದಳನೆಂಬ ಸಾರಥಿವೆರಸು ರಥಮನೇಱಲೊಡಂ—

---

1. ಕೇಳ್ವುದು (ಕ.ಖ.); 2. ನ (ಕ.ಗ.ಘ.); 3. ಪೂ (ಕ.ಖ.ಗ.); 4. ವ. (ಕ.); 5. ತು (ಕ.ಖ.).

ಉ|| ಪಾವಕನಟ್ಟಿ ಖಾಂಡವಮನುಂಡಪನರ್ಜುನನೂಡಿದಪ್ಪನೈ
ರಾವತ ವಾಹನಂ ನೆಱೆದು ಸಾಧನ ಸಂಯುತನಾಂಪನಲ್ಲಿ ನಾ ||
ನಾ ವಿಧ ಯುದ್ಧಮುಂಟೆನುತೆ ಶೈಬ್ಯ ಬಳಾಹಕ ಮೇಘವರ್ಣ ಸು |
ಗ್ರೀವ ಹಯಂಗಳಿಂದೆಸೆವುದಂ ರಥಮಂ ಹರಿ ತಾನುಮೇಱಿದಂ || ೭೮ ||

ವ|| ಅಂತು ದಾರುಕಂ ರಥಮಂ ಚೋದಿಸಲೊಡಂ—

ಕಂ|| ಚೋದಿಸುವುದುಮಿರ್ವರ ರಥ |
ಚೋದಕರವರೆರಡು ರಥದ ಗಾಲಿಯ ಕೋಳಿಂ ||
ದಾದ ರಜಃಪಟಲಂ ಕವಿ |
ದಾದಮೆ ತೀವಿದುದು ದಿವಿಜ ವಧುವಿರ ಕಣ್ಣೊಳ್ || ೭೯ ||

ವ|| ಅಂತೆಯ್ದಿ ಯಮುನಾ ನದಿಯ ತೆಂಕಣ ದೆಸೆಯೊಳ್ ನೂಱು ಯೋಜನ ದಗಲದೊಳಮನಿತೆ ನೀಳದೊಳಂ ನೆಱೆದು—

ಮ|| ಕಕುಭಾಶೋಕ ಕದಂಬ ಲುಂಗ ಲವಲೀ ಭೂಜಾರ್ಜುನಾನೋಕಹ |
ಪ್ರಕರಂ ಪುಷ್ಪಿತ ಹೇಮ ಪಂಕಜ ರಜಸ್ಸಂಸಕ್ತ ಭೃಂಗಾಂಗನಾ ||
ನಿಕರಂ ಸಾರಸ ಹಂಸ ಕೋಕಿಳ ಕುಳಧ್ವಾನೋತ್ಕರಂ ಚೆಲ್ವನಾ |
ಯ್ತು ಕರಂ [1]ಸ[ಕ್ತ] ನಿಳಿಂಪ ದಂಪತಿಗಳಿಂದಾ ನಂದನಂ ನಂದನಂ || ೮೦ ||

ವ|| ಎನೆ ಸೊಗಯಿಸುವ ಖಾಂಡವ ವನಮಂ ವನರುಹನಾಭಂ ವಿಕ್ರಮಾರ್ಜು ನಂಗೆ ತೋಱಲ್ಕೆ ತೋಱೆ—

ಮ|| ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂಡುಣ್ಬುವಾಟಂದು ಬಂ |
ದಲೆಯಲ್ಕಣ್ಮದು ಗಾಳಿ ಸೂರ್ಯ ಕಿರಣಾನೀಕಕ್ಕಮೆಂದಪ್ಪೊಡಂ ||
ಸಲವಿಲ್ಲುದ್ಧತ ಸಿದ್ಧ ಖೇಚರರೆ ತಾವಾಳ್ವೇ[2]ರಿಯಾಗಿಂತು ನಿ |
ಚ್ಚಲುಮೋರಂತಿರೆ ಕಾವರೀ ದೊರೆತು ಕಾಪೀ ನಂದನಕ್ಕಿಂದ್ರನಾ || ೮೧ ||

ಉ|| ಒರ್ಮೆ ತೊಱಲ್ಕೆ ನೋಡಿ ಬನಮಂ ಮಘವಂ ಶಚಿ ಪೂತ ಚೂತಮಂ |
ನೆರ್ಮಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ||
ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂಱನೆ ಬಾರಿಸಿದಂ ದಲೆಂದೊಡಿಂ |
ಕೂರ್ಮೆಯ ಮಾತು ಮೆಚ್ಚುವನಿತರ್ಕೆ ಬಳಾರಿ [3]ಮುರಾಸುರಾರಿ[ಯೇಂ]
|| ೮೨ ||

---

[1]. ನಾಗ (ಕ.), ಸಕಲ (ಖ.), ಸಂಕ (ಗ.), ತಕ್ಕ (ಘ.); [2]. ಲಿ (ಘ.); [3]. ಸುರಾರಿ ಶೌರಿಯಂ (ಕ.), ಮುರಾರಿ ಶೌರಿಯಂ (ಖ.), . . ಸುರಾರಿಯಂ (ಗ. ಘ.).

ಕಂ॥ ಇಂತಪ್ಪ ಬನಮನಿದ[1]ನಿ।
[ನ್ನೆ]ಂತನಲನನೂಡಲೆಂದು ಪೂಣ್ದಯ್ ಮುಂ ಪೂ॥
ಣ್ದಂತೂಡು ಪೂಡು [2][ಶಿತ] ಶರ।
ಸಂತತಿಯಂ ಬಿಲ್ಲೊಳೇಕೆ ನೀಂ ತಡೆದಿರ್ಪಯ್ ॥ ೮೩ ॥

ಪರಮಾಣುವನಿತು ಬನದೊಳ್।
ಚರಾಚರಂ ಪೋಗೆ ತಣಿಯುನನಲನದರ್ಕಾಂ॥
ನೆರಮಪ್ಪೆನುಗ್ರ ಕಿನ್ನರ।
ಸುರ ದನುಜೋರಗರ ಕದನಮೇಂ ನಿನಗರಿದೇ ॥ ೮೪ ॥

ವ॥ ಎಂಬುದುಮಂತೆ ಗೆಯ್ವೆನೆನ್ನ ಸಾಹಸಮಂ ನೋಡಿಮೆಂದು ವಿಕ್ರಾಂತ ತುಂಗನುತ್ತುಂಗ ಭುಜಪರಿಘದೆರಡು ದೆಸೆಯೊಳಂ ತವದೊಣೆಗಳಂ ಬಿಗಿದು ಗಾಂಡೀವಮನೇಱಿಸಿ ನೀವಿ ಜೇವೊಡೆದು ದಿವ್ಯಾಸ್ತ್ರಂಗಳಂ ಪಿಡಿದು ಕೆಯ್ಗಾವಿ ಕೊಂಡಗ್ನಿದೇವನಂ ನೋಡಿ—

ಉ॥ ಓಡುಗೆ ನಿಮ್ಮ ಮೆಯ್ಯ ಪಸಿವಾಂತ ವಿರೋಧಿಗಳೆನ್ನ ಕೆಯ್ಯೊಳ।
ಬ್ಬಾಡುಗೆ ಕೊಳ್ಳಿಮುಣ್ಣಿಮೆನೆ ಕೇಳ್ದನಲಂ ಪರ[3]ಸುತ್ತುಮಾ ಲಯ॥
ಕ್ರೀಡೆಯೊಳೀ ಚರಾಚರಮುಮಂ ಸುಡುವಂದಿನ ಮೆಯ್ಗುಮುಗ್ಗಳಂ।
ಮಾಡಿ ತಗುಳ್ದು ನೀಳ್ದು ಬಳೆ[4]ದರ್ವಿಸೆ ಪರ್ವಿದನಾ ವನಾಂತಮಂ ॥ ೮೫ ॥

ಮ॥ ಫಳ ಕರ್ಪೂರ ಲವಂಗ ಲುಂಗ ಲವಳೀ ಹಿಂತಾಳ ತಾಳೀ ತಮಾ।
ಳ ಳತಾ ಸುಂದರ ನಂದ[5]ನಕ್ಕಳುರೆ ಮುಂ ತನ್ನರ್ಚಿಗಳ್ [6]ಬಂದು ಮೊ॥
ಕ್ಕಳಮೆತ್ತಂ ಸುರಿಯುತ್ತುಮಿರ್ಪ ರಸಮಂ ಮುಂ ಪೀರ್ದುಕೊಂಡಂ
ಮನಂ।
ಗೊಳೆ ಸಪ್ತಾರ್ಚಿ ಪೊದಳ್ದು ನೀಳ್ದೊಸಗೆಯಿಂದಾಪೋಶನಂಗೊಳ್ವವೋಲ್
॥ ೮೬ ॥

ಕಂ॥ ನನೆಕೊನೆಯ ತಳಿರ ಪೂವಿನ।
ಬನಮನಿತುಂ ಶಿಖೆಗಳಳುರೆ ಬೆಂಕೆಯ ಪೊಯ್ದು॥
ರ್ವಿನೊಳೆ ಕೊರಗಿರ್ದ ಲತೆಗಳ।
ಕೊನೆಗೊನೆಯನೆ ದಹನನಳುರ್ದು ಕೊನೆಗೊನೆಗೊಂಡಂ ॥ ೮೭ ॥

ವ॥ ಆಗಳಾ ಬನಮನಿಂದ್ರನ ಬೆಸದೊಳ್ ಕಾವ ಕಿನ್ನರ ಕಿಂಪುರುಷ ಗರುಡ ಗಂಧರ್ವ ಸಿದ್ಧ ವಿದ್ಯಾಧರ ಬಲಮನಿತುಮೊಂದಾಗಿ ವಿಕ್ರಮಾರ್ಜುನನೊಳ್ ತಾಗೆ—

---

1. ನೀನೆಂ (ಕ. ಗ. ಘ.); 2. ಸರಗಳ (ಕ.), . . ಶರ (ಖ.), . . ಸರ (ಗ. ಘ.); 3. ಸುತ್ತೆ ಮಾಲೆಯ (ಕ.), ಸುತ್ತು ಮಾಲೆಯ (ಗ.); 4. ದುರ್ವ್ವಿಸಿ (ಕ), ದರ್ವಿಸಿ (ಗ.); 5. ನಂಗಳೆನೆ (ಖ. ಗ.). ನಂಗಳನೆ (ಘ.); 6. ಬೆಂ (ಕ.).

ಕಂ॥ ಕೊಂಡಪುದುರಿ ಬನಮುನದಂ।
ಕಂಡೆಂತಿರಲಕ್ಕುಮೆಂದು ತಾಗಿದ ನೆಗಟ್ದೊ॥
ಳ್ಗಂಡರ ಗಂಡೋಡುವಿನಂ।
ಕೊಂಡುವು ಗಾಂ[1]ಡೀವ ಮುಕ್ತ ಬಾಣ ಗಣಂಗಳ್ ॥೮೮॥

ವ॥ ಅಂತು ಕಾದೆ ವಿದ್ವಿಷ್ಟವಿದ್ರಾವಣನ ಮೊನೆಯಂಬಿನಂಬೇಱಂಗಳ್ಕಿ ಹತ ವಿಹತ ಕೋಳಾಹಳರಾಗಿ ಸಿದ್ಧರಸಿದ್ಧರಾಗೆಯುಂ ಕಿನ್ನರರಿನ್ನಾರ ಮಱೆಯುಂ ಪುಗುವಮೆನೆಯುಂ ಕಿಂಪುರುಷರ್ ಕಾಪುರುಷರಂತೆ ಬಾಯುಂ ಬಿಡೆಯುಂ ಗಂಧರ್ವರ್ ಗರ್ವಮನುಳಿದೊಂದೊರ್ವರಂ ಮಿಗೆಯೋಡೆಯುಂ ವಿದ್ಯಾಧರ ರಥರರಾಗೆಯುಂ ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ—

ಕಂ॥ ನಾಗರ ಖಂಡಂಗಳನಾ।
ನಾಗರ ಖಂಡದೊಳೆ ತೊಡರೆ ನರನಿಸುವುದುಮಾ॥
ನಾಗರ ಖಂಡಂಗಳುಮಂ।
ನಾಗರ ಖಂಡಮುಮನಳುರ್ದು ಕೊಂಡಂ ದಹನಂ ॥೮೯॥

ವಿರಹಿಗಳ ಸುಯ್ಯ ಬೆಂಕೆಯೊ।
ಳಿರದೊಣಗಿದುವಕ್ಕುಮೀಗಳೆನಲುರಿವುರಿಯಿಂ॥
ಕರಿಮುರಿಕನಾದುವುನ್ಮದ।
ಪರಭೃತ ಷಟ್ಚರಣ ರಾಜಕೀರ ಕುಲಂಗಳ್ ॥೯೦॥

ಉರಿ ಕೊಳೆ ದೆಸೆಗಾಣದೆ ದೆಸೆ।
ವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂ॥
ಬೆರಸೊಳಱೆ ನೆಗೆದುದಾ ವನ।
ಕರಿ [2]ಶರಭ ಕಿಶೋರ ಕಂಠಗರ್ಜನೆ ಬನದೊಳ್ ॥೯೧॥

ಸಂಗತ ಧೂಮಾವಳಿಯನಿ।
ಭಂಗಳೆ ಗೆತ್ತೊಳಱು ಪಾಯ್ದು ಪೊಗೆ ಪುಗೆ ಕಣ್ಣಂ॥
ಸಿಂಗಂಗಳಳುರೆ ಗರ್ಜಿಸಿ।
ಲಂಗಿಸಿ ಘುಡಪುಡನೆ ಪುಟ್ಗಿ ಸತ್ತುವು ಪಲವುಂ ॥೯೨॥

ವ॥ ಮತ್ತಮಲ್ಲಿ ಕೆಲವು ಲತಾಗೃಹಂಗಳೊಳಂ ಧಾರಾಗೃಹಂಗಳೊಳಂ—

---

1. ಡಿವಿಯ (ಖ. ಗ. ಘ.); 2. ಕಳಭ (ಖ. ಗ. ಘ.).

ಕಂ॥ ಒಡನಳುರೆ ಕಿರ್ಚುೞ ತೋೞಂ।
ಸಡಿಲಿಸದಾ ಪ್ರಾಣವಲ್ಲಭ[ರ್] ಪ್ರಾಣಮುನಂ॥
ದೊಡಗ[1]ಳಿದರೋಪರೋಪರೊ।
ಳೊಡಸಾಯಲ್[2]ಪಡೆದರಿನ್ನವುಂ ಸಯ್ಪೊಳವೇ ॥೯೩॥

ವ॥ ಅಂತು ಖಾಂಡವ ವನಮೆಲ್ಲಮುನನಲಂ ಪ್ರಳಯ ಕಾಳಾನಳನಂತಳುರ್ದು ಕೊಳೆ ಬಳಸಿ ಬಂದು ಕಾವ ನಾರಾಯಣನ ಸುದರ್ಶನಮೆಂಬ ಚಕ್ರದ ಕೋೞುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರಂಗಳ ಕೋೞುಮುನಗ್ನಿದೇವನ ಶಿಖಾ ಕಳಾಪದಕೋೞುಮನೆಂತಾನುಂ ಬಂಚಿಸಿ ಬಲೆ ಪಱಿದ ಕೋಕನಂತೊರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು—

ಮಲ್ಲಿಕಾಮಾಲೆ॥ ದೇವ ಬಿನ್ನಪಮಿಂದು ಖಾಂಡವಮುಂ ಕೃಶಾನು ತಗುಳ್ದು ನಾ।
ನಾ ವಿಧಂ ಸುಡೆ ನೋಡಲಾರದೆ ತ[3][ಳ್ತ] ದೇವರ ಕಾಪಿನಾಳ್॥
ದೇವ ಕಿನ್ನರ ಪನ್ನಗಾವಳಿ ಮೊಟ್ಟನಪ್ಪಿನಮೆಚ್ಚು ಕೊಂ।
ದೇವರೆಂದಱಿದಿರ್ದನೊರ್ವನಗುರ್ವು ಪರ್ವಿರೆ ದೇವರಂ ॥೯೪॥

ಕಂ॥ ಎರಡು ರಥಮೊಳವು ನೋಟ।
ಕ್ಕೆರಡಱ[3]ೊಳವನೊಂದು ರಥಮೆ[4]ತೋಟಿಗೆ ಪಲವಾ॥
ಗಿರೆ ಪಱಿದು ಕಣ್ಣೊಳಿನ್ನುಂ।
ತಿಱಿದಪುದುಱಿದಪುದು ನಮ್ಮ ಬನಮೆನಿತನಿತುಂ ॥೯೫॥

ವ॥ ಎಂಬುದುಂ ಪೌಳೋಮೀ ಪತಿ ತನ್ನ ದಿವ್ಯಜ್ಞಾನದೊಳ್ ನೋಡಿ ಚಕ್ರಿಯುಂ ವಿಕ್ರಮಾರ್ಜುನನುಮಪ್ಪುದನಱಿದು ಗಜಱಿ ಗರ್ಜಿಸಿ ಪ್ರಳಯ ಕಾಳಾಂಬುದದಂತೆ ಮೊೞಗುಮಂ ಸಿಡಿಲ ಬಳಗಮುನೊಳಕೊಂಡ ದ್ರೋಣ ಮಹಾ ದ್ರೋಣ ಪುಷ್ಕಳಾವರ್ತ ಸುವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳವು ವಿಂಧ್ಯಾಚಳ ಕೂಟ ಕೋಟಿಗಳೆ ಕಿೞ್ತೆೞ್ದುಬರ್ಪಂತೆ ಬಂದು ದೆಸೆಗಳೆಲ್ಲಮುಂ ಮುಸುಱಿ ಕೞ್ತಲಿಸಿ ಕವಿದು—

ಚಂ॥ ಕವಿದುವು ಸಪ್ತಸಾಗರ ಜಲಂಗಳೆ ಲೋಕಮುನೀಗಳೆಂಬಿನಂ।
ಕವಿದು ಮುಗಿಲ್ಗಳಲ್ಲಿ ಕಱ[3]ಯುತ್ತಿರೆ ಪಾವಕನುರ್ಕುಗೆ[5]ಟ್ಟಿದೆಂ॥
ತುವೊ ತೊದಳಾಯ್ತು ದಾನಮೆನೆ ಮಾರುತ ಬಾಣದೆ ಮೇಘ ಮಾಲಿಕಾ।
ನಿವಹಮುನೆಚ್ಚು ಕೂಡೆ ಶರಪಂಜರಮುಂ ಪಡೆದಂ ಗುಣಾರ್ಣವಂ॥೯೬॥

---

1. ಲೆ (ಕ.); 2. ಬಗೆದರಿ (ಕ.), ಬಗೆದವಿ (ಖ.); 3. ಳ್ತು (ಕ. ಗ. ಘ.), ಳ್ದು (ಖ.); 4. ಕೋ (ಕ. ಖ. ಗ.); 5. ಟ್ಟು (ಕ. ಖ.).

ವ|| ಅಂತು ಪುಂಖಾನುಪುಂಖಮಾಗೆ ಪಾಯ್ವ ಶರಸಂಧಾನದೊಳೆಡೆವಱಿಯದಂತೆರಡುಂ ಕೆಯ್ಯೊಳ್ ತೋಡುಂ ಬೀಡುಂ ಕಾಣಲಾಗದಂತಿಸೆ ತುಱುಗಿ ಕವಿವಂಬಿನ ಮಱಿಯೆ ಮಱಿಯುಂ ಮಾಣಿಸೆ ದಿವ್ಯಾಸ್ತ್ರಂಗಳಿಂ ನೂಱು ಯೋಜನ ದಳವಿಯ ಖಾಂಡವವನಮೆಲ್ಲಮಂ ತಟ್ಟೆ ಮೆಡಱಿ ಮಶಕ ಮಾತ್ರಮಪ್ಪೊಡಂ ನಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರದೊಳ್ ಮುಚ್ಚಿ ಮುಸುಕಿದಾಗಳಭಿನವ ಜೀಮೂತವಾಹನನ ದಿವ್ಯಾಸ್ತ್ರದ ಕೋಳ್ಗಿರಲಾಱದೆ ಜೀಮೂತಂಗಳೆಲ್ಲಂ ತೆರಳ್ದೋಡಿದೊಡಗ್ನಿದೇವನಾ[1]ವಗೆಯ ಕಿರ್ಚಿನಂತೊಳಗೊಳಗಳುರ್ದು—

ಕಂ|| ವನ ಖಗ ವನ ಮೃಗ ವನ ತರು |
ವನ ಚರ ವನ ವನಜ ನಿವಹಮುಳ್ಳನಿತುಂ ಸೀ ||
ರನಿತುಮಣಮುಱಿದುದಿಲ್ಲೆಂ |
ಬಿನಮುಂಡಂ ದಹನನಳುರ್ದು ಖಾಂಡವವನಮಂ || ೯೭ ||

ವ|| ಅಂತಾ ವನ ಗಹನಮೆಲ್ಲಂ ದಹನಮಯಮಾದ ಪ್ರಸ್ತಾವದೊಳ್ ವಿಸ್ಮಯಮಾಗೆ ಮಯನೆಂಬ ದಾನವ ವಿಶ್ವಕರ್ಮಂ ನೆಗೆದುರಿವುರಿಮಾಲೆಗಳಂ ಗದೆಯೊಳ್ ಬೀಸುತ್ತುಂ ಪೊಱಮಡೆ ಪೊಱಮಡಲೀಯದೆ—

ಕಂ|| ಒಂದು ದೆಸೆಯೊಳ್ ತಗುಳ್ದ ಮು |
ಕುಂದನ ಕರಚಕ್ರಮೊಂದು ದೆಸೆಯೊಳ್ ನರನೆ ||
ಚ್ಚೊಂದು ಶರಮೊಂದು ದೆಸೆಯೊಳ್ |
ಕುಂದದೆ ದಹನಾರ್ಚಿ ಸುತ್ತಿ ಮುತ್ತುವ ಪದದೊಳ್ || ೯೮ ||

ಶರಣಕ್ಕೆನಗರಿಕೇಸರಿ |
ಯೆರಡು ಪದಾಂಬುಜಮು[2]ವಿಗಾಗಳೆಂಬುದುಮಾಗಳ್ ||
ಹರಿ ಚಕ್ರಂ ಕೊಳ್ಳದೆ ನರ |
ಶರಮುರ್ಚದೆ ದಹನ ಶಿಖೆಗಳಳುರದೆ ಅವನಂ || ೯೯ ||

ವ|| ಆಗಳ್ ಮಯಂ ವಿಸ್ಮಯಂಬಟ್ಟು ಪೊಡವಟ್ಟು ಪೋದನಾಗಳಾ ವನಾಂತರಾಳದೊಳಿರ್ಪ ತಕ್ಷಕನ ಮಗನಪ್ಪಶ್ವಸೇನನೆಂಬ ಪನ್ನಗಂ ತನ್ನ ತಾಯುಂ ತನ್ನ ಬಾಲಮಂ ಕರ್ಚಲ್ವೇಟ್ಟು ದಹನಾರ್ಚಿಗಳಿಂ ಬರ್ದುಂಕಿ ನೆಗೆದು ಪಾಱುವಾಗಳದನೆರಟ್ಟುಂಡಮಪ್ಪಿನಮಾಖಂಡಳತನಯನಿಸುವುದುಂ ತನ್ನ ಬಾಲಂಬೆರಸುರಿಯೊಳ್ ಬಿಟ್ಟು ಮಿಡುಮಿಡುಮಿಡುಕುತಿರ್ದ ಜನನಿಯಂ ಕಂಡು ಪಾವುಗಳುಳ್ಳ ಪಗೆಯಂ ಮಱೆಯವೆಂಬುದುಂ ನನ್ನಿಮಾಡಿ—

---

[1]. ವಿ (ಕ.) ; [2]. ಮೆನ್ನನೆಂ (ಖ. ಘ.), ಯೆಂನನೆಂ (ಗ.).

ಕಂ || ಪಗೆ ಸಾರುವುದುಂ ಕೊಲ್ಲಿಂ |
ಪಗೆ ಸಾಱಿದ ನಿನ್ನ ನಾರ ಮಱಿಯುಂ ಪೊಕ್ಕುಂ ||
ಪಗೆಯಂ ನೆಱಪೆನೆ ನೆಱಪುವ !
ಬಗೆಯೊಳ್ ಪೊಕ್ಕಂ ಕಡಂಗಿ ಕರ್ಣನ ದೊಣೆಯಂ || ೧೦೦ ||

ವ|| ಅಂತಶ್ವಸೇನನರ್ಥಾವಲಿಕಮೆಂಬಮೋಘಾಸ್ತ್ರಮಾಗಿ ಕರ್ಣನದೊಣೆಯೊಳಿರ್ದನಿತ್ತ ಖಾಂಡವ ವನದೊಳಗೆ ಮಂದಪಾಲನೆಂಬ ಮುನಿಗಮೊಂದು ಲಾವಗೆಗಂ ಪುಟ್ಟಿದ ನಾಲ್ಕುಂ ಲಾವಗೆಗಳಗ್ನಿಸೂಕ್ತಂಗಳನೋದುತ್ತುಮದಿರದಿದಿರಂ ಬರೆ ಮೆಚ್ಚಿ ಬರವನಗ್ನಿದೇವಂ ಬೇಡಿಕೊಳ್ಳಿಮೆಂದೊಡೆಮ್ಮನ್ವಯಕ್ಕೆ ನೀನ್ ತಣ್ಣಿದೆಯಾಗೆಂದು ಬೇಡುವುದುಂ ತದಸ್ತುವೆಂದನಿತ್ತಲಿಂದ್ರಂ ತನ್ನ ಬಲಮೆಲ್ಲಮಳ್ಕಿಮೆಳ್ಕಿದಂತಾದುದೆಂಬುದಂ ಕೇಳ್ದು—

ಚಂ|| ಮಗನೆನಗೆಂದು ಪೇೞ್ ಪಿಡಿದು ಕಟ್ಟದೆ ಮಾಣ್ಪನೆ ಪಾರ್ಥನಂ ಧರಿ |
ತ್ರಿಗೆ ಗುರುವೆಂದು ವಜ್ರದೊಳುರುಳ್ಚದೆ ಮಾಣ್ಬನೆ ಚಕ್ರಿಯಂ ಕರಂ ||
ಬಗೆಯದೆ ಗೊಡ್ಡಮಾಡಿದರ್ಗೆ ತಕ್ಕುದನೀಗಳೆ ಮಾೞ್ಪೆನೆಂದು ತೊ |
ಟ್ಟಗೆ ಪೊಱಮಟ್ಟನೇಱಿ ನಿಜವಾಹನಮಂ ದಿವದಿಂ ಸುರಾಧಿಪಂ || ೧೦೧ ||

ವ|| ಅಂತು ದೇವನಿಕಾಯಂ ಬೆರಸು ಯುದ್ಧ ಸನ್ನದ್ಧನಾಗಿ ಪರಸೈನ್ಯ ಭೈರವನೊಳಿಱಿವೆನೆಂಬ ಪ[1]ೞುವಗೆಯೊಳ್ ಭೈರವಂಬಾಯ್ವಂತೆ ಬಂದು ನಿಂದ ಪುರಂದರನಲ್ಲಿಗೆ ಸರಸಿಜಸಂಭವಂ ಬಂದು ಮಾರ್ಕೊಂಡು—

ಚಂ|| ಬನಮನೆ ಕಾಯಲೆಂದಿಱಿವೆಯಪ್ಪೊಡೆ ಮುನ್ನಮೆ ಪೋದುದಂದು ಪಾ |
ರ್ಥನೊಳೆನಗೇವಮೆಂಬ ಬಗೆಯುಳ್ಳೊಡೆ ನಿನ್ನಯ ಪುತ್ರನಚ್ಯುತಂ ||
ಗಿನಿಸೆರ್ದೆ ನೋವೆಯಪ್ಪೊಡದು ಕೂಡದು ಮೂವರೊಳೊರ್ವನೆಮ್ಮ ಮಾ |
ತಿನಿತೆ ಗುಣಾರ್ಣವಂಗೆ ಕುಡು ಗೆಲ್ಲಮನಿಂತಿದೆ ಕಜ್ಜದುಜ್ಜುಗಂ || ೧೦೨ ||

ವ|| ಎಂದು ಕಮಲಾಸನನಾ[2]ಸೆದೋಱಿ ನುಡಿದುಳ್ಳುದನೆ ನುಡಿದೊಡಂತೆಗೆಯ್ವೆನೆಂದು—

ಚಂ|| ಸುರಿವರಲೊಂದು ಬೆಳ್ಸರಿಯದಾತ್ಮ ತನೂಭವನುತ್ತಮಾಂಗದೊಳ್ |
ದೊರೆಕೊಳೆ ನಿಲ್ಲದಲ್ಲಿ ಕುಸುಮಂ ಕೆಲವಲ್ಲುಗೆ ತನ್ನ ರತ್ನ ವಿ ||
ಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿ ನಾಮಮಂ |
ಸರಸದಿನಾಗಳುಚ್ಚರಿಸಿ ಸಾಹಸಮಂ ಪೊಗೞ್ದಂ ಸುರಾಧಿಪಂ || ೧೦೩ ||

---

1. ೞುವೞಿಗೆ (ಕ.)., ಳುವಳಿಗೆ (ಖ. ಗ. ಘ.) ; 2. ಸಂ. (ಕ. ಖ. ಗ.).

ವ|| ಅಂತು ಪೊಗೞ್ದು ಖಾಂಡವವನ ದಹನದೊಳಾದ ಪೊಗೆಯೊಳ ಮಲ್ಲಿಯ ಮಹಾನಾಗಂಗಳ ವಿಷಂಬೆರಸು ಸುಯ್ವ ಸುಯ್ಯ ಪೊಗೆಯೊಳಂ ಕಱಂಗಿ ಕಟ್ಗಿದ ಮೆಯ್ಯುಮಂ ಪ್ರಚಂಡ ಗಾಂಡೀವ ವ್ಯಾಘಾತದೊಳಿಂದ್ರನೀಲಂ ಗಳನಡಸಿದಂತಪ್ಪ ಮುಂಗೆಯ್ಯುಮಂ ಕಂಡು ಕೃಷ್ಣನೆಂಬ ಪೆಸರನಿಟ್ಟನಾಗಳ್ ಬ್ರಹ್ಮಂ ಬ್ರಹ್ಮಾಯುವಕ್ಕೆಂದು ಪರಸಿದನೀಶ್ವರಂ ನೀನುದಾರಮಹೇಶ್ವರನಪ್ಪು ದಱಿಂ ನಿನಗಮೆನಗಮೇತಱೊಳಂ ವಿಕಲ್ಪಮುಂ ವಿಚ್ಛಿನ್ನಮುಮಿಲ್ಲೆಂದನಂತು [1]ಮೂದೇವರುಂ ಪರಸಿ ನಿಜ ನಿವಾಸಂಗಳ್ಗೆ ಪೋದರಾಗಳ್—

ಚಂ|| ಅನಿತಿನಿತೆನ್ನದಾಂತ ಸುರ ಪನ್ನಗ ಕಿನ್ನರ ಸೈನ್ಯಮೆಲ್ಲಮಂ |
ಬಿನ ಮೊನೆಯೊಳ್ ಪಡಲ್ವಡೆ ಲತಾಭವನಂ ಕೃತಕಾಚಳಂಗಳಿಂ ||
ಬಿನಿತುಮವಟ್ಗಿ ತಟ್ಗಿ ನುಡಿಯಂ ನುಡಿದಂತೆ ನೆಗಟ್ಚಲಗ್ನಿದೇ |
ವನನಮರೇಂದ್ರ ನಂದನಮನೂಡಿದನಂದಮರೇಂದ್ರ ನಂದನಂ || ೧೦೪ ||

ವ|| ಆಗಳ್ [2]ಸ್ವಾಹಾಂಗನಾ ನಾಥಂ ಸಂಪೂರ್ಣ ಮನೋರಥನಾಗಿ ಖಟ್ವಾಂಗನೆಂಬರಸನ ಯಜ್ಞದೊಳಾತನ ತಂದ ಘೃತ ಸಮುದ್ರಮಂ ಕುಡಿದೊ ಡಾದ ರೋಗಮಿಂದು ಪೋದುದೆಂದು ನೀರೋಗನಾಗಿ ಮಹಾನುರಾಗಂಬೆರಸು ಪರಸಿ ಪೋದನಾಗಳಿರ್ವರುಮಿಂದ್ರಪ್ರಸ್ಥಕ್ಕೆಯ್ದೆ ವಂದು—

ಚಂ|| ಇದಿರ್ವರೆ ಧರ್ಮಜಂ ಬೆರಸು ತನ್ನೊಡವುಟ್ಟಿದರೆಯ್ದೆ ತಳ್ತು ಕ |
ಟ್ಟಿದ ಗುಡಿ ರಂಗವಲ್ಲಿಗಳೆ ದಾಂಗುಡಿಯಂತಿರೆ ಸೂಸೆ ಸೇಸೆಯಂ ||
ಸುದತಿಯರಿಕ್ಕೆ ಚಾಮರಮನಂಗನೆಯರ್ ನಿಜಕೀರ್ತಿ ಲೋಕಮಂ |
ಪುದಿದಿರೆ ಪೊಕ್ಕನಂದು ನಿಜ ಮಂದಿರಮಂ ಪರಸೈನ್ಯಭೈರವಂ || ೧೦೫ ||

ಇದು ವಿವಿಧ ವಿಬುಧ ಜನ ವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಪಂಚಮಾಶ್ವಾಸಂ

1. ಮೂವತ್ತಮೂ (ಗ.), ಮೂವತ್ತಮೂಱು (ಘ.); 2. ಸ್ವಾಹಾಗಣ (ಕ. ಖ.), ಸ್ವಾಹಾಂಗಣ (ಗ.).

## ಷಷ್ಠಾಶ್ವಾಸಂ

ಕಂ॥ ಶ್ರೀಗೆ ಫಳಂ ಚಾಗಂ ವಾಕ್।
ಶ್ರೀಗೆ ಫಳಂ ಸರ್ವಶಾಸ್ತ್ರ ಪರಿಣತಿ ವೀರ॥
ಶ್ರೀಗೆ ಫಳಮಾಯಮೆಂದಿಂ।
ತಾಗಳುಮಱಿದೆಸಗಿದಂ ಪರಾಕ್ರಮಧವಳಂ ॥೧॥

ವ॥ ಅಂತು ಖಾಂಡವವನ ದಹನ ಪ್ರಪಂಚದಿಂ ಬೞಿಯಮರಾತಿ ವನ ದಹನ ತೀವ್ರ ಪ್ರತಾಪ ಗಹನಕ್ಕೆ ಮುನ್ನಮಳ್ಕಿ ಪರಮಂಡಳಿಕರಿತ್ತುಂ ತೆತ್ತುಂ ಬೆಸಕೆಯ್ಯೆ ಕೆಲವು ದಿವಸಮಿರ್ದು ನಾರಾಯಣನಂ ದ್ವಾರಾವತಿಗೆ ಕಳಿಪಿ—

ಉ॥ ತುಂಗ ತರಂಗ ಭಂಗುರ ಪಯೋಧಿ ಪರೀತ ಮಹಾ ಮಹೀತಳಾ।
ಲಿಂಗಿತ ಕೀರ್ತಿ ಕೇಳ್ದು ಬಡ ಪಾರ್ವನ ಪುಯ್ಯಲನೊರ್ಮೆ ಕೇಳ್ದನಾ॥
ವಂಗಮುಗುರ್ವು ಪರ್ವೆ ಜವನೊಳ್ ಸೆರಗಿಲ್ಲದೆ ಪೋಗಿ ತಾಗಿ ತಂ।
ದಂ ಗಡ ವಿಕ್ರಮಾರ್ಜುನನೆ ಪಾರ್ವರ ಪಿಳ್ಳೆಯ ಪೋದ ಜೀವಮಂ ॥೨॥

ವ॥ ಎಂದು ಲೋಕಮೆಲ್ಲಂ ಪೊಗೞೆ ವಿದ್ವಿಷ್ಟವಿದ್ರಾವಣನುಂ ಭೀಮ ಯುಧಿಷ್ಠಿರ ನಕುಳ ಸಹದೇವರುಮಯ್ವರುಂ ಬೆರಸೊಂದು ದಿವಸಮೋಲಗಂಗೊಟ್ಟಿರೆ ಧರ್ಮಪುತ್ರನಲ್ಲಿಗೆ ಮಯಂ ಪಂಚರತ್ನ ಹಿರಣ್ಮಯಂ ಚತುರಶ್ರಂ ಮೂಱುಂ ಯೋಜನದಳವಿಯ ಸಭಾಮಂಟಪಮನೊಂದು ಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ ತನ್ನ ನಲ್ಮೆಯುಂ ಬಲ್ಮೆಯುಂ ಮೆಱೆಯಲೆಂದು ದೇವಲೋಕದಿಂ ತಂದು ಮುಂದಿಟ್ಟು—

ಮ॥ ಇದಱಿಂದಂ ಬಿಸವಂದವೊಂದು ತೆಱನಲ್ತೆಂತೆಂದೊಡಾರಯ್ವೊಡಿಂ।
ತಿದಱೊಳ್ ದಿವ್ಯ ಸರೋವರಂಗಳಿದಱೊಳ್ ಕಲ್ಪಾವನೀಜಂಗಳಿಂ॥
ತಿದಱೊಳ್ ನಾಟಕ ಶಾಲೆ ರಯ್ಯಮಿದಱೊಳ್ ದೇವಾಪ್ಸರೋನೃತ್ಯಮಿಂ।
ತಿದಱಿಂತಾಗಿರೆ ನೋೞ್ಪೊಡಾರುಮಱಿಯರ್ ಮಾಡಲ್ ಸಭಾಗೇಹಮಂ ॥೩॥

ವ॥ ಎಂದೆನ್ನೀ ಪ್ರಾಣಮೆಂಬುದು ವಿಕ್ರಮಾರ್ಜುನನ ದಯೆಗೆಯ್ದ ಪ್ರಾಣಮೆನ್ನ ಕೊಟ್ಟುದರ್ಕೆ ಮಾರ್ಕೊಳ್ಳದೆ ಕೊಳ್ಳಿಮೆಂದೊಡಂತೆ ಗೆಯ್ವೆಮೆಂದು ನಿಶ್ಚಯಿಸೆ ಧರ್ಮಪುತ್ರಂಗೋಲಗಂಗುಡಲ್ತಕ್ಕುದೆಂದದಂ ಧರ್ಮಪುತ್ರಂಗೆ ಕೊಟ್ಟು ಪರಾಕ್ರಮ ಧವಳಂಗೆ ಶಶಾಂಕ ವಿಶದ ಯಶಮೆ ತೆರಳ್ದುರುಳಿಗೊಂಡಂತಿರ್ದ ಶಂಖಮಂ ಬಾಸಣಿಗೆಗಳೆದು—

ಕಂ॥ ಇದನಿಂದ್ರನಟ್ಟಿದಂ ನಿನ।
ಗಿದಱ ಪೆಸರ್ ದೇವದತ್ತಮೆಂಬುದು ನಿನಗ॥
ಭ್ಯುದಯಕರಂ ಶಂಖಂ ರಿಪು।
ಹೃದಯ ಕವಾಟ ಪುಟ ವಿಘಟನಂ ನೋಡರಿಗಾ ॥ ೪ ॥

ವ॥ ಎಂದದಂ ವಿಕ್ರಮಾರ್ಜುನಂಗೆ ಕೊಟ್ಟು ಮುನ್ನಂ ಷೋಡಶ ರಾಜರೊಳಗೆ ಮಾಂಧಾತನೆಂಬಂ ವಿದ್ಯಾಧರನಾತನ ಗದೆಯಿದು ಬೞಯಮಾತನಂ ಲವಣನೆಂಬಸುರಂ ಕಾದಿ ಕೊಂದು ಕೊಂಡೊಡಾತನಂ ರಾಮಚಂದ್ರನ ತಮ್ಮಂ ಶತ್ರುಘ್ನಂ ಗೆಲ್ದು ತನಗೆ ಕೊಂಡು ಸಮುದ್ರದ ನಡುವಣ ಮೈನಾಕ ಪರ್ವತದೊಳ್ ಮಡಗಿದೊಡೆನಗಿದಂ ವರುಣದೇವನಿತ್ತನಿಂತಪ್ಪುದು—

ಕಂ॥ ಅಧಿಕ ರಿಪು ನೃಪತಿ ಬಳ ನವ।
ರುಧಿರ ಜಳ ಸ್ಫುರಿತ ರೌದ್ರಮೀ ಗದೆ ಪೆಸರಿಂ॥
ರುಧಿರಮುಖಿಯೆಂಬುದೆಂದದ।
ನಧಿಕ ಬಳಸ್ಥಂಗೆ ಭೀಮಸೇನಂಗಿತ್ತಂ ॥ ೫ ॥

ವ॥ ಅಂತಿತ್ತು ಬೞಯಮವರ ದಾನಸನ್ಮಾನಾದಿಗಳಿಂ ಮಯಂ ರಾಗ ರಸಮಯನಾಗಿ ಸಂತಸಂಬಟ್ಟು ಪೋದನಿತ್ತ ಮತ್ತೊಂದು ದಿವಸಮಾ ಸಭಾಮಂಟಪದೊಳ್ ಧರ್ಮರಾಜಂ ತನ್ನ ನಾಲ್ವರ್ ತಮ್ಮಂದಿರೊಡನೆ ದೇವೇಂದ್ರಲೀಲೆಯಿಂದೋಲಗಂಗೊಟ್ಟಿರೆಯಿರೆ—

ಚಂ॥ ಜೆಳಗುಗಳೆಲ್ಲಮೊಂದುರುಳಿಯಾಗಿ ನಭಸ್ಥಳದಿಂದಮೀ ಮಹೀ।
ತಳಕಿೞತರ್ಪುದೆಂದು ಮನುಜಾಕೃತಿಯೆಂದು ಮುನೀಂದ್ರನೆಂದು ಕ॥
ಣ್ಗೊಳಿಸೆ ಮುನೀಂದ್ರರೊಳ್ ಕಮಳಸಂಭವನಂದನನೆಂದು ನೋಟಕರ್
ತಳವೆಳಗಾಗೆ ಸಾರೆವರೆ ನೀರದ ಮಾರ್ಗದಿನಂದು ನಾರದಂ ॥ ೬ ॥

ತರಳ॥ ಬಳಸಿ ತನ್ನೊಡನೊಯ್ಯನೊಯ್ಯನೆ ಬರ್ಪ ದೇವರದೊಂದು ಗಾ।
ವುಳಿಯನಿನ್ನಿರಿಮೆಂದು ತನ್ನನೆ ನಿಳ್ಕಿ ನೋಟ್ಪರ ಕಣ್ಗೆ ಕ॥
ಣ್ಬೊಳಿಪು ತನ್ನಯ [1]ಮೆಯ್ಯ ಬೆಳ್ಪಿನೊಳಟ್ಟು ನಿಂದೊಡೆ ವಾಳೆಮಾನ್।
ಪೊಳೆಯೆ ಧಾತ್ರಿಗೆ ವರ್ಪ ಗಂಗೆವೊಲೊಪ್ಪಿದಂ ಮುನಿಪುಂಗವಂ ॥ ೭ ॥

ವ॥ ಅಂತು ಬರ್ಪಾಗಳ್—

---

1. ಮೆಯ್ಯೊಳೊಯ್ಯನೆ ಬೆಳ್ಪಿನಿಂದೆಳವಾಳಮಿಾಂ।(ಕ), ಮೆಯ್ಯಳೊಯ್ಯನೆ ಬೆಳುಪಿನಿಂದ ಮರ್ದಿರ್ದು ನಿಂದೊಡೆ ಬಾಳೆ ಮಿಾಂ।(ಖ. ಗ.).

ತರಳ॥ ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕ।
ಪ್ಪುರದ ಭಸ್ಮ ರ[1]ಜ[ತ್ರಿಪುಂಡ್ರ]ಕಮೊಪ್ಪೆ ಪಿಂಗ ಜಟಾಳಿ ತಾ॥
ವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ।
ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ ॥೮॥

ಕಂ॥ ಬಟ್ಟಗೊಡೆ ಚಂದ್ರಕಾಂತಿಯ।
ನಟ್ಟುಂಬರಿಗೊಳೆ ಪೊದಳ್ದ ಕೃಷ್ಣಾಜಿನಮೊಂ॥
ದಿಟ್ಟಳಮೆಸೆಯೆ ಬೆಡಂಗಂ।
ಪುಟ್ಟಸೆ ಗಾಡಿಗಳೊಳೆಸೆವ ವೀಣಾ ಕ್ವಣಿತಂ ॥೯॥

ಬೆರಲೊಳ್ ಬೀಣೆಯ ತಂತಿಗ।
ಳೊರಸಿದ ಕೆಂಗಲೆಗಳಕ್ಷಮಾಲೆಯೊಳೆಸೆದಂ॥
ತಿರೆ ಪೊಸೆಯೆ [2]ಮುತ್ತು ಪವಳಂ।
ಬೆರಸಿ[3]ದವೋ[ಲಾಯ್ತು] ಚೆನ್ನ ತಪಸಿಯ ಕೆಯ್ಯೊಳ್ ॥೧೦॥

ವ॥ ಅಂತು ಸಾಕ್ಷಾತ್ ಬ್ರಹ್ಮಂ ಬರ್ಪಂತೆ ಬಂದು—

ಕಂ॥ ಅಡಿಯಿಟ್ಟನೆಳೆಯೊಳಿವನೆಂ।
ಬೆಡೆಯೊಳ್ ಪರಿಜನ ಸಮೇತಮಿದಿರೆಟ್ಟಿರಸಂ॥
ಪೊಡವಡೆ ತಪಸ್ವಿ ಕೆಯ್ಯಂ।
ಪಿಡಿದೆತ್ತಿ ಪಲರ್ಮೆ ಪರಸಿದಂ ಪರಕೆಗಳಂ ॥೧೧॥

ವ॥ ಅಂತು ಧರ್ಮಪುತ್ರ[4]ನಬ್ಜಜ ಪುತ್ರನಂ ಮುಂದಿಟ್ಟೊಡಗೊಂಡು ಬಂದು ಮಣಿ ಕನಕ ರಚನ ವಿಚಿತ್ರ ವೇತ್ರಾಸನದೊಳಿರಿಸಿ ಮಹಾರ್ಘ್ಯ ಗುಣ ಮಣಿ ವಿಭೂಷಣಂಗೆ ಕನಕ ಪಾತ್ರದೊಳರ್ಘ್ಯಮೆತ್ತಿ ಕನಕ ಕಳಶ ಸಂಭೃತ ಶುಚಿ ಜಲಂಗಳಿಂದಮಾ ಮುನೀಶ್ವರನ ಪಾದಪದ್ಮಮಂ ಕರ್ಚಿ ತತ್ಪಾದ ಪವಿತ್ರೋದಕಂಗಳಿಂ ಮಹಾಋಷಿಯ ತಳಿದ ಕನಕ ಕಮಂಡುಲು[5]ವಿನ ತೀರ್ಥೋದಕಂಗಳಿಂದಯ್ವರುಂ ಪವಿತ್ರೀಕೃತಮಸ್ತಕರಾಗಿರ್ದು ಯುಧಿಷ್ಠಿರಂ ನಾರದ ಮಹಾಮುನಿಯ ಮೊಗಮಂ ನೋಡಿ—

---

1. ಜಂ. ಪಪ್ಪಕ(ಕ.), ಜ. ಪಪ್ಪಕ (ಖ.ಘ.) ; 2. ಮುತ್ತುಂ (ಖ.ಘ.) ; 3. ದವೋಲ್ಚೆನ್ನ ತಪಸಿ ಕೆಯ್ಯೊಳಗಾಗಳ್ (ಕ.), ದವು—(ಖ.), ದವುಂ—(ಗ.), ದುದು—(ಘ.) ; 4. ನಜಪು (ಕ.), ನಬ್ಜಪು (ಗ.) ; 5. ದಿವ್ಯ (ಕ.), ದಿನ (ಖ.ಗ.).

ಕಂ|| ಪಡೆದಂ ಬ್ರಹ್ಮಂ ಜಗಮಂ।
ಪಡೆಯಲ್ ತಾನಾರ್ತನಿಲ್ಲ ಪೆಂಪಂ ನಿಮ್ಮಂ॥
ಪಡೆದಲ್ತೆ ಪಡೆದನೆನಿಸಿದ।
ಕಡು ಪೆಂಪಿನ ಪೊ[1]ಱ[3]ಗೆ ನೀವು ಮೊದಲಿಗರಾದಿರ್ ॥ ೧೨ ॥

ಬಾದೇನಾ ಮದೀಯ ಕರ್ಮ ಘ।
ಟೋದಿತ ಸಂತಾಪ [2]ರೂಪ ಪಾಪ ಕಳಾಪ॥
ಚ್ಛೇದನಕರಮಾಯ್ತು ಭವ
ತ್ಪದ ಪ್ರಕ್ಷಾಳನೋದಕಂ ಮುನಿನಾಥಾ ॥ ೧೩ ॥

ಬೆಸನೆನಗಾವುದೋ ಬೆಸಸಿಂ।
ಬೆಸನಂ ಪಿರಿದಕ್ಕೆ ಗೆಯ್ವೆ ಸಾರ್ದಿರ್ದೆನದಂ॥
ಬೆಸಸಿಂ [3]ನಿಮ್ಮಯ ಬರವಂ।
ಪೊಸತಾಗಿರೆ ಬಂದಿರೀಗಳೆಲ್ಲಿಂ ಬಂದಿರ್ ॥ ೧೪ ॥

ವ|| ಎಂಬುದುಮಾ ಮುನೀಂದ್ರನಿಂದ್ರಲೋಕದಿಂ ಬಂದೆಮೆಂದೊಡಲ್ಲಿಯ ಪಡೆಮಾತಾವುದು—

ಮ|| ದಿವಿಜೇಂದ್ರಂ ಸುಖಮಿರ್ದನೇ ದಿತಿಸುತವ್ಯಾಬಾಧೆಗಳ್ ದೇವರ್ಗಿ।
ಲ್ಲ[4]ವಲಾ ಷೋಡಶ ರಾಜರಿರ್ಪ ತೆಱನೇನೆಮ್ಮನ್ವಯಕ್ಷ್ಮಾಪರಾ॥
ವ ವಿಳಾಸಂಗಳೊಳಿರ್ಪರೇದೊರೆತು ತಾನೆಮ್ಮಯ್ಯನೈಶ್ವರ್ಯಮಿಂ।
ತಿವನೆಲ್ಲಂ ತಿಳಿವಂತುಟಾಗಿ ಬೆಸಸಿಂ ಪಂಕೇಜಗರ್ಭಾತ್ಮಜಾ ॥ ೧೫ ॥

ವ|| ಎಂಬುದುಮಾ ಮುನೀಶ್ವ[5]ರನಿಳಾ[ಧ]ರೇಶ್ವರಂ ಬೆಸಗೊಂಡಂದದೊಳೆ ದೇವಲೋಕದ ಪಡೆಮಾತೆಲ್ಲಮಂ ಪೇೞ್ದು ಪಾಂಡುರಾಜನ ಮಾತನಿಂತೆಂದಂ—

ಉ|| ನೀಡಿರದಿಂದ್ರನೋಲಗಕೆ ಪೋಪುದುಮಾಗಳುಮಂತೆ ಪೋಗಿಯುಂ।
ಷೋಡಶ ರಾಜರಿಂ ಕಡೆಯೊಳಿರ್ಪುದು ಜೀಯ ಪಸಾದಮೆಂಬುದುಂ॥
ನೋಡಿದ ದೃಷ್ಟಿಗಳ್ಕಿ[6]ಸುಗಿದಿರ್ಪುದುಮಾದಮೆ ಮಾನಭಂಗಮುಂ।
ಮಾಡೆ ಮನಃಕ್ಷತಕ್ಕಳವಿಗಾಣೆವು ನೋಡಿರೆ ಪಾಂಡುರಾಜ[7][ನಾ] ॥ ೧೬ ॥

---

1. ಱ (ಕ. ಗ.); 2. ರೂಪರೂಪ (ಕ. ಗ.), ರೂಪ...(ಖ.), ಪಾಪರೂಪ (ಘ.); 3. ನಿಂಮಿಾ ಬರವುಂ (ಕ.); 4. ವೊ ಆ (ಕ.); 5. ರನಿಳಾನ (ಕ.), ರಂವಿಳಾನ (ಖ. ಗ.), ರಂನ. (ಘ.); 6. ಪುದಿ (ಕ.) ಪುಗಿ (ಖ.) 7. ನಂ[?](ಸ.).

ಮ॥ ಪರ ಚಕ್ರಂಗಳನೊತ್ತಿಕೊಂಡದಟರಂ ಕೊಂದಿಕ್ಕಿ ದಾಯಾದರೆ।
ಲ್ಲರುಮಳ್ಕುತ್ತಿರೆ ಸಂದ ಸಾಹಸದ ನಿಮ್ಮಾಯಯ್ಯರುಂ ಮಕ್ಕಳಾ॥
ಗಿರೆಯುಂ ನಿಚ್ಚಲುಮಿಂದ್ರನೋಲಗದೊಳಂತಾ ಪಾಂಡುರಾಜಂಗೆ ನಿ।
ರ್ನೆರಮಪ್ಪೊಂದ[1]ಪವಮಾನದಿಂದಮಿನಿತೊಂದೂನತ್ವಮಪ್ಪಂತಟೇ
॥೧೭॥

ವ॥ ಆಮುಮದಂ ನೋಡಲಾಱದೆಯುಂ ಪಾಂಡುರಾಜನೆನ್ನಿರ್ದಿರವನೆನ್ನ ಮಕ್ಕಳ್ಗಱಿಪಿ ರಾಜಸೂಯಮೆಂಬ ಯಾಗಮಂ ಬೇಳ್ವಂತೆ ಮಾಡಿ ಬನ್ನಿಮೆನೆಯುಮಿದನಱಿಪಲೆಂದೆ ಬಂದೆಮಾ ಮಖದ ಮಾಹಾತ್ಮ್ಯಮಂ ಪೇೞ್ವೊಡೆ ಮುನ್ನಂ ಕೃತಯುಗದೊಳ್ ಹರಿಶ್ಚಂದ್ರನೆಂಬ ಚಕ್ರವರ್ತಿ ಶತಕ್ರತುವಂ ನಿರ್ವರ್ತಿಸಿ ಚತುರರ್ಣವಪರೀತ ಮಹೀತಳಮೆಲ್ಲಮಂ ಧರಾಮರರ್ಕಳ್ಗೆ ದಕ್ಷಿಣೆಗೊಟ್ಟನಪ್ಪುದಱಿಂದಮದಱ ಫಲದೊಳೀಗಳಾತನಲ್ಲಿಗಿಂದ್ರಂ ನಿಚ್ಚಮೊಂದು ಪೊೞ್ತು ಪೋಗಿ ಪೂಜಿಸಿ ಬರ್ಪಂ ನಿಮ್ಮಯ್ಯಂಗೆ ನೀಮುಮನಿತು ಮಹಿಮೆಯಂ ಮಾೞ್ಪಿರಪ್ಪೊಡೆ—

ಚಂ॥ ಬಿರುದರನೊತ್ತಿ ಬೀರರನಡಂಗಿಸಿ ಕೊಂಕಿಗರಂ ಕೞಲ್ಚಿ ಚೆ।
ನ್ನರನಡಿಗೊತ್ತಿ ಮಂಡಳಿಕರಂ ಬಿಸಕೆಯ್ಸಿ ಕಱುಂಬರಂ ನಿರಾ॥
ಕರಿಸಿ ಸಮಸ್ತವಾರಿಧಿ ಪರೀತ ಮಹೀತಳದರ್ಥಮೆಲ್ಲಮಂ।
ತರಿಸಿ ನೆಗೞ್ತೆಯಂ ನಿಱಿಸಲಾರ್ಪೊಡೆ ಮಾಡಿರೆ ರಾಜಸೂಯಮಂ ॥೧೮॥

ವ॥ ಎಂದು ರಾಜಸೂಯಾಂತಂ ಕಳಹಮೆಂಬುದಂ ಬಗೆದು ತಾನುಂ ಕಲಹ ಪ್ರಿಯನಪ್ಪುದಱಿಂದಮನಿತನೆ ನುಡಿದು ಮಾಣ್ದ ಮುನೀಂದ್ರನಂ ನರೇಂದ್ರನಿಂತೆಂದಂ—

ಚಂ॥ ಬೆಳಗುವುದಿಂದ್ರಲೋಕದೊಳಗಯ್ಯನ ಮಾ[2][ತೆನಲೆ]ಮ್ಮ ಸಾಹಸಂ।
ಬೆಳಗುವುದೀ ಧರಾವಳಯದೊಳ್ ತಣಿವರ್ ದ್ವಿಜಮುಖ್ಯರಪ್ಪುದ॥
ಗ್ಗಳಿಕೆ ಪೊದಳ್ದು ಪರ್ವುವುದು ಕೀರ್ತಿ ಪುರಾಕೃತ ಪುಣ್ಯದಿಂದೆ ಸಂ।
[3][ಗಳ]ಸುವುದೆಂದೊಡೀ ಮಖದೊಳೇನ್ ತೊದಳುಂಟೆ ಮುನೀಂದ್ರ
ನಾಯಕಾ ॥೧೯॥

ವ॥ ಎಂಬುದುಮಾ ಮಾತಂ ನಿಲೆ ನುಡಿದುದರ್ಕೆ ಮೆಚ್ಚಿ ನಿನಗದೇವಿರಿದು—

ಕಂ॥ ಪರಪಿನ ನೀಳದ ಕಡೆಯಂ।
ಮರು[4]ಳಂ ತವೆ ನೋಡಲಾಱದಂಬರ ತಳಮುಂ॥
ಕರಿದೆಂಬಂತಿರೆ ನಿನ್ನಂ।
ನರನೆಂಬುದೆ ನಿನ್ನ ಸಾಹಸಕ್ಕದು ಪಿರಿದೇ ॥೨೦॥

---

1. ಭಿ (ಕ. ಗ. ಘ.); 2. ತಿನೊಳೆ (ಸ.); 3. ಭವಿ (ಸ.); 4. ಳುಂ (ಕ. ಖ. ಘ.)

ವ॥ ಎಂದು ನುಡಿದು ನಾಡೆಯುಂ ಪೊೞ್ತು ದುರ್ವಿಮಿನ್ ಪೋಪೆನೆಂದ ಮುನಿನಾಥನಂ ನರನಾಥಂ ಬಿಜಯಂಗೆಯ್ಯಿಮೆನೆ ನಾರದನಿರದೆ ಗಗನತಳಕ್ಕೊಗೆದು ಮುಗಿಲ ಪೊರೆಯೊಳಡಂಗಿದನಿತ್ತ ಧರ್ಮರಾಜಂ ನಿಜಾನುಜರೊಡನೆ ರಾಜಸೂಯ ಪ್ರಪಂಚಮನಾಳೋಚಿಸಿ ಪುರುಷೋತ್ತಮನನೀ ಪದದೊಳ್ ಬರಿಸುವುದು ನಮಗುತ್ತಮ ಪಕ್ಷಮೆಂದು—

ಉ॥ ದ್ವಾರವತೀ ಪುರಕ್ಕೆ ಚರರಂ ತಡವಿಲ್ಲದೆ ಬೇಗಮಟ್ಟೆ ಪಂ।
ಕೇರುಹನಾಭನಂ ಬರಿಸಿ ಮಜ್ಜನ ಭೋಜನ ಭೂಷಣಾದಿ ಸ॥
ತ್ಕಾರದೊಳಟ್ಕಱಿಂ ನೆಱಿಯೆ ಮಾಡಿ ಮುರಾಂತಕ ಪಾಂಡು ಭೂಭುಜ[1][ಂ]।
ಕಾರಣಮಾಗೆ ನಾರದನ ಪೇೞ್ದ ನೆಗೞ್ತೆಯ ರಾಜಸೂಯಮುಂ ॥೨೧॥

ಕಂ॥ ಬೇಳಲೆ ಬಗೆವೊಡೆ ಹರಿಯೊಡ।
ನಾಳೋಚಿಪಮೆಂದು ಬಱಿಯನಟ್ಟಿದೆನೆಮ್ಮಂ॥
ಪಾಳಿಸುವೈ [2][ನೀನ್] ನಿಮ್ಮೊಡ।
ನಾಳೋಚಿಸದೆಮಗೆ ನೆಗೞಲೇಂ ನೆ[3]ರವುಂಟೇ ॥ ೨೨ ॥

ವ॥ ಎಂಬುದುಮದೆಲ್ಲಮಂ ನೆಱಿಯೆ ಕೇಳ್ದು ಮುಂದಣ ಕಜ್ಜದ ಬಿಣ್ಪುಮನಱಿದಂಭೋರುಹನಾಭಂ ಶುಂಭದಂಭೋಧರ ಧ್ವನಿಯಿನಿಂತೆಂದಂ—

ಉ॥ ಎಂತು ಬಿಗುರ್ತು ಬೀರರನೆ ಕೊಂದಪಿರೆಂತು ಸಮಸ್ತ ವಾರ್ಧಿ ಪ।
ರ್ಯಂತ ಧರಿತ್ರಿಯುಂ ವಶಕೆ ತಂದಪಿರೆಂತು ಧನಂಗಳಂ ಪ್ರಯೋ॥
ಗಾಂತರದಿಂ ತೆರಳ್ಚಿದಪಿರಾಗದಿದಾದೊಡಮೆಂತು ರಾಜಸೂ।
ಯಾಂತಮಿದೆಂತು ಬೇಳ್ದಪಿರಪಾಯ ಶತಂ ಬರೆ ರಾಜಸೂಯಮುಂ ॥ ೨೩ ॥

ಕಂ॥ ಗಾಳು ಗೊರವಂ ತಗುಳ್ಚಿ ಪ।
ಳಾಳಮನೇನೊಂದನಪ್ಪೊಡಂ ಗೞಪಿದೊಡಾ॥
ಬೇಳು ನುಡಿಗೇಳ್ದು ಕೆಮ್ಮನೆ।
ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ ॥ ೨೪ ॥

ವ॥ ಮುನ್ನಂ ಕೃತಯುಗದೊಳ್ ಸೋಮ[4]ನ ವರುಣನ ರಾಜಸೂಯದ ಕಡೆಯೊಳ್ ದೇವಾಸುರ ಯುದ್ಧಂ ನೆಗೞೆ ಹಿರಣ್ಯ ಕಾಳನೇಮಿಗಳ್ ಮೊದಲಾಗಿ ನೆಗೞ್ತೆಯ ದೈತ್ಯರೆಲ್ಲಮೆನ್ನ ಚಕ್ರ ಘಾತದೊಳಟ್ಟಿ ಮುಟ್ಟಿದಂತಾದರದೊಂದು ಧರಾ[5]ವನಿ[ತೆ]ಯ ಭಾರಾವತಾರದೊಳೆನಿತಾನುಂ ಘಸಣಿ ಪೋದುದದು ಕಾರಣದಿಂ ರಾಜ

---

1. ರ್ (ಸ.); 2. ನಿಮ್ಮೊಡನೇ (ಕ.); 3. ರೆವುಂ (ಖ,), ಱಿಯುಂ (ಗ.ಘ.): 4. ನ್ನ (ಕ. ಖ.); 5, ಸತಿ (ಕ.), ವನಿ (ಖ.), ವತಿ(ಗ. ಘ.).

ಸೂಯ:ದ ಮಾತಂ ಕೇಳ್ದಲ್ಲಿಯೆ ಮಱೆವುದು ನುಡಿಯಲ್ವೇಡೆನೆ ಮಱುಮಾತುಗುಡ ಲಱಿಯದೆ ಧರ್ಮಪುತ್ರಂ ಮೌನಂಗೊಂಡುಸಿರದಿರೆ ಪರಾಕ್ರಮಧವಳನಿಂತೆಂದಂ—

ಚಂ॥ ಎನಿತು ಗಡಂ ಪಯೋನಿಧಿ ಪರೀತ ಮಹೀತಳಮೆಂಬುದಾಂಪ ಬೀ।
ರ[1][ನ] ಪೆಸರಾವುದೀ ನುಡಿಯನೀ ಪದದೊಳ್ ಪೆಱಗಿಕ್ಕೆ ನಾರದಂ॥
ಮನದೊಳೆ ಪೇಸುಗುಂ ಸುರಪನುಂ ನಗುಗುಂ ಕಡುವಿನ್ನನಕ್ಕುಮ।
ಯ್ಯನ ಮುಖಮೆಂತುಪೇಕ್ಷಿಸುವುದೀ ಮುಖಮುಂ ಸರಸೀರುಹೋದರಾ ॥ ೨೫ ॥

ವ॥ ಎಂದೊಡೆ ಭೀಮಸೇನನಿಂತೆಂದಂ—

ಕಂ॥ ಪನ್ನತರ ನಡುವನುಡಿಯ।
ಲ್ಕೆನ್ನ ಭುಜಾರ್ಗಳಮೆ ಸಾಲ್ಗುಮೊಸೆ ಮೇಣ್ ಮುನಿ ಮೇ॥
ಣೆನ್ನ ನುಡಿ [2]ಟಾತಡಾಥಣ।
ಮೆನ್ನಂ ಬೆಸಸುವುದು ರಾಜಸೂಯಂ ಬೇಳಲ್ ॥ ೨೬ ॥

ವ॥ ಎಂದು ಗಜಱಿ ಗರ್ಜಿಸುವುದುಮುಳರುಮಿಾ ಬೇಳ್ವಿಯ ಮಾತಂ[3][ತೆ] ಮ[4]ಳೆ ನುಡಿದೊಡೆಮ್ಮ ಗಂ[5]ಡ[ವಾ]ತುಮುಳುಂ[6]ಬಂ ಭೃತಮಕ್ಕುಮೆಂದು [7]ಮೆಯ್ ಮೆಯ್ಗೆ ಬೆಸಸೆಂಬುದುಂ ರಾಜಸೂಯಮಂ ಬೇಳ್ದಲ್ಲದಿರಿರಪ್ಪೊಡೆ ಗಂಗಾನದಿಯ ಬಡಗಣ ತಡಿಯ ಮ[8]ಘಮಘಿಸುವ ವಾರಣಾಸಿ ಪುರಮನಾಳ್ವ ಬೃಹದ್ಬ[9]ಳಂ ಪುತ್ರೋತ್ಪತ್ತಿನಿಮಿತ್ತಮಪ್ಪೊಂದು ದಿವ್ಯ ಪಿಂಡಮುಂ ತನ್ನಿರ್ವರರಸಿಯರ್ಗೆ ಪಚ್ಚು ಕೊಟ್ಟೊಡೆ ಪುಟ್ಟಿದೆರಡು ಪೋೞುಮನಿವೇವುವೆಂದು ಬಿಸುಡೆ ಜರೆಯೆಂಬ ರಕ್ಕಸಿ ಕಂಡು ತಿನಲೆಂದೆರಡುಪೋೞುಮನೊಂದುಕೆಯ್ಯೊಳೆ ಪಿಡಿದೊಡೊಂದೊಂದಱೊಳ್ ಸಂದಿಸಿ ಮಾನಸರೂಪುಗೊಂಡೊಡೆ ಚೋದ್ಯಂಬಟ್ಟು ಜರಾಸಂಧನೆಂದು ಪೆಸರನಿಟ್ಟು ಬೃಹದ್ಬಳಂಗೆಕೊಟ್ಟೊಡೆ ಜರಾಸಂಧನುಂ ಸಾ[10]ಲ್ವಲನುಮೆಂಬ ದೈತ್ಯನುಮೊಂದಾಗಿ ಮೂವತ್ತೆರಡಕ್ಷೋಹಿಣೀಬಲಂ ಬೆರಸು ಮಧುರಾಪುರಕ್ಕೆ ವಂದೆನ್ನಂ ಮುತ್ತಿ ಕೊಂಡೊಡ್ಡುಸಾಯ ಬಲದೊಳೆ ಸಾಲ್ವಲನಂ ಕೊಂದು ಜರಾಸಂಧಂಗಳ್ಕಿ ಮಧುರಾ ಪುರಮಂ ಬಿಸುಟ್ಟು ಪೋಗಿ ದ್ವಾರಾವತಿಯಂ ಸಮುದ್ರಮೆ ನೀರ್ಗಾದಿಗೆಯಾಗಿ ಮಾಡಿದೆನಿನ್ನುಂ ಯಾದವರ ಸೆಱೆಗಳೆಲ್ಲಾ ತನಲ್ಲಿರ್ದರಾತನುಂ ಭೀಮನ ಕೆಯ್ಯೊಳಲ್ಲದೆ ಸಾಯನೆಂಬುದಾದೇಶಮುದಱಿನೆಮ್ಮಿಚ್ಛೆ[11]ಯುಂ ಸಮಸ್ತ ಬಲಂಬೆರಸು ಭೀಮಾ

1. ರ (ಸ.); 2. ಯೆರಡಾದಡ (ಗ.); 3. ತ (ಕ. ಖ. ಗ.); 4. ಗೆ (ಕ.); 5. ಡಮಾ (ಕ. ಖ. ಗ.), ಡುಮಾ (ಘ.); 6. ಬಮುಕ್ಕು (ಕ.), ಭೃತಮುಕ್ಕು (ಖ. ಗ.); 7. ಮೆಯಿಮೆಯಿ (ಕ. ಖ. ಗ.); 8. ಗಮಗಿ (ಗ.); 9. ಳಂಗೆ (ಸ.); 10. ಲ್ವನು (ಕ. ಖ.); 11. ಯುಮಂ (ಕ. ಘ.), ಯುಮುಮಂ (ಖ.), ಕ್ಷೆಮುಮಂ (ಗ.).

ರ್ಜುನರಂ ಪೇೞ್ವುದೆಂದು ಧರ್ಮಪುತ್ರನನೊಡಂಬಡಿಸಿ ನುಡಿದು ಮಧುರಾಪುರಮ ನೆಯ್ದಿ ಬೃಹದ್ಬಳ ತನೂಜನಲ್ಲಿಗೆ ಧರ್ಮಯುದ್ಧಮಂ ಬೇಡಿಯಟ್ಟಿದೊಡೆ—

ಮ॥ ಕಲಿಮಾರ್ಕೊಳ್ಳದೆ ಕೊಟ್ಟು ಮೆಯ್ಯೊಳೆಸಿಡಿಲ್ ತಾಪಂತೆವೋಲ್ ತಾಗೆ ಮೆ
ಯ್ಗಲಿ ಭೀಮಂ ಪೆಱಪಿಂಗದಾಂತು ಪಲವುಂ ಬಂಧಂಗಳಿಂ ತಳ್ತು ತ॥
ತ್ಕುಲಶೈಲಂ ಕುಲಶೈಲದೊಳ್ ಕಲುಷದಿಂ ಪೋರ್ವಂತೆವೋಲ್ ಪೋರ್ದು ನೆ।
ಯ್ದಿಲ ಕಾವಂ ತುದಿಗೆಯ್ದೆ ಸೀಳ್ವ ತೆಱದಿಂ ಸೀಳ್ದಂ ಜರಾಸಂಧನಂ ॥ ೨೭ ॥

ವ॥ ಅಂತು ದೃಢ ಕಠಿನ ಹೃದಯ ಬಂಧನಂ ಜರಾಸಂಧನಂ ಕೊಂದುಮಾತನ ಮಗಂ ಕ್ಷೇಮಧೂರ್ತಿಯಂ ರಾಜ್ಯದೊಳ್ ನಿಱಿಸಿ ಜರಾಸಂಧನೇಱುವ ರಥಮಂ ತರಿಸಿ ಸಮಸ್ತ ವಸ್ತುಗಳಂ ಕೊಂಡು ಗರುತ್ಮನಂ ನೆನೆದು ಬರಿಸಿ ರಥಮಂ ಚೋದಿಸಲ್ವೇೞ್ದು ಯಾದವರ ಸೆಱೆಗಳುಮಂ ಮುಂದಿಟ್ಟು ನಾರಾಯಣಂ ಭೀಮಾರ್ಜುನರ್ವೆರಸು ಸುಖಪ್ರಯಾಣಂಗಳಿಂದಿಂದ್ರಪ್ರಸ್ಥಕ್ಕೆ ವಂದು ಧರ್ಮ ಪುತ್ರನಂ ಕಂಡು—

ಶಿಖರಿಣಿ॥ ಜರಾಸಂಧಂ[1][ಮುನ್ನಂ] ಮಡಿದೊಡಿಳೆ ನಿಷ್ಕಂಟಕಮದ।
ರ್ಕಿರಲ್ವೇಡಿನ್ ನಾಲ್ಕುಂ ದೆಸೆಗೆ ಬೆಸಸಿಂ ನಿಮ್ಮನುಜರಂ॥
ಭರಂಗೆಯ್ವಾಗಳ್ ನೀಂ ಪೆಸರ್ವೆಸರೊಳಾ ನಾಲ್ವರುಮನಾ।
ದರಂ[ಗೊಂಡಾ] ನಾಲ್ಕುಂ ದೆಸೆಗೆ [ಬೆಸಸಿಂ] [2]ಬೆಳ್ಕುಱುವಿನಂ ॥ ೨೮ ॥

ವ॥ ಅಂತು ಭೀಮಸೇನನನಿಂದ್ರನ ಮೇಲೆ ವೇೞ್ವಂತೆ ಪೂರ್ವ ದಿಗ್ಭಾಗಕ್ಕೆ ವೇೞ್ದು ನಕುಳನಂ ಯಮನನದಿರ್ಪಲ್ವೇೞ್ವಂತೆ ದಕ್ಷಿಣದಿಶಾಭಾಗಕ್ಕೆ ಬೆಸಸಿ ಸಹ ದೇವನಂ ವರುಣನನದಿರ್ಪಲ್ ನಿಯಮಿಸುವಂತೆ ಪಶ್ಚಿಮ ದಿಗ್ಭಾಗಕ್ಕೆ ವೇೞ್ದು ವಿಕ್ರಮಾರ್ಜುನನಂ ಕುಬೇರನಿಂ ಕಪ್ಪಂಗೊಳಲ್ ಸಮರ್ಪಿಸುವಂತೆ ಉತ್ತರೋತ್ತರ ಮಾಗಲುತ್ತರ ದಿಶಾಭಾಗಕ್ಕೆ ವೇೞ್ವಾಗಳ್—

ಚಂ॥ ಅರಿ ನರಪಾಲ ಮೌಳಿಮಣಿಯೊಳ್ ನೆಲೆಗೊಂಡುದು ಶಂಖ ಚಕ್ರ ಚಾ।
ಮರ ಹಳ ಚಿಹ್ನ ಚಿಹ್ನಿತ ಪದಾಕೃತಿ ಬೀಸುವ ಚಾಮರಾಳಿ ಸುಂ॥
ದರಿಯರ ಕೆಯ್ಗಳಿಂ ಬರ್ದುಕಿ ಬಿೞ್ದುವು ಬೆಳ್ಗೊಡೆ ನೋಡೆ ನೋಡೆ ನಿಂ।
ದುರಿದುವು ಸಾಲಭಂಜಿಕೆಗಳಟ್ಟುವ ವೈರಿನರೇಂದ್ರ ಗೇಹದೊಳ್ ॥ ೨೯ ॥

ವ॥ ಅಂತು ವಿಜಯಂ ತನ್ನ ದಿಗ್ವಿಜಯದೊಳಾದ ವಿಜಯ ಚಿಹ್ನಂಗಳ್ ಮುನ್ನಮೆ ನೆಗೞೆ[3] ವಿಜ[3]ಯ[ದ] ಗುಡಿವಿಡಿಸಿ [4]ಅರಿ ನೃಪರಂ ಛೇದಿಸಿ ಪಾಂಚಾಳರಂ

---

[1]. ಮುಂದಂ (ಕ.) [2]. ಬೆಳಕುಱುವಿನೆಗಂ (ಖ.ಗ.); [3]. ಯಂ ಬೇಡಿಸಿ (ಕ.), . . . . . . ಛೇದಿಸಿ (ಖ.), ಯಂ ಛೇದಿಸಿ (ಗ.); [4]. ಚೇದಿ[?] [ಪ.],

[1]ಚಾಳಿಸಿ ಗಾಂಧರ್ವರಂ ವಿರಥರ್ಮಾಡಿ ಕೌಳಾಧೀಶರಂ ಸಾಧಿಸಿ ಕಿಂಪುರುಷರಂ ಕಾಪುರುಷರ್ಮಾಡಿ ಬಾಹ್ಲಿಕರ[2]ನ[ನನೀ]ಕರೆನಿಸಿ ಮಾಳವಿಗರಂ ಕೆಲಿಗಿವಿಗೆಯ್ಯ ಲೀಯದಾಟಂದು ನಿಜ ನಾಮಾಂಕಿತ ಸಾಯಕಂಗಳಿಂದೆಚ್ಚು ನಚ್ಚಂ ಕಿಡಿಸಿ—

ಮ॥ ಉಱದಿರ್ಪಂತೆಮಗಾವ ಗರ್ವಮಿಱಿಯಲ್ವೇಡೆಮ್ಮ ನೆಮ್ಮುಳ್ಳುದಂ।
ನೆಱ[3] ಕೊಂಡೆಮ್ಮಯ ಬಾ[3]ೞ್ವಿಯೊಳ್ ನಿಱಿಸುವಂ ನೀನೆಂದು ತಂದಿತ್ತು ಕೆ॥
ಯ್ಸೆಱ[3]ಯುಂ ಕೊಟ್ಟಳವ[4]ಟ್ಟ ಸಾರ ಧನಮುಂ ಮೂವಿಟ್ಟಿಗಂ ಪೂಣ್ದು ಕಾ।
ಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಮಂ ಕುಳಂ ರಾಜಕಂ ॥ ೩೦ ॥

ವ॥ ಮತ್ತಮಲ್ಲಿ ಕೆಲರಂ ವೈತ್ರಾಸನ ವೃತ್ತಿಯೊಳ್ ನಿಱಿಸಿ ಕೆಲರನು [5]ದ್ಧತಾಪ್ರತಿಮಹಿತರ್ಮಾಡಿ ಕೆಲರನುಚ್ಚಾಟಿಸಿ ಸರ್ವ ಹರಣಂಗೆಯ್ದು ಕಸವರಮೆಲ್ಲ ಮನಿಂದ್ರಪ್ರಸ್ಥಕ್ಕೆ ಕಱಿಪಿ ಕಾಶ್ಮೀರ ಹಿಮವಂತ ಹೇಮಕೂಟ ಕೈಳಾಸ ಪಾರಿಯಾತ್ರ ಶ್ವೇತಶೃಂಗ ಗಂಧಮಾದನ ಗಿರಿ ನಿಕಟ ವರ್ತಿಗಳಪ್ಪ ಪರ್ವತ ರಾಜರನಪಗತ ತೇಜ ರ್ಮಾಡಿ ಕಸವರಮಂ ಕೆಯ್ಗೆಮಾಡಿ ಮೇರುಪರ್ವತದ ತೆಂಕಣ ತಪ್ಪಲೊಳ್ ದ್ವಾದಶ ಯೋಜನ ಪ್ರಮಾಣಮಪ್ಪ ಜಂಬೂವೃಕ್ಷದ ಕೆಲದೊಳಡಸಿ ರಸದ ತೊಱ[3] ಪರಿವಂತೆ ಕನಕ ಗಿರಿಯನ[6]ಲೆದು ಪರಿವ ಜಂಬೂನದಮೆಂಬ ತೊಱ[3]ಯೊಳ್ ಪುಟ್ಟಿದ ಜಾಂಬೂನದಮೆಂಬ ಪೊನ್ನ ಪಾಸಱ[3]ಗಳಂ ಕಂಡು—

ಕಂ॥ ಗಾಂಡೀವದ ಕೊಪ್ಪುಗಳೊಳ್।
ಖಂಡಿಸಿ ತತ್ತಟದ ಕನಕ ರೇಣುವನವನಾ॥
ಖಂಡಲ ತನಯನಸುಂಗೊಳೆ।
ಖಂಡಿಸಿದಂ ನಿಶಿತ ಪರಶು ಶರ ಸಮಿತಿಗಳಿಂ ॥ ೩೧ ॥

ವ॥ ಅಂತು ಕನಕ ರೇಣುಗಳ್ ಪುಟ್ಟಿದ ಪಾಸಱ[3]ಗಳುಮಂ ಕನಕದ ಪಿರಿಯ ಸೆಲೆಗಳುಮನೊಟ್ಟೆ ಬೆಟ್ಟಾಗಿ ಪುಂಜಿಸಿ—

ಚಂ॥ ಬರಿಸಿ ಘಟೋತ್ಕಚಂ ಬೆರಸು ದಾನವ ಸೇನೆಯನೀಗಳೀ ಬಲಂ।
ಬೆರಸಿವನಿಂತು ಪೊತ್ತು ನಡೆ ನಮ್ಮ ಪುರಕ್ಕೆನೆ ತದ್ಗಿರೀಂದ್ರ ಕಂ॥
ದರ ಕನಕಾಚಳಂಗಳೆನಿತುಂಟನಿತಂ ತವೆ ಹೇಮ ರೇಣುಗ।
ಳ್ವೆರಸು ಕಡಂಗಿ ಪೊತ್ತು ನಡೆದತ್ತು ಘಟೋತ್ಕಚ ರೌದ್ರ ಸಾಧನಂ ॥ ೩೨ ॥

ವ॥ ಆಗಳ್ ಪರಾಕ್ರಮಧವಳಂ ತನ್ನ ಪರಾಕ್ರಮಮುಮಂ ಮೆಱ[3]ಯಲೆಂದು ಕೈಳಾಸದ ಮೇಗಣ್ಗೆ ವಂದು ಕುಬೇರನಿಂ ಕಪ್ಪಂಗೊಂಡು ಪೊನ್ನಂ ಜಕ್ಕರೆಕ್ಕೆಯಿಂ

---

1. ಚಾರಿ (ಖ.), ಬಾರಿ (ಘ.); 2. ನನೇಕರೆನಿಸಿ (ಕ.), ನೆಕರನೆನಿಸಿ (.ಖ), ನೆಕರರೆನಿಸಿ (ಗ.), ಜೋಕೆಗಿಡಿಸಿ (ಘ.); 3. ೞ್ಗಳೊ (ಕ.), ಳಳೊ (ಖ: ಗ.); 4. ಟ್ಟು (ಸ.); 5. ದ್ವಾತ (ಖ.), ದ್ವತ (ಗ.) ದಾತ್ತ (ಘ.); 6. ೦ (ಕ. ಖ. ಗ.).

ಪೊತ್ತು ಬರೆ ತಡೆಯದಿಂದ್ರಪ್ರಸ್ಥಕ್ಕೆ ಬಂದನಿತ್ತ ಭೀಮನುಂ ಮೂಡಣ ದಿಶಾ ಭಾಗಮಂ ಬಾಯ್ಕೇಳಿಸಿ ದೇವೇಂದ್ರನ ವಜ್ರಮುಮಿಂದ್ರಾಣಿಯ ಕೈಗನ್ನಡಿಯು ಮುೞಿಯೆ ಸಮಸ್ತ ವಸ್ತುಗಳಂ ತಂದಂ ಸಹದೇವನುಂ ಪಡುವಣ ದೆಸೆಯ ಮಂಡಳಿ ಕರನದಿರ್ಪಿಯುಮುದಿರ್ಪಿಯುಂ ಕೊಂಡು ವರುಣನ ಮಕರಮುಂ ವರುಣಾನಿಯ ಕೊರಲೊಳ[1][ಯ್ದಿ] ಮಿನುಗುಮುೞಿಯೆಯುೞಿದ ವಸ್ತುಗಳೆಲ್ಲಮಂ ತಂದು ಮುಂದಿಟ್ಟಂ ನಕುಳನುಂ ತೆಂಕಣ ದೆಸೆಯ ಮಲೆಪರಂ ಮಂಡಳಿಕರುಮನಸಿಯರಾಗೆ ಕವರ್ದು ಕೊಂಡು ಲಂಕೆಯ ಮೇಗೆ ನಡೆದು ವಿಭೀಷಣಂ ತನಗೆ ಬಾಯ್ಕೇಳ ದಿರ್ದೊಡೆ ವಿಕ್ರಮಾರ್ಜುನಂಗೆ ಪೇೞ್ದಟ್ಟಿದೊಡೆ—

ಉ॥ ತೊಂಡಿನೊಳು[2]ರ್ಕಿ ಕೆಟ್ಟ ದಶಕಂಠನನಕ್ಕಟ ಕೊಂ[3]ಡ ಪೆರ್ಮರುಳ್ ।
ಕೊಂಡುದೆ ತನ್ನುಮಂ ಬಿಸುಡು ನೀಂ ಬಲಗರ್ವಮನಾ ಸಮುದ್ರ[4]ಮೇ ॥
ಬಂಡಮೊ ಪಾಯ್ದೊಡೆಂದು ನಿಜ ಸಾಯಕದೊಳ್ ಬರೆದೆಚ್ಚು ಕಪ್ಪಮಂ ।
ಕೊಂಡನವುಂಕಿ ಲಂಕೆಯ ವಿಭೀಷಣನಂ ಪರಸೈನ್ಯಭೈರವಂ ॥ ೩೩ ॥

ವ॥ ಅಂತು ನಾಲ್ಕುಂ ಸಮುದ್ರಂಗಳ ನೀರುೞಿಯೆ ರತುನಂಗಳುಮಂ ದಿಶಾ ಗಜಂಗಳುೞಿಯೆ ಗಜಂಗಳುಮಂ ಆದಿತ್ಯನ ಕುದುರೆಗಳುೞಿಯೆ ಕುದುರೆಗಳುಮಂ ದೇವೇಂದ್ರನ ಸುರಭಿಯುಮೀಶ್ವರನ ನಂದಿಯುಮುೞಿಯೆ ಗೋವ್ರಜಂಗಳುಮ ನಿಂದ್ರಪ್ರಸ್ಥಕ್ಕೆ ತೆರಳ್ಚಿ ಬೞಿಯಂ ನಾರಾಯಣನ ಮತದೊಳ್ ಹಸ್ತಿನಾಪುರದೊಳಿರ್ದ ಧೃತರಾಷ್ಟ್ರ ವಿದುರ ಗಾಂಗೇಯ ದ್ರೋಣಾಶ್ವತ್ಥಾಮ ಕೃಪ ಬಾಹ್ಲೀಕ ಸೋಮದತ್ತ ಭಗದತ್ತ ಭೂರಿಶ್ರವಃ ಕರ್ಣ ಶಲ್ಯ ಶಕುನಿ ಸೈಂಧವ ದುರ್ಯೋಧನ ದುಶ್ಯಾಸನಾದಿ ಗಳ್ಗೆಲ್ಲಂ ಬೞಿಯನಟ್ಟಿ ಬರಿಸಿ ಶಿಶುಪಾಲಾದಿಗಳಪ್ಪನೇಕಾಧೀಶ್ವರರೆಲ್ಲರುಮಂ ಬರಿಸಿ ವ್ಯಾಸರ್ ಮೊದಲಾಗೆ ಬ್ರಹ್ಮ ಋಷಿಯರೆಲ್ಲರುಮಂ ಬರಿಸಿ ತುೞಿಲ ಪರಕೆಯ ಸಮಾನ ಪ್ರತಿಪತ್ತಿಯಿಂ ಕಿಱಿವಿರಿಯರಱಿದು ಪೊಡೆವಟ್ಟು ಪರಸಿಯಪ್ಪಿಕೊಂಡು ನುಡಿದುಂ ನೋಡಿಯುಂ ನಕ್ಕುಂ ಕೆಯ್ಯಂ ಪಿಡಿದುಂ ಬಲ್ಲಿದಿರೆ ಎಂದು ಪ್ರಿಯದೊಳಂ ಬಿರ್ದಿನೊಳಂ ಸಂತಸಂಬಡಿಸಿ ಶುಭ ದಿನ ವಾರ ನಕ್ಷತ್ರ ಯೋಗ ಕರಣ ಮುಹೂರ್ತ ದೊಳಿಂದ್ರಪ್ರಸ್ಥಕ್ಕೆ ಉತ್ತರ ದಿಗ್ಭಾಗದೊಳ್ ಸಹಸ್ರ ಯೋಜನ ಪ್ರಮಾಣದೊಳ್ ಯಾಗಮಂಟಪಮಂ ಸಮೆದು ಮಯನ ಕೊಟ್ಟ ಸಭಾಮಂಟಪದೊಳ್ ಬ್ರಹ್ಮ ಋಷಿಯರುಮನರಸುಮಕ್ಕಳುಮನೆಡೆಯಱಿದಿರಿಸಿ ಯಜ್ಞ ದ್ರವ್ಯಂಗಳೆಲ್ಲಮಂ ನೆರಪಿ ಮಹಾವಿಭವದೊಳ್ ಶಮಿಾ ಪಾರ್ಶ್ವತಳ [5]ದಕ್ಷಿಣಾ ಶಾಲೆಯೊಳ್ ಹಿರಣ್ಯದಾನವಂ ಮಾಡಿವೇ[6][ದಿನಿಹಿತಂ]ಗಳಪ್ಪಾಹವನೀಯ ದಕ್ಷಿಣ ಗಾರ್ಹಪತ್ಯಂಗಳೆಂಬ ಮೂಱುಂ ಕೊಂಡಂಗಳೊಳುತ್ತರ ವೇದಿಯೊಳಗ್ನಿ ಸಂಧಾನಂಗೆಯ್ದು ವ್ಯಾಸ ಕಶ್ಯಪ ವಿಶ್ವಾಮಿತ್ರ

[1]. ಯ್ದು (ಸ.) ; [2]. ಳ್ಕಿ (ಕ.ಖ.ಗ.) ; [3]. ಡ (ಕ.ಖ.) ; [4]. ಮೇಂ (ಕ.), ಮೆಂ (ಖ. ಗ. ಘ.) ; [5]. ದೀಕ್ಷಣ (ಕ.), ದಿಕ್ಷಣಾ (ಖ. ಗ.) ; [6]. ದನಿಗ (ಕ. ಖ. ಗ.), ದನಿಧಿಗ (ಘ.).

ಭಾರದ್ವಾಜ*[1]ಬ್ರಹ್ಮಾಧ್ವರ್ಯ್ವಾಗ್ನೀಧ್ರ ಮೈತ್ರಾವರುಣಾಗ್ನಿ ಪರಿಚಾರಕೋದ್ಗಾತೃ ನೇತೃ ಹೋತೃ ಜಮದಗ್ನ್ಯಾದಿಗಳಪ್ಪ ಷೋಡಶರ್ತ್ವಿ*ಜರ್ಕಳಿಂ ಬೇಳಲ್ವೇಟ್ಟು ಧರ್ಮಪುತ್ರಂ ಸಪತ್ನಿ ಯಜಮಾನನಾಗಿರ್ದಾಗಳ್—

ಕಂ|| ಚಾರುತರ ಯಜ್ಞ ವಿದ್ಯಾ |
ಪಾರಗ[2]ರ ರವಂಗಳಿಂ ಸ್ವಧಾಕಾರ ವಷ ||
ಟ್ಕಾರ ಸ್ವಾಹಾಕಾರೋಂ |
ಕಾರ ಧ್ವನಿ ನೆಗೞೆ[3] ನೆಗೞ್ದುದಾಹುತಿ ಧೂಮಂ ||೩೪||

ಬಳಸೆ ಮುಗಿಲ್ಗಳ್ ಕನಕಾ |
ಚಳಮಂ ಬಳಸುವವೊಲಿಕ್ಕಿದಾಹುತಿಗಳ ಗೊಂ ||
ದಳದಿನೊಡನೊಗೆದ ಪೊಗೆಗಳ್ |
ಬಳಸಿದುವೆಡೆವಿಡದೆ ಕನಕಯೂಪಮನಾಗಳ್ ||೩೫||

ಚಂ|| ಒಡನೆ ದಿಗಂತ ದಂತಿಗಳ ಕೋಡ ಮೊದಲ್ಗಳೊಳೆಯ್ದೆ ಪೊಕ್ಕು ಸಿ |
ಪ್ಪಡಸಿದ ಮಾೞ್ಕೆಯಾದುವು ಕರಂಗಳಡಂಗಿ ಕಿಲುಂಬುಗೊಂಡ ಕ ||
ನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ಕೂಡೆ ಕ |
ರ್ಪಡ[3]ರ್ದೆಣೆಯಾದುದಾ ಯಮುನೆಗಗ್ಗದ ಯಾಗದ ಧೂಮದೇೞ್ಗೆಯೊಳ್ ||೩೬||

ಕಂ|| ಗಣನಾತೀತಾಜ್ಯಾಹುತಿ |
ಗಣದಿಂದಂ ತಣಿಯೆ ಜಾತವೇದ[4]ನುಮಾ ಬ್ರಾ ||
ಹ್ಮಣ ಸಮಿತಿ ಬೇಳೆ ದೇವರ್ |
ತಣಿಯುಂಡರ್ ನೆರೆದು ದಿವ್ಯಹವ್ಯಾಮೃತಮಂ ||೩೭||

ಮ|| ತ್ರಿದಶೇಂದ್ರಂಗೆ ಯುಧಿಷ್ಠಿರಾಧ್ವರದ [5]ಮಾಸಾಮರ್ಥ್ಯಮಂ ಸೂಱು ಸೂ |
ಱದೆ ಪೇೞಲ್ ಪರಿವಂತೆ ಪೊಣ್ಮೆ ಪಲವುಂ ಧೂಮಂಗಳಾ ಹೋಮ ಧೂ |
ಮದ ಗಂಧಂ ನಸು ಮುಟ್ಟೆ ದಿವ್ಯ ಮ[6][ಖ]ಮುಂ ಕೆಯ್ಕೊಂಡು ಸಗ್ಗಕ್ಕೆ ಪಾ |
ಱಿದುವಾ ಪಾರಿವ ಜಕ್ಕವಕ್ಕಿಗಳದೇಂ ಪೆಂಪೋ ಮಹಾಯಜ್ಞದಾ ||೩೮||

---

1. ಬ್ರಹ್ಮಧ್ವೈರ್ಯಾಗ್ನಿ ಹೋತ್ರ ವರುಣಾಗ್ನಿ ಪಶ್ಚಾರಕೊಳದ್ಗತ ನೇತ್ರಿ ಹೋತ್ರಿ ಜಮದಗ್ನಿಯಾದಿಗಳಪ್ಪ ಷೋಡಶ ದ್ವಿಜರ್ಕಳಿಂ (ಸ.); 2. ರಾವಂ (ಕ. ಖ.); 3. ರ್ಗಣೆಯಾದುದಗ್ನಿಗಳ ಧೂಮದೊಳಾ ನೃಪ ಧರ್ಮಪುತ್ರನಾ (ಕ. ಖ.), ರ್ಗಣೆಯಾದುದಗ್ನಿಗಳ ದೂಮದೊಳಾ ಮಹೀಶನಂ (ಗ.); 4: ಮನಾ (ಕ. ಖ. ಗ.); 5. ಮಾಮಾಹಾತ್ಮ್ಯ (ಕ.), ಸಾಮರ್ಥ್ಯ (ಖ. ಗ. ಘ.); 6, (ಘ.).

**ಇದು ಕ. ಪ್ರತಿಯ ಪಾಠಾಂತರ

ವ|| ಅಂತು ಪುರೋಡಾಶ ಪವಿತ್ರೋದರನುಂ ಸೋಮಪಾನ [1]ಕಷಾಯಿತೋದರನುಮಾಗಿ ಮೂವತ್ತೆರಡು ದಿವಸದೊಳ್ ಕ್ರತುವಂ ನಿರ್ವರ್ತಿಸಿ ಮಹಾದಾನಂ ಗೆಯ್ದು ದಕ್ಷಿಣಾ ಕಾಲದೊಳ್—

ಉ|| ಒಟ್ಟಿದ ಪೊನ್ನ ಬೆಟ್ಟುಗಳನೀವೆಡೆಗೇವುದೊ ತೂಕಮೆನ್ನ ಕೆ।
ಯ್ಗಟ್ಟಳೆ ಕೊಳ್ಳಿಮೆಂದು ಕುಡೆ ಷೋಡಶ ಋತ್ವಿಜರ್ಗಿತ್ತುದರ್ಕೆ ಬಾ॥
ಯ್ವಿಟ್ಟರೆ ವಿಪ್ರ ಕೋಟಿ ಮಡಗಲ್ಕಿಡೆಯಿಲ್ಲದೆ ಪೊನ್ನ ರಾಶಿಯಂ।
ಬಟ್ಟನೆ ಬಂದು ಕಾಯೆ ಯಮನಂದನನೇನ್ ತೊದಳಿಲ್ಲದಿತ್ತನೋ ॥೭೯॥

ಸ್ರ|| ದಾನಾಂಭಃ ಪೀನ ಗಂಡಸ್ಥಳ ಕರಿ ನಿಕರಂ ಬಾಱ್ತೆಯೋ ಮೆಚ್ಚುವೇೞಾ।
ಜಾನೇಯಾಶ್ವೋತ್ಕರಂ ಬಾಱ್ತೆಯೊ ಮಣಿನಿಚಯಂ ಬಾಱ್ತೆಯೋ ಪೇೞಿಮೆಂದಾ॥
ದೀನಾನಾಥರ್ಗೆ ವೃದ್ಧ ದ್ವಿಜ ಮುನಿ ನಿಕರಕ್ಕಂದೆಡರ್ ಪೋಪಿನಂ ಕಃ।
ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂಱೆಗೊಟ್ಟಂ ॥೮೦॥

ವ|| ಅಂತು ನಿಜ ಧವಳಚ್ಛತ್ರ ಚಾಮರ ಸಿಂಹಾಸನಾದಿ ರಾಜಚಿಹ್ನಂಗಳುೞಿಯೆ ಸರ್ವಸ್ವಮೆಲ್ಲಮಂ ದಕ್ಷಿಣೆಗೊಟ್ಟು ವ್ಯಾಸ ಗಾಂಗೇಯ ವಿದುರ ಬಾಹ್ಲೀಕ ಸೋಮದತ್ತ ಭಗದತ್ತ ಧೃತರಾಷ್ಟ್ರ ದ್ರೋಣಾಶ್ವತ್ಥಾಮ ಕೃಪ ಕುಲವೃದ್ಧರುಮಂ ದುರ್ಯೋಧನ ದುಶ್ಶಾಸನ ಕರ್ಣ ಶಲ್ಯ ಶಕುನಿಗಳುಮನವರವರ ದಾನ ಸನ್ಮಾನಾದಿಗಳೊಳಂ ಸಂತಸಂಬಡಿಸಿ ಧರ್ಮಪುತ್ರಂ ಪೇೞಿಮೀ ಸಭೆಯೊಳಗ್ರಪೂಜೆಗಾರ್ ತಕ್ಕರೆನೆ ಗಾಂಗೇಯನಿಂತೆಂದಂ—

ಮ|| ಬಲಿಯುಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾ।
ತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ॥
ಚಲದಿಂ ಸೀಳ್ದವನಾವನಬ್ಧಿ ಮಥನ ಪ್ರಾರಂಭದೊಳ್ ಮಂದರಾ।
ಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ ॥೮೧॥

ವ|| ಎಂದು ತನ್ನ ಮನದೊಳಚ್ಚೊತ್ತಿದಂತೆ ನುಡಿದ ಗಾಂಗೇಯನ ಮಾತಂ ಮನದೆಗೊಂಡು ಯಮನಂದನನಾನಂದಂಬೆರಸಂತೆ ಗೆಯ್ವೆನೆಂದು ಪುರುಷೋತ್ತಮಂ ಗರ್ಘ್ಯಮೆತ್ತಿದಾಗಳ್—

---

1. ದಯದಿಂ ಪಾನಕಪಾಯಿತೋರಿ (ಕ.), ದಯೆಯಿಂ ಪಾನಕ ಪಾಯಿಃತೋ (ಖ.ಗ.), ದಯದಿಯಿಂ ಪಾನ ಕಷಾಯಿತೋ (ಘ.).

ಕಂ|| ಮುಳಿದು ಶಿಶುಪಾಲನಾ ಸಭೆ |
ಯೊಳಗೆ ಮಹಾಪ್ರಳಯ ಜಳಧಿನಾದದಿನಿರದು ||
ಚ್ಚಳಿಸಿ ನುಡಿದಂತೆ ಕಳೆ ಕಳೆ |
ಹರಿಗೆತ್ತಿದನರ್ಘ್ಯ[1]ದರ್ಘ್ಯಮಂ ಧರ್ಮಸು[2]ತಾ || ೪೨ ||

ತೀವಿದ ನರೆಯುಂ ಡೊಳ್ಳುಂ |
ದೇವವ್ರತನೆನಿಸಿ ನೆಗಟ್ದ ಯಶಮುಂ [3]ಬೆರಸಿ ||
ನ್ನೀವುದು ಹರಿಗರ್ಘ್ಯಮನೆಂ |
ದಾವನುಮೀ ಭೀಷ್ಮರಂತು ನುಡಿದರುಮೊಳರೇ || ೪೩ ||

ಕುರು ವೃದ್ಧಂ ಕುಲ ವೃದ್ಧಂ |
ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್ ||
ದೊರೆಗಿಡಿಸಿ ನುಡಿದೊಡೇನೊಲ |
ವರಮೆನ್ನದೆ ನೀನುಮುದನೆ ಕೊಂಡೆಸಗುವುದೇ || ೪೪ ||

ಮನದೊಲವರಮುಳ್ಳೊಡೆ ಕುಡು |
ಮನೆಯೊಳ್ ಹರಿಗಗ್ರಪೂಜೆಯಂ ಯಜ್ಞದೊಳೀ ||
ಮನುಜಾಧೀಶ್ವರ ಸಭೆಯೊಳ್ |
ನೆನೆಯಲುಮಾಗದು ದುರಾತ್ಮನಂ ಬೆಸಗೊಳ್ವಾ || ೪೫ ||

ಆಳವಱಿಯದೆಗ್ಗು ಬಳವಳ |
ಬಳೆವಿನೆಗಂ ಪಚ್ಚ ಪಸಿಯ ತುಱುಕಾಱಂಗ ||
ಗ್ಗಳಿಕೆಯನೆ ಮಾಡಿ ನೀನುಂ |
ಪ[4]ಳಿಯಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ || ೪೬ ||

ದೇವರನಡಿಗೆಱಗಿಸಿ ಸಕ |
ಳಾವನಿತಳದದಟರಂ ಪಡಲ್ವಡಿಸಿದ ಶೌ ||
ರ್ಯಾವಷ್ಟಂಭದೊಳಾನಿರೆ |
ಗೋವಳಿಗಂಗಗ್ರಪೂಜೆಯಂ ನೀನ್ ಕುಡುವಾ || ೪೭ ||

ಸಮಕಟ್ಟಱಿಯದೆ ಹರಿಗ |
ರ್ಘ್ಯಮೆತ್ತಿ ನಿಂದಿರ್ದ ಯಜ್ಞಮುದು ಮೊದಲೊಳ್ ತಾ ||
ನಮರ್ದುಮಮು[5]ರ್ದಿ[ರದೆ] ತಣಿಯುಂ |
ಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್ || ೪೮ ||

---

1. ಹಸ್ತ (ಕ. ಖ.); 2. ತಂ (ಕ.); 3. ಬೆಸಸಿಂನೀ (ಖ. ಗ. ಘ.); 4. ಬಿ (ಪ.); 5. ರ್ದಿರೆ (ಸ.).

ಕಂ॥ ಕುಡವೇೞ್ವನ ಕುಡುವನ ಕುಡೆ ।
ಪಡೆವನ ಪೆಂಪೇಂ ನೆಗೞ್ತೆವಡೆಗುಮೊ ಪೇೞ್ವಂ ॥
ಕುಡವೇೞ್ಗೆಮ ಕುಡುವಣ್ಣಂ ।
ಕುಡುಗೆಮ ಕುಡೆ ಕೊಳ್ವ ಕಲಿಯನಱಿಯಲ್ಕಕ್ಕುಂ ॥ ೪೯ ॥

ವ॥ ಎಂದನಿತಱೊಳ್ ಮಾಣದೆ ಗೀರ್ವಾಣಾರಿಯುಸುರಾರಿಯನಿಂತೆಂದಂ—

ಕಂ॥ ದೊರೆಯಕ್ಕುಮೆ ನಿನಗೆ ಯುಧಿ ।
ಷ್ಠಿರನರ್ಘ್ಯಮನೆತ್ತೆ ಶಂಖದೊಳ್ ಪಾಲೆಱೆದಂ ॥
ತಿರೆ ಮಲಿನಮಿಲ್ಲದೊಳ್ಗುಲ ।
ದರಸುಗಳಿರೆ ನೀನುಮಗ್ರಪೂಜೆಯನಾನ್ಪಾ ॥ ೫೦ ॥

ಮನದೊಲವರದಿಂದೀ ಯಮು ।
ತನಯನ ಕುಡುಮಗ್ರಪೂಜೆ ಮತ್ಸನ್ನಿಧಿಯೊಳ್ ॥
ನಿನಗಶನಿಯ ಮಿೞ್ತುವ ನಂ ।
ಜಿನ ದೊರೆಯೆಂದೊಣರ ನಂದಗೋಪಾಲ ಸುತಾ ॥ ೫೧ ॥

ಮನೆ ನಿನಗೆ ನಂದಗೋಪಾ ।
ಲನ ಮನೆ ತುಱುಗಾರ್ತಿ ನಿನಗೆ ವ ನೆಪೆಂಡತಿ ಪ ॥
ಚ್ಚನೆ ಪಸಿಯ ಗೋವನ್ನೈ ಕರ ।
ಮ[1][ನ]ಮವೆ ನಿನ್ನಳವಿಗಳವನಱಿಯದೆ ನೆಗೞ್ದೈ ॥ ೫೨ ॥

ಮುರನಡಸಿ ಪಿಡಿದು ಕಟ್ಟಿದ ।
ಪರಿಭವಮಂ ಮಱ[32]ಪೆ ನಿನ್ನ ಪೆಡ[3]ಗೆಯ್ಗ[ಟ್ಟಿ]ಂ ॥
ಶರದಿಂ ಬಿಡಿಸಿದನಲ್ಲ[4]ನೆ ।
ಸರಿತ್ಸುತಂ ಬನ್ನವಿನ್ನವೆಂಬುವುವೊಳವೇ ॥ ೫೩ ॥

ದನುಜಾಂತಕನೆಂಬೀ ನಿ ।
ನ್ನ ನಚ್ಚು[5]ವೋದಂತೆಲವೊ ಮುನ್ನೆನ್ನನ್ನಂ ॥
ದನುಜಂ ಪುಟ್ಟಿದೆ ಸಂದುದು ।
ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ ॥ ೫೪ ॥

---

1. ನೆ (ಸ.); 2. ದ (ಕ. ಖ ಘ); 3. ಗೆಯ್ಗಟ್ಟ । ಟ್ಟರೆ ಬಿಡಿ (ಕ.). ಗೈಕ । ಟ್ಟರೆ ಬಿಡಿ (ಗ.) ಗೈಗಟ್ಟಂ । ಶರ (ಘ); 4. ದನೇ (ಕ.); 5. ವೆಸರಂದು ಮುನ್ನೆ ನನ್ನಂದಿಗರುಂ ದನುಜರ್ (ಘ.).

ಕಂ॥ ಆನಿರ್ದ ಸಭೆಯೊಳರ್ಘ್ಯಮ |
ನಾನಲ್ಕಟಸಿದ ನಿನ್ನ ಬಿಸುನೆತ್ತರಸಿಂ ॥
ತೀ ನೆರವಿ ನೋಡೆ ಕುಡಿಯದೊ |
ಡೇನೋ ಶಿಶುಪಾಲನೆಂಬ ಪೆಸರೆಸೆದಪುದೇ ॥ ೫೫ ॥

ಮಱೆದ ಮುಚುಕುಂದನೆಂಬನ |
ಮಱೆವೊಕ್ಕುದನಂದು ನೀನ್ ಜರಾಸಂಧಂಗಂ ॥
ಬಿಱುತೋಡಿದುದಂ ಭೂತಳ |
ಮಱಿಯದೆ ನೆನೆಯಲವೊ ಗೋವುಗಾದುದು ಪುಸಿಯೇ ॥ ೫೬ ॥

ಮೀನಾವೆ ಪಂದಿಯೆಂಡೆನಿ |
ತಾನುಂ ತೆಱನಾಗಿ ಡೊಂಬ ವಿದ್ದೆಯನಾಡಲ್ ॥
ನೀನಱಿವೆಯುಱದಿದಿರ್ಚಿಡೊ |
ಡಾನಱಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ ॥ ೫೭ ॥

ಅಱಿಯದಿದಂ ಮಾಡಿದೆನೆ |
ನ್ನಱಿಯಮಿಕೆಗೆ ಸೈರಿಸೆಂದು ನೀನ್ ಸಭೆಯೊಳ್ ಕಾ ॥
ಲ್ಗೆಱಗೆಱಗು ಕೊಲ್ಲೆನೆಂದೆರ್ದೆ |
ತೆಱೆವಿನೆಗಂ ಹಱಿಯ ನೆಱನನಸುರಂ ನುಡಿದಂ ॥ ೫೮ ॥

ವ॥ ಅಂತು ನುಡಿದು ಕಾಯ್ಪಿನೊಳ್ ಪಿಡುಗಿ ನಡನಡ ನಡುಗಿ—

ಕಂ॥ ಪೊಳೆವುಳ್ಳುವ ಕುಡು ದಾಡೆಯ |
ಪೊಳಪು ನೊಸಲ್ಗಡರ್ದ ಪೊಡರ್ವ ಪುರ್ವಿಸೆವಿನವು ॥
ವ್ವಳಿಸುವ ಮುಳಿಸಿನ ದಳ್ಳುರಿ |
ಗಳನುಗುಳ್ವವೊಲುಗುಳ್ದನಸುರನುಱವ ಪೞಿಗಳಂ ॥ ೫೯ ॥

ವ॥ ಆಗಳ್ ಸಭಾಸದರೆ[1]ಲ್ಲಮೊವೆ ಮಿಡುಕದೆ ಪಂಡೆಯುಂ ಪಾವಡರ್ದವೊಲುಸಿರದಿರೆ ನಾರಾಯಣಂ ಶಿಶುಪಾಲನನಿಂತೆಂದಂ—

ಕಂ॥ ನಿನ್ನಯ ತಾಯ್ ಸಾತ್ವತಿಯುಂ |
ನಿನ್ನಂ ತಂದೆನ್ನ ತೊಡೆಯಮೇಲಿಱಿಪುವುದುಂ ॥
ನಿನ್ನ ಲಲಾಟದ ಕಣ್ಣದು |
ಮುನ್ನಮೆ ಕಿಡೆ ನಿನ್ನ ಮೃತ್ಯುವೆನ್ನಯ ಕೆಯ್ಯೊಳ್ ॥ ೬೦ ॥

1. ಲ್ಲಂ ಮೋರೆ (ಕ. ಗ.), ಲಂ ಮೊಲೆ (ಖ.).

ಕಂ॥ ನೆಱೆದುದನಱಿದೀ ಕಿಱಿಯುವ ।
ನಱಿಯದೆ ಕೆಡೆ ನುಡಿದನಪ್ಪೊಡಂ ನೂಱುವರಂ ॥
ನೆಱೆ ಸಲಿಸುವುವೆಂದುದನಾಂ ।
ಮಱೆವೆನೆ ಬಯ್ ಬಯ್ಯೆ ಸಲಿಸುವೆಂ ನೂಱುವರಂ ॥ ೬೧ ॥

ಮುನಿಯಲೆನಗಾಗ ಗಾಂಗೇ ।
ಯನಿರ್ದನಿರ್ದಂ ಘಟೋದ್ಭವಂ ನೆಗೞ್ದ ಪೃಥಾ ॥
ತನಯರುಮಿರ್ದರ್ ದುರ್ಯೋ ।
ಧನ[1]ನಿರ್ದಂ ಕೇಳೆ ಪೇ[2][ೞ್ವರಾ] ಬಲ್ಲವರುಂ ॥ ೬೨ ॥

ಎನೆಯೆನೆ ಬಾಯ್ಗಂ ಬಂದನಿ ।
ತನಿತುಮನಮರಾರಿ ಬಯ್ಯೆ ಸೈರಿಸಿ ನೂಱಿಂ ॥
ಬನಿತುವರಂ ಮನ್ನಿಸಿ ನಸು ।
ಕಿನಿಸದೆ ಮಿಗೆ ಕಿನಿಸಿ ದಿತಿಜಕುಳ ದವದಹನಂ ॥ ೬೩ ॥

ಮುಳಿದು ತನಗರ್ಘ್ಯಮೆತ್ತಿದ ।
ತಳಿಗೆಯೊಳಿಡೆ [3]ತಿಱಿದ ತೆಱದೆ ತಲೆ ಪಱಿದಾಗಳ್ ॥
ಕಳಕಳಿಸಿ ನಗುತುಮಿರ್ದುದು ।
ತಳಿಗೆಯ ಮೇಲಸುರನದಟಿದೇನಚ್ಚರಿಯೋ ॥ ೬೪ ॥

ವ॥ ಅಂತು ಜವನರ್ಘ್ಯಮೆತ್ತಿದಂತಿರ್ದ ಶಿಶುಪಾಲನ ಶಿರೋಂಬುಜಮಂ ಕಂಡಬಲ್ಗಾತನ ನಂಟರಪ್ಪಶ್ವಗ್ರೀವ ವಿದ್ಯುನ್ಮಾಲಿ ನೀಲಾದಿಗಳಪ್ಪ [4]ಪ್ರಭುಗ[5]ಳೆನಿಬ ರಾನುಂ ಮುರಾಂತಕನಂ ಬಂದು ತಾಗಿದೊಡೆ—

ಕಂ॥ ತಿ[6]ರಿಪಿ ಕರ ಚಕ್ರಮಂ ದನು ।
ಜರ ತಲೆಗಳನಸುರವೈರಿ ಮು[7]ಳಿದಿಡೆ ಪಱಿದಂ ॥
ಬರತಳಮನೆಯ್ದೆ ಮೇಘದ ।
ಪೊರೆವೊರೆಯೊಳ್ ತೊಡರ್ದು ನೆಲಕೆ [8]ಬೀೞವೆ ತಲೆಗಳ್ ॥ ೬೫ ॥

ವ॥ ಅನಿತೊಂದು ಮಹಾ ಪ್ರಘಟ್ಟದೊಳಗ್ರ ಪೂಜೆಯಂ ನಾರಾಯಣಂಗೆ ಕೊಟ್ಟವಭೃ[9]ಥ ಸ್ನಾನದೊಳ್ ಪಿರಿದುಮೊಸಗೆಯಂ ಮಾಡಿ ಯಾಗವಿಧಿಯಂ ನಿರ್ವರ್ತಿಸಿ ನೆರೆದ ರಾಜಕುಲಮೆಲ್ಲಮಂ ಪೂಜಿಸಿ ವಿಸರ್ಜಿಸಿದಾಗಳ್ ಮುರಾಂತಕ ನಂತಕನಂದನನನಿಂತೆಂದಂ—

1. ಕೃಪ ಕಾನೀನರಿರ್ದರತ್ತ ಪಲಂಬರ್ (ಕ.), (ಖ. ಗ. ಘ. ಗಳಲ್ಲಿ ತಪ್ಪುಗಳು); 2. ೞ್ವುದಾ (ಘ.); 3. ಯಿ (ಕ.), ನಿ (ಖ.); 4. ಪ್ರಭೃತಿಗಳೆ (ಖ. ಗ. ಘ.); 5. ಳ (ಕ.) 6. ರುಪೆ (ಕ.); 7. ಟಿಎನೊಡೆಪ (ಕ.), ಳಿದೆಡೆವ (ಖ.), ಳಿವೆಡೆಸ (ಗ.); 8. ಜಿೞ್ದವು (ಘ.); 9. ತ (ಸ.).

ಮ॥ ಹಿಮಸೇತು ಪ್ರತಿಬದ್ಧ ಭೂವಳಯಮಂ ನಿಷ್ಕಂಟಕಂ ಮಾಡಿ ವಿ।
ಕ್ರಮಮಂ ತೋಱಿ ನಿಜಾನುಜರ್ ನೆ[1][ರಪಿ] ಸೊಂಪೈಶ್ವರ್ಯದಿಂ ರಾಜಸೂ॥
ಯಮನಿಂದಗ್ಗಳದಗ್ಗಳಿಕ್ಕೆಯ ಮಖಂ ತಾನೆಂಬಿನಂ ನಿನ್ನ ಕೀ।
ರ್ತಿ ಮುಖಂ [2]ಕೀರ್ತಿ[ಮುಖಂಬೊಲೇನೆ]ಸೆದುದೋ ದಿಗ್ದಂತಿ ದಂತಂಗಳೊಳ್ ॥ ೬೬ ॥

ವ॥ ಎಂದು ನುಡಿದ ಮಂದರಧರನಂ ನಿನ್ನನುಗ್ರಹದೊ[3]ಳದೇವಿರಿದೆಂದು ವಸ್ತ್ರ ವಾಹನಂಗಳನಿತ್ತು ದ್ವಾರಾವತಿಗೆ ಕಳಿಪಿ ಸುಖ ಸಂಕಥಾ ವಿನೋದಂಗಳೊಳ್ ರಾಜ್ಯಲಕ್ಷ್ಮಿಯನನುಭವಿಸುತ್ತಿರ್ಪನ್ನೆಗಮತ್ತಂ—

ಕಂ॥ ಮೇಗಿಲ್ಲದ ಬಲ್ಲಾಳ್ತನ।
ದಾಗರಮೆನೆ ನೆಗೞ್ದ ತತ್ಪೃಥಾನಂದನರು॥
ದ್ಯೋಗದ ಚಾಗದ ಯಾಗದ।
ಭೋಗದ [4]ಮೈಮೆಗೆ ಸುಯೋಧನಂ ಬೆಱಗಾದಂ ॥ ೬೭ ॥

ವ॥ ಆಗಿ ದುಶ್ಶಾಸನ ಕರ್ಣ ಶಕುನಿ ಸೈಂಧವರೆಂಬ ದುಷ್ಟಚತುಷ್ಟಯದೊಳ್ ಮಂತಣಮಿರ್ದು ದಾಯಿಗರಪ್ಪೊಡೆ ಕರಂ ಪೆರ್ಚಿದರವರ ಪೆರ್ಚಂಗೇಗೆಯ್ವಂ [5]ಬಸನಂಗಳಂ ಸಮಕಟ್ಟುವಮಪ್ಪೊಡೆ ಸಪ್ತವ್ಯಸನಂಗಳಯ್ವರುಮನೊಂದುಂ ಗೆಲ್ವವಲ್ಲವು ರಾಷ್ಟ್ರವ್ಯಸನಮುಂ ಬಳವ್ಯಸನಮುಂ ಪಾರ್ವಮಪ್ಪೊಡವು ಮುನ್ನಮಿಲ್ಲ ಪರಮಂಡಳ ವ್ಯಸನಮನಾರಯ್ವಮಪ್ಪೊಡಿತ್ತುಂ ತೆತ್ತುಂ ಬಾೞ್ವ ಮಂಡಲಮಲ್ಲದೆ ಕೀಱಿಯುಂ ಮೀಱಿಯುಂ ನೆಗೞ್ವ ಮಂಡಲಮಿಲ್ಲ ಪುರುಷಮುಂ ಸಮಕಟ್ಟುವಮಪ್ಪೊಡೆ ಪೊಕ್ಕಿಱಿಯಲಾತ್ಮವರಿಲ್ಲ ರಸ ದಾನಾದಿಗಳೊಳ್ ಛಿದ್ರಿಸುವಮಪ್ಪೊಡಮಾ[6]ಪ್ತನಂತರುಂ ಬುದ್ಧಿವಂತರುಮಾಗಿ ನೆಗೞ್ದರಿನ್ನಾವ ಮಾೞ್ಕೆಯೊಳ್ ಪಗೆಯಂ ಕಿಡಿಸುವಮೆಂತುಮಂ ಪೇೞಿಮೆನೆ ಶಕುನಿಯಿಂತೆಂದಂ—

ಚಂ॥ ಬೆಸಸಿದ ನಿನ್ನ ಮಾತಿನಿತುಮಂತುಟೆ ಗೆಲ್ಲವು ಪಾಂಡುಪುತ್ರರಂ।
[7]ಬಸನದೊಡಂಬಡಂ ಮುಱಿದುಮಾ ಯಮನಂದನ[8]ನಲ್ತೆ ನೆತ್ತದೊಳ್॥
ಬಸನಿಗನಾತನಂ ಬರಿಸಿ ನೆತ್ತಮನಾಡಿಸಿ ಗೆಲ್ದುಕೊಳ್ವುದೀ।
ವಸುಮತಿಯುಂ ಮನಂಬಸದೆ ಸೀನ್ ಬೞಿಯಟ್ಟು ಫಣೀಂದ್ರಕೇತನಾ ॥ ೬೮ ॥

1. ರೆದು (ಕ. ಗ. ಘ.), ರದು (ಖ.); 2. ಕೀರ್ತಿಗೆ ಪೋಲಲೆಂದೆ (ಕ. ಖ.), ಕೀರ್ತಿ ಬಾಲಿಗೆನೆ (ಗ.), ತಾನೆನಲೇನದೇಂ ಮಱಿ (ಘ.); 3. ಳಾದುದೆಪ್ಪೊಳೀನುಂಟೆಂದು (ಘ.); 4. ಮಹಿ (ಕ. ಖ. ಗ); 5. ಬೆ (ಘ.); 6. ತ್ಯ (ಖ. ಘ.); 7. ಬ್ಯ (ಕ. ಖ. ಘ.) ವ್ಯ (ಗ.); 8. ನುಂತೆ (ಕ.), ಲುತ್ತೆ (ಖ.), ಲುಂತೆ (ಗ.).

ವ|| ಎಂದು ನಾಟಿವಾಸಗೆಗಳಂ ಮುನ್ನಮೆ ಸಮಕಟ್ಟಿ ತಾಮುಮಾಮುಂ ಕೆಲವು ದೆವಸಂ ಗೋಷ್ಠಿಯೊಳಿರ್ಪಂ ಬರ್ಕೆಂದು ಬೞಿಯನಟ್ಟೆಪೊಡವರ ಮನದ ಪುಲ್ಲಗೆಯುಂ ಪೊಲ್ಲಮೆಯುಮನಱಿಯದೆ ಸಮಸ್ತ ಬಳೋದ್ಯುಕ್ತನಾಗಿ ಶಕುನಂಗಳ ಕ್ರಮಮುಂ ಬಗೆಯದೆ ನಿಯತಿಃ ಕೇನ ಲಂಘ್ಯತೇ ಎಂಬ ನುಡಿಯಂ ನನ್ನಿಮಾಡಿ ಮದಗಜೇಂದ್ರ ಪುರಮನೆಯ್ದೆ ಬರೆ ಧೃತರಾಷ್ಟ್ರಾದಿ ಕುಲವೃದ್ಧರೊಡನೆ ದುರ್ಯೋಧನನಿದಿರ್ವೋಗಿ ಧರ್ಮಪುತ್ರಂಗೆ ಪೊಡಮಟ್ಟು ಭೀಮನಂ ಸಮಾನ ಪ್ರತಿಪತ್ತಿಯೊಳ್ ಕಂಡು ತನಗೆ ಪೊಡಮಟ್ಟ ಮತ್ತಿನ ಮೂವರುಮಂ ತೆಗೆದು ತೞ್ಕೈಸಿ ಪರಸಿ ತನ್ನ ತಮ್ಮಂದಿರೆಲ್ಲರುಮನಯ್ವರ್ಗಂ ಪೊಡಮಡಿಸಿ ಪೊೞಲೊಳಗ[1][ಣ್ಗೆ]ವಂದು ರಾಜಮಂದಿರಮಂ ಪೊಕ್ಕ—

ಉ|| ನೋಡಿ ಪೃಥಾ ತನೂಜರ ಸಭಾಗೃಹದಂದಮನಂತುಟಪ್ಪುದಂ |
ಮಾಡಿಪೆನೆಂದು ಮಾಡಿಸಿ ಸಭಾಲಯಮಂ ನಿಜ ರಾಜಲೀಲೆಯೊಳ್ ||
ಕೂಡಿ ಯುಧಿಷ್ಠಿರ ಪ್ರಭುಗೆ ತಾನೆ ಸುಯೋಧನನುಯ್ದು ತೋಱಿದಂ |
ನೋಡಿರೆ [2]ಸಿಂಹಮಾಡುವರ ಬಾಲಮನಾಡಿದರೆಂಬ ಮಾೞ್ಕೆಯಿಂ || ೧೯ ||

ವ|| ಅಂತು ಸುಯೋಧನಂ ತನ್ನ ವಿಭವಮುಮಂ ವಿಳಾಸಮುಮಂ ಪಾಂಡವರ್ಗೆ ಮೆಱೆದು ಕಂದುಕಕ್ರೀಡಾದಿ ನಾನಾ ವಿಧ ವಿನೋದಂಗಳಿಂ ಕೆಲವು ದಿವಸಮನಿರ್ದೊಂದು ದಿವಸಂ ತನಗೆ ಸಾವಂ ಸಮಕಟ್ಟುವಂತೆ ಪಿಂಗಾಕ್ಷನಕ್ಷ ಕ್ರೀಡೆಯಂ ಶಕುನಿಯೊಳ್ ಸಮಕಟ್ಟಿ ಪೊಡಲ್ವೇೞ್ದು ಪುಸಿಯನೆ ಪೆಱಂ ಮುನ್ನಮಾಡಲ್ವೇೞ್ದು ತಾನುಂ ಧರ್ಮಪುತ್ರನುಂ ಕೆಲದೊಳಿರ್ದು ನೋಡುತ್ತಿರೆ ಶಕುನಿಯಿಂತೆಂದಂ—

ಕಂ|| ನೋಡುವುದಱೊಳೇನಟ್ಟಿಯೊ |
ಳಾಡುತ್ತಿರಲಾಗ ತಮ್ಮುತಿರ್ವರುಮೆನೆ ನಾ ||
ಮಾಡು[3]ವಮೆ ಬನ್ನಿಮೆಂಬುದು |
ಮಾಡುವ ಬಗೆ ಬಂದು ನೆತ್ತಮುಂ ಧರ್ಮಸುತಂ || ೨೦ ||

ಕರೆದೊಡೆ ಜೂದಿಂ[4]ಗಂ ಧುರ |
ಭರ[ಕಾಖೇಟ]ಕ್ಕೆ ಭೂಭುಜಂಗಾಗದು ಮೆ ||
ಯ್ಗರೆದಿರಲೆಂಬ ಪುರಾತನ |
ಗುರು ವಚನಂ ತನಗೆ ಸಿಟ್ಟೆಪಟ್ಟುದಱಿಂದಂ || ೨೧ ||

ವ|| ಅಂತು ಪೂಡಿಕೊಂಡು ನಾಟಿವಾಸಗೆಯನಿಕ್ಕಲ್ವೇೞ್ವುದುಂ ಶಕುನಿ ಮುನ್ನೆ ತನ್ನ ಮಾಡಿದ ನಾಟಿವಾಸಗೆಗಳನಿಸಾಳಂತೆ ಕಣ್ಣಱಿದು ಮುಟ್ಟಿ ಮುಟ್ಟಿ

1. ಣಂಗೆ (ಸ.); 2. ಜಿಹ್ವ (ಕ.), ಜಿಂಹ್ವ (ಖ.); 3. ವೆವುಂ (ಕ.), ಪವೆಂ (ಖ.), ವಮೆಂ (ಗ. ಘ.); 4. ಗಪ್ಪುರ | ಭರಕ್ಕೆ (ಕ. ಖ.), ಗಬ್ಬುರ | ಭರಕ್ಕೆ (ಗ.), ಗಂಧುರ | ಭರಕ್ಕೆ (ಘ.).

ಉ॥ ಸಾಲವೆ ಜೂದು ನಿಮ್ಮೊಳಗಿದೇಂ ಗಳ ಮಾಣಿಸಿಮೆಂದೊಡನ್ಯ ಭೂ ।
ಪಾಲ ಕಿರೀಟ ತಾಟಿತ ಪದಂ ಯಮನಂದನನಜ್ಜ ನಾಡೆಯುಂ ॥
ಸೋಲದೊಳಾದಮೋಹಯಿಸಿದೆಂ ನುಡಿಗಿನ್ನೆಡೆಯಿಲ್ಲ ಪೋಗಿಮಾ ।
ತ್ಮಾಲಯಕೆಂದೊಡೇನುಮೆನಲಣ್ಮದೆ ಬಾರಿಸ[1]ಲಣ್ಮದಿ[2][ರ್ವ]ರುಂ ॥ ೭೪ ॥

ವ॥ ಧೃತರಾಷ್ಟ್ರನಲ್ಲಿಗೆ ಪೋಗಿ—

ಚಂ॥ ನಿನಗೆ ಮಗಂ ಪುರಾಕೃತದ ಕರ್ಮಮೆ ಪುಟ್ಟುವವೋಲೆ ಪುಟ್ಟಿ ನಿ ।
ಮ್ಮನಿಬರುಮಂ ರಸಾತಳದೊಳಬ್ದಿದಪಂ ಪಗೆ ಪೊಲ್ಲ ಪಾಂಡು ನಂ ॥
ದನರೊಳಹೀಂದ್ರಕೇತನನ ಜೂದಿನ ಗೆಲ್ಲಮದೆಂತುಟಿನ್ನ ನಂ ।
ಜಿನ ಸವಿಯುಂತುಟೆಂದೊಡಿನಿಸಂತದೊಳಂತಕನಲ್ಲಿಗಟ್ಟುಗುಂ ॥ ೭೫ ॥

ಕಂ॥ ಪುರುಡಿಸಿಕೊಂಡೀಗಳ್ ನೀ ।
ನರಸಿನ ಗರ್ವದೊಳೆ ಬೀಗಿ ಬೆಸೆಯದೆ ಮಗನಂ ॥
ಕರೆದೊಪ್ಪಿಸವೇಟಿ ಯುಧಿ ।
ಷ್ಠಿರಂಗೆ ಮುನ್ ಗೆಲ್ದ ವಸ್ತುವಾಹನ ಚಯಮುಂ ॥ ೭೬ ॥

ವ॥ ಎಂದು ಮತ್ತಮಿಂತೆಂದರ್—

ಮ॥ ಸ್ರ॥ ಕದನ ಪ್ರಾರಂಭ ಶೌಂಡಂ ರಿಪು ನೃಪ[3]ಬ[ಲ ದಾ]ವಾನಲಂ ವೈರಿ ಭೂಭೃ ।
ನ್ಮದವನ್ಮಾತಂಗ ಕುಂಭಸ್ಥಳ ದಳನ[4][ಖ]ರೋಗ್ರಾಸಿ ಪಂಚಾಸ್ಯ ಧೈರ್ಯಂ ॥
ವಿದಿತ ಪ್ರತ್ಯಕ್ಷನಾಶಾ ಕರಿ ನಿಕಟತಟಶ್ರಾಂತ ದಾನಂ ಭರಂಗೆ ।
ಯ್ದಿದಿರೊಳ್ ವಿಕ್ರಾಂತತುಂಗಂ ಹರಿಗನಿರೆ ಬಿಗುತ್ತರ್ಪನಂತಾವ ಗಂಡಂ ॥ ೭೭ ॥

ಇದು ವಿವಿಧ ವಿಬುಧ ಜನ ವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾ ಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್

ಷಷ್ಠಾಶ್ವಾಸಂ

---

1. ಲಂಣ (ಖ. ಗ.); 2. ಬ್ಬ (ಸ.); 3. ಬಡವಾಸ್ಯಾ (ಕ.), ಬಡವಾನಳಂ (ಖ.), ಬಡವಾಲಾನಲಂ (ಗ.), ಶರಧಿ ಬಾಡಬಂ (ಘ.); 4. ಕರೋಗ್ರಾಸ್ತನುಗ್ರಸ್ತ ಧೈರ್ಯಂ (ಕ.), ಕರೋಗ್ರಸ್ಥನೆ ಗ್ರಸ್ಥ ಧೈರ್ಯಂ (ಖ.), ಕರೋಗ್ರಸ್ತನಗ್ರಸ್ತ ಧೈರ್ಯಂ (ಗ.), ಕರೋಗ್ರಸ್ತ ಪಂಚಾಸ್ಯ ವೀರ್ಯಂ (ಘ.).

# ಸಪ್ತಮಾಶ್ವಾಸಂ

ಕಂ॥ ಶ್ರೀ ರಮಣೀ ರಮಣಂಗರಿ ।
ನಾರೀ ವೈಧವ್ಯ ದಿವ್ಯ ದೀಕ್ಷಾ ದಕ್ಷಂ ॥
ಗಾರೆಣೆ ಹರಿಗಂಗೀಗಡೆ ।
ಬಾರಿಸು ನೀಂ ನಿನ್ನ ಮಗನನಂಧ ನರೇಂದ್ರಾ ॥ ೧ ॥

ಕಾದುದು [1]ಸರಣ್ಗೆ ಮಂದರ ।
ನಾದುದು ಕಾಲಾಗ್ನಿ [2]ಬೀ[ವದ]ರಿ ನೃಪತಿಗೆ ಕಾ ॥
ಪೋದುದು ನೆಲಕ್ಕೆ ತೋಳ್ವಲ ।
ಮಿಾ ದೊರೆತೆನೆ ಮರುಳೆ ಹರಿಗನೊಳ್ ಪಗೆಗೊಳ್ವಾ ॥ ೨ ॥

ವ॥ ಎಂದೆಸಿತಾನುಂ ತೆಱದೊಳೆ ಸಾಱಿಯುಂ ಕೇಱಿಯುಂ ನುಡಿದೊಡೆ ಧೃತರಾಷ್ಟ್ರಂ ಮಗನಲ್ಲಿಗೆ ವಂದು ಜಡಿದು ನುಡಿದುಮೇಗೆಯ್ದುಮೊಡಂಬಡಿಸಲಾಱದಿರೆ ಯುಧಿಷ್ಠಿರಂ ತಲೆಗವಿ[3]ವನಲ್ಲದೆಯುಮೋಪದೊಳ್ ತಲೆಗಪಿದು ಸಿಗ್ಗಂಕೊಂಡಾಡಿ ನೆತ್ತಮನಾಡಿ—

ಕಂ॥ ವ್ಯಾಳ ಗಜಂಗಳನಗ್ಗದ ।
ಸೂಳೆಯರೊಕ್ಕಲನನರ್ಘ್ಯ ವಸ್ತುಗಳನಿಳಾ ॥
ಪಾಳಂ ಸೋಲ್ತೊಡೆ ಜೂದಿನ ।
ಕೇಳಿಯನಾ ಕೇ[4]ಳಿ[ಯ]ನಿತಱೊಳ್ ಪಣಿಸಿದರ್ ॥ ೩ ॥

ವ॥ ಮಾಣಿಸಿದೊಡೆ ಮಾಣದೆ [5]ಪಣಮಂ ತೋಱಿಯುಮೊತ್ತೆಯನುಗ್ಗಡಿಸಿಯುಮಾಡಿಮೆನೆ ಪೆಱತೇನುಮುಪಾಯಮಿಲ್ಲದೆಮ್ಮಾಳ್ವ ನೆಲನೊತ್ತೆಯೆಂದೊಡೆ ಬಗೆದು ನೋಡಿ ಗೆಲ್ದಂ ಬೞಿಯಂ ಮುದುಗಣ್ಗಳ್ ಮಗುೞ್ಚಿ ಕುಡಿಸುವರೆಂಬ ಬಗೆಯೊಳಂ ವಿಕ್ರಮಾರ್ಜುನನುಂ ಭೀಮನುಂ ಯಮಳರುಮೇೞ್ದು ಕೊಳ್ವರೆಂಬ ಸಂಕೆಯೊಳಮಂತಲ್ತು ನಿನ್ನ ಸನ್ನಿಯೋ[6]ಳಂ ವರ್ಷಾವಧಿಯೊಳಲ್ಲದೆ ನೆಲನನೊತ್ತೆವಿಡಿಯೆನೆಂದೊಡೆ ಧರ್ಮಪುತ್ರಂ ಪನ್ನೆರಡು ವರುಷಂಬರಂ ನಾಡಂ ಪುಗದರಣ್ಯವೋಳಿರ್ಪಂತುಮ[7][ಜ್ಞಾತ] ವಾಸಮೊಂದೊಂದು ವರುಷದೊಳಾನು

[1]. ಶ (ಖ. ಘ) ; [2]. ಬಲಿದಪರ (ಕ), ಬಲದವರಿ (ಖ), ಬಲದದರಿ (ಗ.), ಬಲದಲರಿ (ಘ.) ; [3]. ಯ (ಖ ಗ. ಘ.) : [4]. ಳಿದನಿತಱೊಳ್ ಕಾಣಿಸಿದಂ (ಕ. ಖ.), ಳದನಿತಱೊಳ್ ಕಾಣಿಸಿದರ್ (ಗ.), ಳದಂತದೊಳ್ ಮಾಣಿಸಿದರ್ (ಘ.) ; [5]. ಪ (ಘ.) ; [6]. ಳಯ್ಯುರುಮೆದೆ (ಕ. ಖ.), ಳ್ವರುಷಾ (ಗ.) ; [7]. ನ್ಯಥಾ (ಸ.).

ಮಱುದರಪ್ಪೊಡೆ ಮತ್ತಂ ದ್ವಾದಶಾಬ್ದಂಬರಂ ನಾಡ ಡೆಸೆಯುಂ ನೋಡಡಂತಾ[1][ಗೆ] ಯೊಂದೆ ಪಲಗೆಯೊಳೆ ಗೆಲ್ಲಸೋಲಮಪ್ಪಂತು ನನ್ನಿ ನುಡಿದು ನೆಲನನೊತ್ತಿ ಯಿಟ್ಟಾಡಿ—

ಕ|| ಆ ಪಲಗೆಯುಮಂ ಸೋಲ್ತು ಮ |
ಹೀಪತಿ ಚಲದಿಂ ಬಱಿಕ್ಕೆ ಸೋಲ್ತಂ ಗಡಮಾ |
ದ್ರೌಪದಿಯುಮನೇನಾಗದೊ |
ಪಾಪದ ಫಳಮೆಯ್ದೆವಂದ ದೆವಸದೊಳಾರ್ಗಂ || ೪ ||

ವ|| ಅಂತು ದುರ್ಯೋಧನನಜಾತಶತ್ರುವಿನ ಸರ್ವಸ್ವಮೆಲ್ಲಮುಂ ಗೆಲ್ದು ಗೆಲ್ದ ಕಸವರಮೆಲ್ಲಂ ಬಂದುದು ಪಾಂಚಾಳರಾಜ ತನೂಜೆಯೊರ್ವಳ್ ಬಂದಳಿಲ್ಲಾಕೆಯುಂ ತನ್ನಿವೆಂದು ಯುಧಿಷ್ಠಿರಂ ಕೊಟ್ಟ ನನ್ನಿಯ ಬಲದೊಳ್ ತನಗೆ ಲಯಮಿಲ್ಲಮುದನಱಿ[2]ಮು ಮೇಗಿಲ್ಲದ ಗೊ[2]ಡ್ಡಾಟಮಾಡಲ್ ಬಗೆದು ಕರ್ಣನ ಲೆಂಕಂ ಪ್ರಾತಿಕಾಮಿಯೆಂಬನುಮಂ ತನ್ನ ತಮ್ಮಂ ದುಶ್ಶಾಸನನುಮಂ ಪೇೞ್ದೊಡವಂದಿರಾಗಳೆ ಬೀಡಿಂಗೆ ವಂದು ರಜಸ್ವಲೆಯಾಗಿರ್ದೆಂ ಮುಟ್ಟಲಾಗದೆನೆಯುಮೊತ್ತಂಬದಿಂದೊಳಗಂ ಪೊಕ್ಕು ಪಾಂಚಾಳಿಯುಮಂ ಕಣ್ಗಿಡೆ ಜಡಿದು ಮುಡಿಯಂ ಪಿಡಿದು ತನ್ಮಧ್ಯದಿಂ ಸುಯೋಧನನ ಸಭಾಮಧ್ಯಕ್ಕೆ ತಂದು—

ಮ|| ಮನದೊಳ್ ನೊಂದಮರಾಪಗಾಸುತ ಕೃಪ ದ್ರೋಣಾದಿಗಳ್ ಜೀಡವೇ |
ಡೆನೆಯುಂ ಮಾಣದೆ ತೊೞ್ತಿ ತೊೞ್ತುಪಸ[3]ಕೆಯ್ ಪೋ ಪೋಗು ನೀನೆಂದು ಬ ||
ಯ್ದನಿತಾನುಂ ತೆಱದಿಂ[4]ಮುಟ್ಟುಮವರಂ ಕೆಯ್ಗಂದು ದುಶ್ಶಾಸನಂ |
ತನಗಂ ಮೆಲ್ಲನೆ ಮೃತ್ಯು ಸಾರೆ ತೆಗೆದಂ ಧಮ್ಮಿಲ್ಲಮುಂ ಕೃಷ್ಣೆಯಾ || ೫ ||

ವ|| ಅಂತು ಕೃಷ್ಣೆಯ ಕೃಷ್ಣ ಕಬರೀ ಭಾರಮುಂ ಮೇಗಿಲ್ಲದೆ ಪಿಡಿದು ತೆಗೆದು ಕೃಷ್ಣೋರಗನಂ ಪಿಡಿದ ಬೆಳ್ಳಾಳಂತುಮ್ಮನೆ ಬೆಮರುತ್ತುಮಿರ್ದ ದುಶ್ಶಾಸನನುಮಂ ಕ[5]ಣ್ಕೆತ್ತಿ ಕಿಱು ನಗೆ ನಗುವ [6]ಕೂರದರ ಮೊಗಮುಮಂ ತಮ್ಮಣ್ಣನ ಬಿನ್ನನಾದ ಮೊಗಮುಮಂ ಕಂಡ ಕಣ್ಗಳಿಂ ನೆತ್ತರ್ ತುಳುಂಕೆ—

ಉ|| ಕೋಪದ ಪೆರ್ಚಿನೊಳ್ ನಡುಗುವೂರುಯುಗಂ ಕಡುಪಿಂದರಲ್ವ ನಾ |
ಸಾ ಪುಟಮೆಕ್ಕೆಯಿಂ ಪೊಡರ್ವ ಪುರ್ವು ಪೊದಳ್ದ ಲಯಾಂತಕ ತ್ರಿಶೂ ||
ಲೋಪಮ ಭೀಷಣ ಭ್ರುಕುಟಿ ಮುನ್ನಮೆ ರೌದ್ರ ಗದಾಯುಧಂಬರಂ |
ಪೋಪ ಭುಜಾರ್ಗಳಂ ರಿಪುಗಳ ಗ್ರಹಮಾದುದು ಭೀಮಸೇನನಾ || ೬ ||

---

1. ಗಿ (ಸ.) ; 2. ಟ್ಟಾ (ಕ. ಖ. ಗ.) ; 3. ಗೆ (ಕ. ಖ. ಗ.) ; 4. ದೆ ಮುಟ್ಟುವುದುಮುಂ (ಘ.) ; 5. ಣ್ಗೆ (ಕ.) ; ಣ್ಣೆ (ಖ.) 6. ಕುರುವರನ (ಕ.).

ಮ॥ ನೆಲನಂ ನುಂಗುವ ಮೇರುವಂ ಪಿಡಿದು ಕೀೞ್ವಾಶಾಗಜೇಂದ್ರಂಗಳಂ
ಚಲದಿಂ ಕಟ್ಟುವ ಸಪ್ತ ಸಪ್ತಿಯನಿಳಾಭಾಗಕ್ಕೆ ತರ್ಪೊಂದು ತೋ ॥
ಳ್ವಲಮುಂ ಗರ್ವಮುಮುಣ್ಮೆ ಪೊಣ್ಮೆ ಮನದೊಳ್ ಕೋಪಾಗ್ನಿ ಕೆಯ್ಗಣ್ಮೆ ಕ
ಣ್ಮಲರೊಳ್ ಬಂದಿರೆ [1]ನೋಡಿದಂ ಕಲುಷದಿಂ ಗಾಂಡೀವಿ ಗಾಂಡೀವಮಂ ॥ ೭ ॥

ಕಂ॥ ಪ್ರಕುಪಿತ ಮೃಗಪತಿ ಶಿಶು ಸ ।
ನ್ನಿಕಾಶರತಿ ವಿಕಟ ಭೀಷಣ ಭ್ರೂ ಭಂಗರ್ ॥
ನಕುಲ ಸಹದೇವರಿರ್ವರು ।
ಮಕಾಲ ಕಾಲಾಗ್ನಿ ರೂಪಮಂ ಕೆಯ್ಕೊಂಡರ್ ॥ ೮ ॥

ವ॥ ಅಂತು ವಿಳಯ ಕಾಲ ಜಳನಿಧಿಗಳಂತೆ ಮೇರೆದಪ್ಪಲ್ ಬಗೆದ ತನ್ನ ನಾಲ್ವರ್ ತಮ್ಮಂದಿರ ಮುನಿದ ಮೊಗಮಂ ಕಂಡು ತನ್ನ ನುಡಿದ ನನ್ನಿಯ ಕೇಡಂ ಬಗೆದರೆಂದು ಕಟಾಕ್ಷ ವಿಕ್ಷೇಪದಿಂ ಬಾರಿಸೆ—

ಮ॥ ಅನಿತೊಂದುರ್ಕಿನೊಳುರ್ಕಿ ಕೌರವ ಖಳರ್ ಪಾಂಚಾಳರಾಜಾತ್ಮಜಾ
ನನ ಪದ್ಮ ಗ್ಲಪನೈಕ ಕಾರಣಪರರ್ ತಾಮಾಗೆಯುಂ ಮತ್ತಮ ॥
ಣ್ಣನ ಕಣ್ಸನ್ನೆಗೆ ಮಾಜ[2]ಲ[ಣ್ಮ]ದೆ ಸಮಂತಿರ್ದರ್ ಪೃಥಾಪುತ್ರರಂ ।
ತಿನಿತೊಂದಾದೊಡಮೇಂ ಮಹಾಪುರುಷರಾಜ್ಞಾ ಲಂಘನಂಗೆಯ್ವರೇ ॥ ೯ ॥

ವ॥ ಆಗಳ್ ದ್ರೌಪದಿ ತನ್ನ ಕೇಶಪಾಶಮಂ ದುಶ್ಯಾಸನಂ ಪಿಡಿದು ತೆಗೆದ ನೆಂಬ ಸಿಗ್ಗಗ್ಗಳಂ ಪೆರ್ಚೆ ಸಭೆಯೊಳಿಂತೆಂದಳ್—

ಕಂ॥ ಮುಡಿಯಂ ಪಿಡಿದೆೞೆದವನಂ ।
ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ॥
ಮುಡಿಯಿಸು[3]ವಿನೆಗಂ [4]ಮುಡಿಯಂ ।
[5]ಮುಡಿಯೆಂ ಗಡ ಕೇಳಿಮಾಗಳಾನ್ [ನುಡಿ] ನುಡಿದೆಂ ॥ ೧೦ ॥

ವ॥ ಎಂಬುದುಂ ಭೀಮಸೇನನಾ ಮಾತಂ ಕೇಳ್ದು ಸೈರಿಸಲಾಱದೆ—

---

1. ಪೂ (ಕ.), ಮಾ (ಖ. ಗ.); 2. ಲಂಜಿಯೆ (ಕ.), ಲಂಜಿಯ (ಖ), ಲಂಜಿದೆ (ಗ.), ಲಮ್ಮದೆ (ಘ.); 3. ಗಾಂ (ಖ. ಗ. ಘ.); 4. ಮುಡಿಯೆಂ (ಖ.), ಮಡಿಯೆಂ (ಗ.), ಮುಡಿಯಂ ದಲ್ (ಘ.); 5. ಗಡಿಮೆಂದುವದೆನ್ನಮಾಗಳಳ್ಮೆಲ್ನುಡಿದೆಂ (ಕ.). ಗಡಿಮೆಂದುವರೆಂನಮಾಗಳಳ್ಮೆಲ್ನುಡಿದೆಂ (ಖ.), ಗಡಿ....ನುಡಿದೆಂ (ಗ.), ಮುಡಿಯೆಂಗಳ ಮಾಗಳಂತೆಮೆಂನ್ನಯ ಮುಡಿಯಂ (ಘ.).

ಉ॥ ಆಜಿವ ಕೋಪ ಪಾವಕನಿನಣ್ಣನ ನನ್ನಿಯನಿಲ್ಲಿ ಮಾಱುವೆಂ ।
ವಿರಾಜಿಸೆನೆನುತ್ತುಮಿರ್ಪ ಪದದಲ್ಲಿಯೆ ನೋಡ ಮರುಳ್ಗೆ ಧೂಪಮಂ ॥
ತೋಱುದ ಮಾಟಕ್ಕಿಯಿಂ ದ್ರುಪದರಾಜಸುತಾ ವಚನಂಗಳಲ್ಲಿ ಮೆ ।
ಯ್ದೋಱಿಸಿ ಮರುತ್ಸುತಂ ನುಡಿದನಾ ಸಭೆಯೊಳ್ ನವ ಮೇಘನಾದದಿಂ
॥ ೧೧ ॥

ಮ॥ ಮುಳಿಸಿಂದಂ ನುಡಿವೊಂದು ನಿನ್ನ ನುಡಿ [1][ಸ]ಲ್ಗಾರಾಗದೆಂಬರ್ ಮಹಾ ।
ಪ್ರಳಯೋಲ್ಕೋಪಮ ಮದ್ಗದಾ ಹತಿಯಿನತ್ಯುಗ್ರಾಜಿಯೊಳ್ ಮುನ್ನ ಮಿ॥
ಖಳ ದುಶ್ಯಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರು ।
ಳ್ಗಳಿನಾನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ ॥ ೧೨ ॥

ಮ॥ ಸ್ರ॥ ಕುಡಿವೆಂ ದುಶ್ಯಾಸನೋರಸ್ಥಳಮನಗಲೆ ಪೋೞ್ದಾರ್ದು ಕೆನ್ನೆತ್ತರಂಪೊ।
ಕ್ಕುಡಿವೆಂ ಪಿಂಗಾಕ್ಷನೂರು ದ್ವಯಮನುರು ಗದಾ ಘಾತದಿಂ
ನುಚ್ಚು ನೂಱಾ ॥
ಗೊಡೆವೆಂ ತದ್ರತ್ನ ರಶ್ಮಿ ಪ್ರಕಟ ಮಕುಟಮಂ ನಂಬು ನಂಬೆನ್ನ ಕಣ್ಣಿಂ ।
ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜಪತ್ರೇ
॥ ೧೩ ॥

ಮ॥ ಮುಳಿಸಂ ಮಾಡಿಯುಮೇನಮಂ ಪಡೆದುಮಿನ್ನೀ ಪಂದೆಗಳ್ ಪ್ರಾಣದಿಂ ।
ದೊ[2]ಳ[ರಿ]ನ್ನುಂ ತಲೆ ನುತ್ತಮಟ್ಟೆಗಳ ಮೇಲಿರ್ದಪ್ಪುವೆಂದಂದೆ ದಲ್ ॥
ಮುಳಿಸಿಲ್ಲಣ್ಣನ ನನ್ನಿಯೆಂಬುದನೆ ಪೇೞೀವೇೞ್ದುಮಿ ಕೌರವ ।
ರ್ಕಳನುಂತಿನ್ನೆಗಮುರ್ಚಿ ಮುಕ್ಕದೆ ಸಡಿಲ್ದೀ ಭೀಮನೇಂ ಮಾಣ್ಗುಮೇ
॥ ೧೪ ॥

ವ॥ ಎಂದು ಪಾಂಚಾಳರಾಜತನೂಜೆಯ ಮನಮನಾಱೆ ನುಡಿದು ಮತ್ತ ಮಿಂತೆಂದಂ—

ಮ॥ ಸುರಸಿಂಧು ಪ್ರಿಯ ಪುತ್ರ ಕೇಳ್ ಕಳಶಜಾ ನೀಂ ಕೇಳ್ ಕೃಪಾ ಕೇಳ ಮಂ ।
ದರದಿಂದಂಬುಧಿಯಂ ಕಲಂಕಿದಸುರ ಪ್ರಧ್ವಂಸಿವೋಲ್ ಬಾಹು ಮಂ ॥
ದರದಿಂ ವೈರಿ ಬಲಾಬ್ಧಿ ಘೂರ್ಣಿಸೆ ಬಿಗುರ್ತೀ ಕೌರವರ್ ಕೂಡೆ ನೂ ।
ರ್ವರುಮಂ ಕೊಲ್ವೆನಿದೆನ್ನ ಪೂಣ್ಕೆ ನುಡಿದೆಂ ನಿಮ್ಮಾ ಸಭಾಮಧ್ಯದೊಳ್
॥ ೧೫ ॥

1. ಸಾ (ಕ. ಖ. ಗ), ಗಳ್ಗಾ (ಘ.); 2. ಳಗಿ (ಕ. ಖ.), ಡಲಿ (ಗ. ಘ.).

ವ॥ ಎಂದು ಪ್ರಳಯ ಕಾಳ ಜಳಧರ ನಿನಾದದಿಂ [1]ಗಿರಿ ತಾಟಿಸಿದಂತಾನುಂ ನೆಲಂ ಮೊೞಗಿದಂತಾನುಂ ಗಜಱಿ ಗರ್ಜಿಸಿ ನುಡಿದು ಮಹಾಪ್ರತಿಜ್ಞಾರೂಢನಾದ ಭೀಮಸೇನನ ನುಡಿಯಂ ಕೇಳ್ದು ಕೌರವರ್ ಕಡಲ ನಡುವಣ ಪರ್ವತದಂತಳ್ಳಾಡೆ ಕುರುವೃದ್ಧನುಂ ಬುದ್ಧಿವೃದ್ಧನುಮಪ್ಪ ಗಾಂಗೇಯಂ ಧೃತರಾಷ್ಟ್ರಂಗಿಂತೆಂದಂ—

ಚಂ॥ ಭರತ ಯಯಾತಿ ಕುತ್ಸ ಪುರುಕುತ್ಸ ಪುರೂರವರಿಂದಮಿನ್ನೆಗಂ ।
ಪರಿವಿಡಿಯಿಂದೆ ಬಂದ ಶಶಿವಂಶಮಿದೀಗಳಿವಂದಿರಿಂದೆ ನಿ ॥
ಸ್ತರಿಸುವುದಕ್ಕುಮೆಂದೆ ಬಗೆವಿರ್ದೊಡೆ ಕೀಲೊಳೆ ಕಿಚ್ಚು ಪುಟ್ಟಿ ಭೋ ।
ರ್ಗರೆದುರಿವಂತೆ ನಿನ್ನ ಮಗನಿಂದುರಿದತ್ತಿದನಾರೊ ಬಾರಿಪರ್ ॥ ೧೬ ॥

ವ॥ ಎಂದಱಿಲ್ದು ಧೃತರಾಷ್ಟ್ರನೊಳ್ ನುಡಿಯೆ ಕುಂಭಸಂಭವಾಶ್ವತ್ಥಾಮ ಕೃಪ ವಿದುರಾದಿಗಳ್ ನೀಮೆನಿತು ನುಡಿದೊಡಮಾನೆಯ ಕೋಡು ಬಾಗದೆಂಬಂತೆ ದುರ್ಯೋಧನನುದ್ವೃತ್ತತೆಯುಮಂ ಭೀಮಸೇನನ ಮಹಾಪ್ರತಿಜ್ಞೆಯುಮನಾರ್ಗಂ ಬಾರಿಸಲ್ಬಾರದು ಕೆಯ್ಗಟ್ಟಿದ ಮನೆವಾೞ್ತೆಗೆ ಬುದ್ಧಿವೇೞಲೆಡೆಯಿಲ್ಲ ತಾಮುಂ ತಾಮುಮುಱಿವರ್ ಬನ್ನಿಮೆಂದು ನಿಜ ನಿವಾಸಂಗಳ್ಗೆ ಪೋದರಾಗಳ್ ಭೀಮಸೇನಂ ಧರ್ಮಪುತ್ರಂಗೆಂದನುಪ್ಪಿಕ್ಕಿದೊಡೆ ತುಪ್ಪದ ಮೆಳ್ಪಡಿತೆಂಬಂತೆ ನಮ್ಮ ಕೆಮ್ಮನಿರ್ಪಿರವಿದೇ ಕಾರಣಂ ಬನ್ನಿಂ ಪೋಪಮೆಂದರಮನೆಯುಂ ಪೊಱಮಟ್ಟು ಬರೆ ಧೃತರಾಷ್ಟ್ರಂ ದುರ್ಯೋಧನನನೇಗೆಯ್ದುಂ ನೊಡಂಬಡಿಸಲಾಱದಿರೆಯುಂ ದ್ರೌಪದಿ ಪರಸ್ತ್ರೀಯುಂ ನಮ್ಮ ಮನೆಯೊಳಿರಿಸುವುದುಚಿತಮಲ್ಲೆಂದು ಕಳಿಪಿದೊಡೆ ಪಾಂಚಾಳ ರಾಜತನೂಜೆವೆರಸು ಬಿನ್ನ ಬಿನ್ನನೆ ಪೊೞಲಂ ಪೊಱಮಡೆ ಪುರಜನಂಗಳೆಲ್ಲಂ ನೆರೆದವರ ಪೋಗಿಂಗೆ ಸೈರಿಸಲಾಱದೆ ತಮ್ಮೊಳಿಂತೆಂದರ್—

ಕಂ॥ ಏಮೊರೆಯುಂ ಯಮನಂದನ ॥
ನೇದೊರೆಯುಂ ಭೀಮಸೇನನೇದೊರೆಯುಂ ಕಂ ॥
ಜೋದರನ ಮೈದುನಂ ತಾ ॥
ಮೇಮೊರೆಯುರಮುಳ್ಗಳವರ್ಗಮಿಾ ಯಿರವಾಯ್ತೇ ॥ ೧೭ ॥

ಜೂದಾಡಿ ಸೋಲ್ತು ನನ್ನಿಗೆ ।
ಮೇದಿನಿಯುಂ ಕೊಟ್ಟು ಪಾಂಡು ನಂದನರೀಗಳ್ ॥
ಪೋದೊಡಮೇನ್ ತಿಱುಕಾಗದೆ ॥
ಪೋದಪುದೇ ನಮ್ಮ ನೃಪತಿಗಮ ತವುದಲೆಯೊಳ್ ॥ ೧೮ ॥

[1] ಭೇರಿಯಂ (ಘ.).

ಕಂ॥ ಜೂದಿನ ಗೆಲ್ಲದೊಳಾದೀ ।
ಮೇದಿನಿಯುಂ ಕಂಡು ಕಜ್ಜಮಂ ಕಾಣದೆ ದು ॥
ರ್ಯೋಧನನದೇನದೇಂ ಮರು ।
ಳಾದನೊ ಬಡಿಗಂ[1]ಡನಿಲ್ಲ ಪಾಲನೆ ಕಂಡಂ ॥ ೧೯ ॥

ಎನಿತಾನುಮುಂದದಿಂ ಜೂ ।
ದನಿಕ್ಕೆಯುಂ ದ್ರುಪದ ಸುತೆಯನೆೞೆದುಯ್ಯೆಯುಮಿಂ ॥
[2]ತಿನಿತೊಂದಾದುದು ದುಶ್ಶಾ ।
ಸನನಿಂದಂ ಶಕುನಿಯೆಂಬ ಬೆ[3]ಳ್ವೊಱಸಿಂದಂ ॥ ೨೦ ॥

ವ॥ ಎಂದಿರ್ದರಿರ್ದಲ್ಲಿಯೆ ತಂತಮ್ಮ ಕಂಡುದನೆ ನುಡಿಯೆಯುಂ ಕೆಲರವರ ಪೋಗಿಂಗಟಲ್ದು ಕಣ್ಣ ನೀರನಿಕ್ಕೆಯುಂ ಕೆಲರ್ ಪರಸಿ ಸೇಸೆಯನಿಕ್ಕೆಯುಂ ಪೊೞಲಂ ಪೊಱಮಟ್ಟು ಪುರದ ಬಾಹಿಗೆಯನೆಯ್ದುವಾಗಳ್ ಗಾಂಗೇಯ ದ್ರೋಣ ಕೃಪ ವಿದುರಾದಿಗಳ್ ಕೊಂತಿವೆರಸೆಯ್ದೆ ವಂದು ಕಿಱಿದಂತರಮಂ ಕಳಿಪುತ್ತುಂ ಬರೆ ಧರ್ಮಪುತ್ರನೆಮಗೆ ತಕ್ಕ ಬುದ್ಧಿಯಂ ಪೇೞ್ದು ಮಗುೞಿಮೆಂದೊಡನಿಬರುಂ ಮನಂ [4]ಬಂಧಿಸಿದ ಮೋಹದಿಂ ಗೞಗೞನೆ ಕಣ್ಣ ನೀರ್ಗಳಂ ಸುರಿದು—

ಚಂ॥ ಪುಗುವುವರಣ್ಯಮಿರ್ಪಿರವು ಪನ್ನೆರಡಬ್ದಮು[5]ದಲ್ಲದಲ್ಲಿ [6]ಕೋ ।
ೞ್ಮೃಗದ ವನೇಚರಾಧಿಪರ ದಾಯಿಗರತ್ತಣಿನಪ್ಪಪಾಯ ಕೋ ॥
ಟಿಗೆ ಪವಣಿಲ್ಲ ಕಲ್ಪಿಗೆಡೆಯಾವುದೊ ಪಾೞಿಯ ಬಟ್ಟೆದಪ್ಪಿ ಮುಂ ।
ನೆಗೞ್ದಿಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ ॥ ೨೧ ॥

ವ॥ ಎಂಬೊಡಲ್ಲಿರ್ದು ನಿಮ್ಮ ಮನಕ್ಕೆ ಕೊಕ್ಕರಿಕ್ಕೆಯಾಗಿಯುಂ ಪಾೞಿಗೆ ಗೆಂಟಾಗಿಯುಂ ನೆಗೞ್ವಮಲ್ಲೆಂದು ಪೊಡಮಟ್ಟು ಕೊಂತಿಯಂ ವಿದುರನ ಮನೆಯೊಳಿರಲ್ವೇೞ್ದು ಸುಭದ್ರೆಯುನಭಿಮನ್ಯುವೆರಸು ನಾರಾಯಣನಲ್ಲಿಗೆ ದ್ವಾರಾವತಿಗೆ ಕಳಿಪಿ ನಿಜ ಪರಿಜನಂಬೆರಸು ಗಂಗೆಯಂ ಪಾಯ್ದುದಱ ಪಡುವಣ ದೆಸೆಯ ಕಾಮ್ಯಕ ವನದ ಬಟ್ಟೆಯಂ ತಗುಳ್ದು ಪೋಗೆ ಪೋಗೆ—

ಚಂ॥ ದೆಸೆ ಪಸುರೇಱ ಪಚ್ಚೆಯೊಳೆ ಮುಚ್ಚಿ ಮುಸುಂಕಿದ ಮಾೞ್ಕೆಯಾದುದಾ ।
ಗಸಮುಳಿ ನೀಳ ನೀಳ ಗಳಕಂಠ ತಮಾಳ ವಿನೀಳ ನೀರದ ॥

1. ಡುದಿಲ್ಲ (ಕ.), ಡದಿಲ್ಲ (ಖ.); 2. ನಿ (ಕ. ಖ. ಗ.); 3. ಳ್ಪರ (ಕ.); 4. ಬೋದಿ (ಗ); 5. ರಣ್ಯ (ಕ. ಖ.); 6. ಕಾ (ಘ.).

ಪ್ರಸರ ವಿಭಾಸಿಯಾದುದು ಸವಿಾರನುದಾರ ಕದಂಬ ಕೇತಕೀ ।
ಪ್ರಸರ ರಜಸ್ಸರ ಪ್ರಕಟ [1]ಪಾಂಸುಳವಾದುದು ಮೇಘಕಾಲದೊಳ್
॥ ೨೨ ॥

ಚಂ॥ ಕರಿಯ ಮುಗಿಲ್ಗಳಿಂ ಗಗನ ಮಂಡಳವೊಪ್ಪಿರೆ ಸೋಗೆಯಿಂ ವನಾಂ ।
ತರವೆ ಸೆದೊಪ್ಪೆ ತೋರ್ಪ ನೊಳೆವುಲ್ಗಳಿನೀ ಧರಣೀ ವಿಭಾಗವೊ ॥
ಪ್ಪಿರೆ ಕ್ರೊಸ ವೇಟಕಾಜಿರಿರ್ದಗಳ್ ಪೊ[2]ಸ ಕಾರ ಪೊಡರ್ಪುಗಂಡ[3][ಪೇ]ಂ ।
ಕಱತುವವೇಂ ಕಲಂಕಿದುವವೇಂ ಕುಱಿಗೊಂಡುವದೇಂ ಕನ[4]ಲ್ದುವೋ
॥ ೨೩ ॥

ವ॥ ಆದಲ್ಲದೆಯುಂ—

ಮ॥ ಭವ ಲಾಲಾಟವಿಲೋಚನಾಗ್ನಿ ಶಿಖೆಯಿಂ ಬೆಂದಳ್ಕಿ ಮತ್ತಂ ಮನೋ ।
ಭವನೆಟ್ಟಿತ್ತೊಡೆ ಕಾಮ ಕಾಂತೆ ಬೞಿಯಂ ತನ್ನಿಚ್ಚೆಯಿಂ ಮೆಚ್ಚಿ ಬ ॥
ಣ್ಣವುರಂ ತೀವಿದ ಮಾೞ್ಕೆಯಾಯ್ತು ನವಿಲಿಂ [5]ಕುಂದಂಗಳಿಂದಿಂದ್ರಗೋ ।
ಪ ವಿಳಾಸಂಗಳಿನಾಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ ॥ ೨೪ ॥

ಚಂ॥ ಪೊಳೆವಮರೇಂದ್ರಗೋಪದ ಪಸುರ್ತೆಳವುಲ್ಗಳ ತಳ್ತ ಕಾರ್ಮುಗಿ ।
ಲ್ಗಳ ಕಿಱುಗೊಂಕು ಗೊಂಕಿದ ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆ ॥
ಳ್ಪೊಳಕೊಳೆ ಶಕ್ರ ಕಾರ್ಮುಕ ವಿಳಾಸಮನೇನೆರ್ದೆಗೊಂಡು ಬೇಟದ ।
ತ್ತಳಗಮನುಂಟುಮಾಡಿದುದೊ ಕಾಮನ ಕಾರ್ಮುಕದಂತೆ ಕಾರ್ಮುಕಂ
॥ ೨೫ ॥

ವ॥ ಅಂತು ತವಗಿದಿರಂ ಬರ್ಪಂತೆ ಬಂದ ಪಯೋಧರ ಕಾಲದೊಳೆರಡು ತಡಿಯುಮಂ ಪೊಯ್ದು ಪರಿವ ತೊಱೆ[3]ಗಳುಮಂ ತೊವಲ್ತು ಸೊಗಯಿಸುವಡವಿಗಳುಮಂ ಪಸಿಯ [6]ನೇತ್ರಮುಂ ಪಚ್ಚವಡಿಸಿದಂತೆ ಪಸುರ್ಪುವಡೆದ ನೆಲದೊಳ್ [7]ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ [8]ಉಪಾಶ್ರಯಂಬಡೆದಳಂಕರಿಸುವಿಂದ್ರಗೋಪಂಗಳುಮಂ ಕಿಸುಗಾಡ ನೆಲಂಗಳೆಳದಳಿರ ಬಣ್ಣಮುಂ ಕೆಯ್ಕೊಂಡು ವಿರಹಿಗಳ ಮನಮನೊನಲಿಸುವಂತೆ ಜಲ ಜಲನೆ ಪರಿವ [9][ಜ]ರಿವೊನಲ್ಗಳುಮಂ ಕಂಡು ತಮ್ಮ ಕಣ್ಗಂ ಮನಕಂ ಸೊಗಯಿಸೆ ಪಯಣಂ ಬಂದು ಕಾಮ್ಯಕ ವನಮಂ ಪುಗುತಂದರದೆಂತೆಂದೊಡೆ—

---

1. ಪಾತುಳ (ಖ.), ಪಾಂಮುಳ (ಗ. ಘ.) ; 2. ರಗಾಱಿ (ಕ.), ಜಿಗಾಜಿ (ಖ.), ಸಗಾರ (ಗ.) ; 3. ಪೇ (ಸ.) ; 4. ಲ್ದವೋಲ್ (ಕ. ಖ.) ; 5. ಕಾ (ಕ. ಖ. ಗ.) ; 6. ಪೇ (ಘ§.) ; 7. ಪಚ್ಚೆಯು ಪದ್ಮ (ಕ. ಖ.), ಪಚ್ಚೆಯ ಸಿರೆ ಪದ್ಮ (ಗ.), ಪಚ್ಚೆಯ ಸಲೆ ಪದ್ಮ (ಘ.) ; 8. ಪಸುರ್ಪಿಸೆಪ ನೆಲವೊಳುಪಾ (ಕ. ಖ. ಘ.), ಪಸುರ್ಪಿನ ನೆಲದೊಳುಪಾ (ಗ.) ; 9. ಬಱಿ (ಕ.), ಬಱಿ (ಖ.), ಬರಿ (ಗ. ಘ.),

ಮ|| ದೆಸೆಗೆತ್ತಂ ಗಜಱುತ್ತುಮಿರ್ಪ ಪುಲಿಯಿಂ ನೀಳಾಭ್ರಮಂ ದಂತಿಗೆ|
ತ್ತು ಸಿಡಿಲ್ದಾಗಸಕೆಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆತ್ತಗು||
ರ್ವಿಸಿ ಪಾಯ್ವುರ್ವಿಗಳಿಂ ಮದಾಂಧ [1]ವ[ನ] ಗಂಧೇಭಂಗಳಿಂ ಕಣ್ಗಗು|
ರ್ವಿಸೆಯುಂ ಚಿತ್ತದೊಳಂದು ಕಾಮ್ಯಕ ವನಂ ಮಾಡಿತ್ತತಿ ಪ್ರೀತಿಯಂ
|| ೨೬ ||

ವ|| ಅಂತು ಸೌಮ್ಯಭಯಂಕರಾಕಾರಮಪ್ಪ ಕಾಮ್ಯಕ ವನಮಂ ಪುಗುತಂ ದಲ್ಲಿ ತದ್ವನಾಧಿಪತಿಯಪ್ಪ ದೈತ್ಯಂ ಕಿಮ್ಮೀರನವರಂ ಪುಗಲೀಯದಡ್ಡಮಾಗಿರೆ—

ಮ|| ಮುಸಿಯಂ ಪುಂಜಿಸಿದಂತುಟಪ್ಪ ತನು ನೀಳಾಂಭೋಧರಂ ದಾಡೆಗಳ್|
ಪೊಸ ಮಿಂಚುಗ್ರ ವಿಲೋಚನಂ ದಿವಿಜ ಗೋಪಂ ಕಾರೊ ಮೇಣ್
ಕಾಳ ರ||
ಕ್ಕಸನೋ ಪೇೞೆನೆ ಬಂದು ತಾಗೆ ಗದೆಯಂ ಕೊಂಡೆಯ್ದೆ ಭೀಮಂ ಸಿಡಿ|
ಲ್ದು ಸಿಡಿಲ್ ಪೊಯ್ದವೊಲಾಗೆ ಪೊಯ್ದನಿಳೆಯೊಳ್ ಕಿಮ್ಮೀರನಂ ವೀರನಂ
|| ೨೭ ||

ವ|| ಅಂತು ಕಿಮ್ಮೀರನಂ ಕೊಂದು ಕಾಮ್ಯಕ ವನಮಂ ಪೊಕ್ಕು ತದ್ವನ ತಪೋಧನರ ಗೋಷ್ಠಿಯೊಳಮಾಟವಿಕರಟ್ಟಟ್ಟಿಯೊಳಂ ತಮಗಿಂದ್ರಪ್ರಸ್ಥದ ರಾಜ್ಯ ಶ್ರೀಯಂ ಮಸುಳಿಸೆ—

ಪಿರಿಯಕ್ಕರ|| ಪಿರಿಯ ಮರಂಗಳೆ ಮಾಡಮಾಗೆ ಪೊಳೆವೆಳದಳಿರ್ಗಳೆ ಸೆಜ್ಜೆಯಾಗೆ|
ಪಿರಿಯ ಮಡುಗಳೆ ಮಜ್ಜನಮಾಗೆ ಪೊಸ ನಾರೆ ದೇವಾಂಗ ವಸ್ತ್ರಮಾಗೆ||
ಪ[2]ರೆದ ತಱಿಗೆಲೆಯೆ ಪರಿಯಣಮಾಗೆ ಪಣ್ಪಲಮೆತ್ತಿದ ಜೋನಮಾಗೆ|
ಸಿರಿಯ ಮಹಿಮೆಯಂ ಮೆಱೆಯಲೇನಾರ್ತುದೊ ಬನದೊಳಿರ್ಪಿರವಾ
ಪಾಂಡವರಾ || ೨೮ ||

ಉ|| ಪಾಸಱೆ ಸಿಂಹಪೀಠಮಳಿನೀ ರುತಿ ಮಂಗಳ ಗೀತಿ ಭೂತಳಂ|
ಪಾಸು ಮೃಗಪ್ರಜಂ ಪರಿಜನಂ ಪೊದಱೋಲಗಸಾಲೆ ಮೊಕ್ಕಳಂ ||
ಬೀಸುವ ಗಾಳಿ ಚಾಮರದ ಗಾಳಿಯೆನಲ್ ಜೊರೆವೆತ್ತದೇಂ ಸುಖಾ|
ವಾಸ ನಿಮಿತ್ತವಾಯ್ತೊ ವನವಾಸ [3]ನಿವಾಸಮೆ ಪಾಂಡುಪುತ್ರರಾ || ೨೯ ||

ವ|| ಅಂತು ಕಾಮ್ಯಕ ವನದೊಳಯ್ದು ವರುಷಮಿರ್ದಾಱನೆಯ ವರುಷದೊ ಳದಱ ಕೆಲದೊಳೊಂದಿ ಸಂದಿಸಿ ಗಗನ ತಳಮಂ ತಱುಂಬುವಂತಿರ್ದ ಶಿಖರಿಶಿಖರಂ

1. ಗಜ (ಕ. ಖ. ಗ.), ವರ (ಘ.); 2. ರಿ (ಕ. ಗ.); 3. ವಿಳಾ (ಗ. ಘ.).

ಗಳಿಂದಂ ದೆಸೆಗಳಂ ತಡವರಿಸಿ ಕೊಳ್ವಂತೆ ಬಳ್ವಳ ಬಳೆದು ಸೊಗಯಿಸುವ ಪೆರ್ಮರಂಗಳಿಂದಂ ವನಲಕ್ಷ್ಮಿಯ ಗೋಮಂಡಲದಂತಿರ್ದ ಕಡವಿನ ಕಾಡೆರ್ಮೆಯ ಪಿಂಡುಗಳಿಂದಂ ದೆಸೆಗ[1]ಳ್ಗೆ ಬೆರ್ಚಿ [2]ಮೂಂಕಿಱಿವ ವನ ಮಹಿಷಿಗಳಿಂ ಮದಹಸ್ತಿಯಂತೆ ಮರವಾಯ್ವ ಪುಲಿಗಳಿನತಿ ಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು ತದ್ವನೋಪಕಂಠನರ್ತಿಗಳಪ್ಪ ತಾಪಸಾಶ್ರಮಂಗಳೊಳ್ ವಿಶ್ರಮಿಸಲ್ ಬಗೆದು—

ಮ|| ಪುಗಲಿಲ್ಲೀ ಬನಮಾರ್ಗಮಿಂಬು ನೆಲಸಲ್ ನಾಱುಂಟು[3]ಡಲ್ ಮೆಲ್ಲೆ ಕೊಂ|
ಬುಗಳೊಳ್ ಪಣ್ಪಲ[4]ಮುಂಟು [5][ವಿರಾಯೆ] ಕುಡಿಯಲ್ ನೀರುಂಟು ಪದ್ಮಾಕರಾ||
ಳಿಗಳೊಳ್ ತಣ್ಪುಗಳುಂಟು ಹೇಮ ಲತಿಕಾ ಕುಂಜಂಗಳೊಳ್ [6]ನಮ್ಮ ನ|
ನ್ನಿಗೆ ಬನ್ನಂ ಬರಲೀಯದೀ ಬನದೊಳಿ[7]ರ್ದೇಂ ಕಾಲಮುಂ ಪಾ[8]ರಿವೇ || ೩೦ ||

ವ|| ಎಂದು ತಮ್ಮೊಳಯ್ವರುಮೇಕ ಕಾರ್ಯಾಲೋಚನಪರರಾಗಿ ದ್ವೈತವನದೊಳನ್ವೃತ ಸಾಹಸರಿರ್ಪನ್ನೆಗಮೊಂದು ದಿವಸಂ ದುರ್ಯೋಧನನ ಮಯ್ದುನಂ ಸಿಂಧುದೇಶಾಧೀಶ್ವರಂ ಸೈಂಧವನವರಂ ಛಿದ್ರಿಸಲೆಂದು ಮಯ್ಗರೆದು ಬಂದು—

ಮ|| ಮೃಗಯಾ ಕ್ರೀಡೆಗೆ ಪಾಂಡುರಾಜ ತನಯರ್ ಪೋಪನ್ನೆಗಂ ಬಂದು ತೊ|
ಟ್ಟಗೆ ಪಾಂಚಾಳಿಯನೆತ್ತಿ ತನ್ನ ರಥದೊಳ್ ತಂದಿಟ್ಟುಕೊಂಡುಯ್ವ ನ||
ನ್ನೆಗಮಂತಾ ಪಡೆಮಾತುಗೇಳ್ದತಿಬಳರ್ ಭೀಮಾರ್ಜುನರ್ ಕಾಯ್ಪು ಕೆ|
ಯ್ಮಗೆ ಬೆನ್ನಂ ಪಱಿದೆತ್ತ ಪೋಪೆಯೆಲವೋ ಪೋ ಪೋಗಲೆಂದೆಯ್ದಿದರ್ || ೩೧ ||

ವ|| ಅಂತೆಯ್ದಿ ತದ್ಗದಾಘಾತದೊಳಂ ಬಾಣ[9]ಪಾತದೊಳಮಾತನ ರಥಮಂ ಶತ ಚೂರ್ಣಂ ಮಾಡಿ ಜಯದ್ರಥನಂ ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ ಪಾಂಚಾಳಿಯುಮಂ ಲೀಲೆಯಿಂಪೂಡಗೊಂಡು ಬೀಡಿಂಗೆ ವಂದು ಧರ್ಮಪುತ್ರಂಗೆ ತೋಱಿದೊಡೆ—

ಕಂ|| ಲಾಕ್ಷಾಗೃಹಮಂ ಪುಗಿಸಲು|
ಮಕ್ಷಕ್ರೀಡೆಯೊಳೆ ಧರಣಿಯಂ [10]ಕೊಳಲುಂ ಪಿಂ||
ಗಾಕ್ಷಂಗೆ ವೇೞ್ದು ಸೈರಿಸ|
ದಾಕ್ಷೇಪದಿನೆಮ್ಮನಿಲ್ಲಿ ಛಿದ್ರಿಸ ಬಂದೈ || ೩೨ ||

---

1. ೞ (ಖ. ಗ.); 2. ಮುಂ (ಕ. ಖ. ಗ.); 3. ನಲ್ಕೊಂಬುಗೊಂ| (ಕ.), ನಲ್ಕಾಂ... (ಖ.), ದಲ್‌ಕೊಂಬುಗೊಂ| (ಗ.): 4. ಮಂ (ಕ.); 5. ವೃಕ್ಷತತಿಯೊಳ್ (ಕ.), ಮೆಯ್ದೆ ಕುಡಿಯಲ್ (ಘ); 6. ತ (ಕ.); 7. ದಿರ್ದೇ (ಖ. ಘ); 8. ರೆಮೇ (ಕ.), ರದೆ (ಖ.), ರವೆ (ಗ. ಘ.); 9. ಘಾ (ಕ. ಖ.); 10. ಕೊಂಡುಂ (ಖ. ಗ. ಘ.).

ವ॥ ಎಂದು ನಿನ್ನ[ಂ] ಪರಿಭವಕ್ಕೆ ತಂದು ನಿನ್ನ ಯಶಮಂ ಕಿಡಿಸಿದೆವಿನ್ ಕೊಂದೊಡೇವಂದಪುದೆಂದು ದುರ್ಯೋಧನನಲ್ಲಿಗೆ ಪೋಗೆಂದು ಕಟ್ಟಿದ ಕಟ್ಟುಗಳಂ ಬಿಟ್ಟು ಕಳೆದೊಡೆ ಜಯದ್ರಥಂ ಸಿಗ್ಗಾಗಿ ಕೈಲಾಸದೊಳೀಶ್ವರಂಗೆ ತಪಂಗೆಯ್ದು ಮೆಚ್ಚಿಸಿ ಪಾಂಡವರನೊಂದು ದೆವಸದನುವರದೊಳ್ ಗೆಲ್ವೆನಕ್ಕೆಂದು ಬರಂಬಡೆದು ಪೋದನಿತ್ತ ದುರ್ಯೋಧನಂ ಸಮಸ್ತ ಸಾಧನ ಸಹಿತನಾಗಿ ಕಾಡೊಳ್ ಬೀಡರಂತೆ ತೊಟಿಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಮೆನ್ನನವರಿಂ ನೋಡಿಸುವುದುಮಿಾಯೆರಡೆ ಸಂಸಾರ ಫಲಮೆಂದು ನಾಗಪುರದಿಂ ಪೊಱಮಟ್ಟು ದುಶ್ಶಾಸನಾದಿಗಳಪ್ಪ ನೂರ್ವರ್ ತಮ್ಮಂದಿರುಂ ಭಾನುಮತಿಯುಂ ಚಂದ್ರಮತಿಯು ಮೆಂಬ ಬೇಟದರಸಿಯರುಂ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಂ ಗಾಂಗೇಯ ದ್ರೋಣ ಕೃಪ ವಿದುರ ಪ್ರಭೃತಿಗಳುಮಶ್ವತ್ಥಾಮ ಕರ್ಣ ಶಲ್ಯ ಶಕುನಿ ಸೈಂಧವ ಪ್ರಮುಖ ನಾಯಕರುಂ ಬೆರಸು ಬೇಂಟೆಯ ನೆವದಿಂ ಬಂದು ದ್ವೈತ ವನದ ಕೆಲದ ನಂದನ ವನದೊಳ್ ಪಾಂಡವರ್ಗೆ ಸಮಿಾಪಮಾಗೆ ಬೀಡಂ ಬಿಟ್ಟು ಪಾಡಿಸುತ್ತುಂ ಪೊಗೞಿಸುತ್ತುಮಿರ್ದನನ್ನೆಗಂ ಪಗೆಯಿಱಿಯಃಬಂದರ ಮೂಗನರಿ [1]ದರೆಂಬಂತನಿಬರುಂ ಬಾಯುಂ ಬಿಟ್ಟು ನೋಡೆ ನೋಡೆ ಪೂರ್ವಜನ್ಮದ ಪಗೆ ಚಿತ್ರಾಂಗದನೆಂಬ ಗಂಧರ್ವನಱುವತ್ತುಕೋಟಿ ಗಾಂಧರ್ವ ಬಲಂ ಬೆರಸು ಬಂದು ದುರ್ಯೋಧನ ದುಶ್ಶಾಸನರಿರ್ವರುಮಂ ಕೋಡಗಗಟ್ಟುಗಟ್ಟಿ—

ಚಂ॥ ಮಿಡುಕದೆ ಭೀಷ್ಮ ನೋಡುತಿರು ಕುಂಭಜ ಸುರ್ಕರು ಕರ್ಣ ಮಿಕ್ಕು ಮಾ।
ನುರ್ಡಿಯದೆ ಮೂಗುವಟ್ಟಿರು ಗುರು ಪ್ರಿಯನಂದನ ಕೂಗಡಂಗದಿ॥
ರ್ದೊಡೆ ಬರ್ದುಕಾ[2]ವುದಿರ್ ಪೊಡರ್ದೊಡೀಗಡೆ ಕೊಂದಪೆನೆಂದು ಕೂಡೆ ಕ।
ಣ್ಗಿಡೆ ಜಡಿದುಯ್ದನಾ ಖಚರನಿರ್ವರುಮಂ ಪರಮಾಣುಮಾರ್ಗದಿಂ ॥ ೩೩ ॥

ವ॥ ಅಂತುಯ್ವುದುಂ ನೆಗೞ್ತೆಯ ಬೀರರೆಲ್ಲಂ ಬಡವರ ಪಿತರರಂತೆ ಮಿಳ್ಮಿಳ ನೋಡುತ್ತಿರೆ ಮಿಕ್ಕುದುಂಡರಂತೆ ತಲೆಯುಂ ಬಾಗಿ ಬಿಲ್ಗಳಂ ಮುಂದಿಟ್ಟು ಬಿಲ್ಲುಂ ಬೆಱಗುಮಾಗಿರೆ ಸುಯೋಧನನ ಮಹಾದೇವಿ ಭಾನುಮತಿ ಬಾಯಬಿಡು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದುಪಟ್ಟು—

ಕಂ॥ ನೋಂತರ ಪಗೆವರನೆೞ್ತಿಱಿ।
ದಂತಾಯ್ತೆಂದಿರದೆ ಪುರುಷಕಾರದ ಪೆಂಪಂ॥
ಚಿಂತಿಸಿ ತರಿಸಿ ಮಹೀಶನ।
ನೆಂತಪ್ಪೊಡಮೆನಗೆ ಪುರುಷ ಭಿಕ್ಷಮನಿಕ್ಕಿಂ ॥ ೩೪ ॥

1. ಯ ಬಂ (ಕ. ಖ. ಗ.); 2. ವುದಿಪ್ಪೊಡೆದೊ (ಕ.), ಡುವಿಪ್ಪೊರ್ದೊ (ಖ.) .....ಡರ್ದೊ (ಗ.), ದುವಿರ್ಪ್ಪೊಡರ್ದೊ (ಘ.).

ವ|| ಎಂದು ಪುಯ್ಯಲಿಡುವ ಭಾನುಮತಿಯ ಪುಯ್ಯಲಂ ಕೇಳ್ದು ಸುಯೋಧನಂ ಬಂದ ವೃತ್ತಾಂತಮನಱಿದು—

ಮ|| ಪಿರಿದುಂ ಕಾಯ್ಪಿನೊಳೆಯ್ದೆ ಕಾಯ್ವ ಸಮಕ[1]ಟ್ಟಿಂ ದೋಷಮಲ್ತಕ್ಕ ಮ।
ಚ್ಚರಮುಂ ಮೋಘಮೊಡಂಬಡುಂ ಕಲುಷಮುಂ ಮುನ್ನಳ್ಳಿದಂತೆತ್ತಿಯುಂ॥
ಪೊರೆಯುಂ ಪಂತಮುಮಿಲ್ಲದಂತೆ ಮನದೊಳ್ ನಿಷ್ಕಾರಣಂ ಕಾಯ್ವರಂ।
ಪರ ಚಿಂತಾಕರ ಏಹಿ ಎಂಬ ನುಡಿಯಂ ಮುಂ ಕೇಳ್ದನಿಲ್ಲಾಗದೇ ॥೩೫॥

ವ|| ಎಂದು ತನ್ನೊಳೆ ಬಗೆದು ಭಾನುಮತಿಯನಿಂತೆಂದಂ—

ಮ|| ಸುರಿಯಲ್ವೇಡಮುದರ್ಕೆ ಬಾಷ್ಪಜಳಮಂ ನಿನ್ನಣ್ಮನಂ ನಿನ್ನೊ[2]ಳಿಂ।
ದಿರದಾಂ ಕೂಡುವೆವೆಮ್ಮೊಳಾದ ಕಲಹಕ್ಕೆಂತಾದೊಡಂ ಕೇಳ ನೂ॥
ರ್ವರೆ ದಲ್ ಕೌರವರಾಮುಮಯ್ವರೆ ವಲಂ ಮತ್ತೊರ್ವರೊಳ್ ತೊಟ್ಟ ಸಂ।
ಗರ ರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂಱಯ್ವರಾವಲ್ಲವೇ ॥೩೬॥

ವ|| ಎಂದು ಯುಧಿಷ್ಠಿರಂ ಪಾಱಿಯ ಪಸುಗೆಯನಱಿದು ನುಡಿದೊಡಾ ಪೂಣ್ದ ಬೆಸನಂ ಕರಮಾಸೆವಟ್ಟು ತನ್ನ ಕೆಲದೊಳಿರ್ದ ಸಾಹಸಾಭರಣನ ಮೊಗಮಂ ನೋಡಿ—

ಕಂ|| ಪಿಡಿದುಯ್ದುದು ಗಂಧರ್ವರ।
ಪಡೆ ಗಡ ನಿಮ್ಮಣ್ಣನಂ ಸುಯೋಧನನನಿದಂ॥
ಕಡೆಗಣಿಸಲಾಗ [3]ನಮಗೀ।
ಗಡೆ ಬೇಗಂ ಬಿಡಿಸಿ ತರ್ಪುದಾತನ ಸೆಱೆಯಂ ॥೩೭॥

ವ|| ಎಂಬುದುಂ ಮಹಾಪ್ರಸಾದಮಂತೆ ಗೆಯ್ವೆನೆಲ್ಲಿವೊಕ್ಕೊಡಂ ಕೊಂಡು ಬಂದಪೆನೆಂದು ಬಗೆಯದಿದಿರಂ ನೋಡುತ್ತಿರಿಮೆಂದು [4]ತವದೊಣೆಗಳಂ ಬಿಗಿದು ಗಾಂಡೀವಮನೇಱಿಸಿ ನೀವಿ ಜೇವೊಡೆದು ಗಂಧರ್ವರ ಪೋಪ ಬಟ್ಟೆಯಂ ಬೆಸಗೊಂಡು ಹಿಮವಂತ[5]ದಲ್ಲಿ ರಾಕ್ಷಸಿ ಕೊಟ್ಟ ಚಕ್ಷುಸಿಯೆಂಬ ವಿದ್ಯೆಯಿಂ ತನ್ನ ಕಣ್ಣನಭಿಮಂತ್ರಿಸಿಕೊಂಡು ಪಾಱುವ ಗಂಧರ್ವ ಬಲಮಂ ಜಲಕ್ಕನೆ ಕಂಡು—

---

1. ಟ್ಟಿಂ (ಘ.) ; 2. ಳೊಂ (ಕ. ಖ.) ; 3. ದೆ (ಕ.) ; 4. ತವಡೊ (ಕ. ಖ.) ; ತವದಡೊ (ಘ.); 5. ನ (ಕ. ಗ.).

ಕಂ॥ ಕೊಳ್ ಕೊಳ್ಳೆಂದೆಚ್ಚೊಡೆ ವಿಳ।
ಯೋಳ್ಕದ ತೆಱದಿಂದೆ ಮುಸುಱೆ ದಿವ್ಯಾಸ್ತ್ರಚಯಂ॥
ಗಳ್ ಕೊಳೆ ಗಾಂಧರ್ವ ಬಲಂ।
ಗಳ್ ಕೆಡೆದುವು ವಿಟ್ಟಿಗೊಂಡ [1]ಚಿಟ್ಟೆಯ ತೆಱದಿಂ ॥ ೩೮ ॥

ವ॥ ಅಂತಲ್ಲಿ ಪದಿನಾಲ್ವಾಸಿರ್ವರ್ ಗಂಧರ್ವರಂ ಕೊಂದೊಡೆ ಚಿತ್ರಾಂಗದಂ ಬೆರ್ಚಿ ಕೊಳ್ ನಿನ್ನ ನಚ್ಚಿನ ಸೆಱೆ[3]ಯನೆಂದು ಬಿಸುಟ್ಟೊಡೆ ನೋಯಲೀಯದೆ ನೆಲದಾಕಾಶದೆಡೆಯೊಳಂಬುಗಳಂ ತರತರದಿಂದೆಚ್ಚು ಸೋಪಾನಂ ಮಾಡಿ ದುರ್ಯೋಧನ ದುಶ್ಶಾಸನರನಿೞಿಪಿ ಕಟ್ಟುಗಳಂ ಬಿಡದೂಡಗೊಂಡು ಬಂದು ಧರ್ಮಪುತ್ರಂಗೆ ತೋಱಿದೊಡೆ ಸಾಹಸಾಭರಣನ ಸಾಹಸಮುನಳವಲ್ಲದೆ ಪೊಗೞ್ದು ತೊಡೆಯನೇಱಿಸಿಕೊಂಡು [2]ಬಾಯೊಳ್ ತಂಬುಲಂಗೊ[3]ಟ್ಟಂ ಪಾಂಚಾಲ ರಾಜತನೂಜೆ ಪಗೆವರ ಕಟ್ಟುವಟ್ಟರ್ದೇೞಿದಿಕ್ಕೆಗೆ ಸಂತಸಂಬಟ್ಟು ಸೈರಿಸಲಾಱದಿಂತೆಂದಳ್—

ಕಂ॥ ಎಮ್ಮಂ ಪಿಡಿದೆೞೆ[3]ವಂದಿನ।
ನಿಮ್ಮದಟುಗಳೀಗಳೆತ್ತ ಪೋದುವೊ ಪಿಡಿವ॥
ಟ್ಟಮ್ಮ ಬಟಿಲ್ದಿರೆ ಕಂಡಿರೆ।
[4]ನಿಮ್ಮಳವಂ ನಿಮಗವಿಾಗಳೀಯೆಡರಾಯ್ತೇ ॥ ೩೯ ॥

ವ॥ ಎಂದು ಸಾಯೆ ಸರಸಂ ನುಡಿದು ಕಟ್ಟಿದ ಕಟ್ಟುಗಳಂ ತಾನೆ ಬಿಟ್ಟು ಕಳೆದು ಭಾನುಮತಿಗೆ ನಿನ್ನಾಣ್ಮನುಮಂ ನಿನ್ನ ಮಯ್ದುನನುಮಂ ನೀನೊಪ್ಪುಗೊಳ್ಳೆಂಬುದುಂ ದುರ್ಯೋಧನಂ ದಾಡೆಗಳೆದ ಕುಳಿಕನಂತೆಯುಂ ಕೋಡುಡಿದ ಮದಹಸ್ತಿಯಂತೆಯುಂ * ನಖಮುಡಿದ ಸಿಂಹದಂತೆಯುಂ * ಗಳಿತ ಗರ್ವನಾಗಿ ಪಾಂಡವರ ಮೊಗಮಂ ನೋಡಲ್ ನಾಣ್ಚಿ ಮದಗಜಪುರಕ್ಕೆ ಪೋಗಿ ಜೂದಿನೊಳ್ ಗೆಲ್ದ ನೆಲನಂ ನಯಜ್ಞನಾಗಿ ತನ್ನೊಳ್ ಪತ್ತಿಸಿ ದುಶ್ಶಾಸನನಂ ಯುವರಾಜನಂ ಮಾಡಿ ನಿರ್ವ್ಯಾಜಮರಸುಗೆಯ್ಯುತ್ತುಮಿರ್ದನಿತ್ತ ಯುಧಿಷ್ಠಿರನಟ್ಟಿದ ಕಿರಾತ ದೂತಂ ತಾಪಸ ವ್ಯಾಜನಾಗಿ ಪೋಗಿ ಸುಯೋಧನನ ವಾರ್ತೆಯೆಲ್ಲಮುಮನಱಿದು ಬಂದಜಾತಶತ್ರುಗಿಂತೆಂದು ಬಿನ್ನಪಂಗೆಯ್ದಂ—

ಚಂ॥ ಕಿವಿಗಿನಿದುಂ ನೃಪಂಗೆ ಹಿತಮುಂ ನುಡಿಯೆಲ್ಲಿಯುಮಿಲ್ಲ ಕೇಳ ಬಿ।
ನ್ನವಿಸುವೆನೆನ್ನ ಕಂಡುದನೆ ಜೂದಿನೊಳುಕ್ಕೆವದಿಂದೆ ಗೆಲ್ದ ನಿ॥

1. ಬ (ಕ.), ಬೆ (ಖ.); 2. ಬಾಯ್ವಾಯೊಳ್ (ಗ. ಘ.); 3. ಟ್ಟಳ್ (ಖ. ಗ.), ಟ್ಟಾ (ಘ.); 4. ನ (ಕ. ಖ.).
** ಘ. ಪ್ರತಿಯಲ್ಲಿ ಮಾತ್ರವಿದೆ.

ನೃಪನಿ ತಳಂ ಕರಾತಳದವೋಲ್ ತನ[1]ಗಂ ಬೆಸಕೆಯ್ಯೆ ಕೆ[2]ಯ್ಗೆ ಮಾ।
[3][ಡುವ] ನಯಮಾ ಬೃಹಸ್ಪತಿಯುಮಂ ಗೆಲಿಪಂದುದು ಧಾರ್ತರಾಷ್ಟ್ರನಾ
॥ ೪೦ ॥

ಮ॥ ಮೊದಲೊಳ್ [4]ತಿಣ್ಣಮ[ದೊಪ್ಪಿ ತಪ್ಪಿ]ದುದನೀಯೆಂದಟ್ಟೆ[5]ದಂ ದಂಡನ।
[6][ಟ್ಟದೆ] ಸಾಮರ್ಥ್ಯದಿನಟ್ಟೆದೋಲೆಗೆ ಮಹಾ ಪ್ರತ್ಯಂತ ಭೂಪಾಳರ॥
ಟ್ಟದ ಕಾಳಿಂಗ ಗಜೇಂದ್ರ ದಾನಜಲಧಾರಾಸಾರದಿಂ ನೋಡ ಕುಂ।
ದಿದುದಿಲ್ಲೊಳ್ಗೆಸಱಾ ಸುಯೋಧನ ನೃಪದ್ವಾರೋಪಕಂಠಂಗಳೊಳ್ ॥ ೪೧ ॥

ಕಂ॥ [7]ಕುಸಿದಂ ರಿಪು ವಿಜಯ[ದ] ನಿ।
ದ್ರಿಸಿದಂ ಕಂ[8]ಡೆಂದಿನಂದಮಂ ತಪ್ಪಿದನಾ॥
ಳ್ವೆಸ[9]ಕಗಿಯೆ ನುಡಿದನೆಂಬೀ।
ಪಿಸುಣನಣಂ ಕೇಳ್ದನಿಲ್ಲ ಬೀಡಿನೊಳವನಾ ॥ ೪೨ ॥

*ನೆಗಟ್ದರಿಗನ ಸಾಹಸಮೊ।
ರ್ಮೆಗೊರ್ಮೆ ಕೆಲದವರ ಮಾತಿನೊಳ್ ತನ್ನ ಮನಂ॥
[10][ಬು]ಗೆ ಮಂತ್ರಪದಕ್ಕುರಗಂ।
ಸುಗಿವಂತೆವೊಲಗಿದು ಸುಗಿದು ತಲೆಗರೆದಿರ್ಪಂ ॥ ೪೩ ॥

[11]ಅಱು[12][ವಿ]ಂತು ರಾಜಕಾರ್ಯದ।
ತೆಱನೆನಗಱುವಂತು ಮೊಗ್ಗೆ ದೇವರ [13][ಮು]ಂದಾ॥
ನಱುಯೆಂ [14]ಪಿರಿದುಂ ಗಟಿಪಲ್।
ಮಱುಸೊಂದಿದನಲ್ಲನಹಿತನೆಟ್ಟೆತ್ತಿರ್ದಂ ॥ ೪೪ ॥

ವ॥ ಎಂದು ಬಿನ್ನಪಂ ಗೆಯ್ದು ಕಿರಾತ ದೂತಂ ಪೋಪುದುಮಾ ಮಾತೆಲ್ಲಮಂ ಕೇಳ್ದು ಯಜ್ಞಸೇನತನೂಜೆ ಯಮತನೂಜಂಗಿಂತೆಂದಳ್—

---

1. ಗಿಂ (ಕ. ಖ. ಗ.); 2. ಯ್ದೆ (ಘ§.); 3. ನವ ನಯಮಾ (ಕ.) , . . ನಯಮಾ (ಖ.), ನಯಮುಮಾ (ಗ.) , ಸವಿನುಡಿಯುಂ (ಘ.); 4. ನೀನಮದ್ದೊರ್ಪ್ಪಿಯಟ್ಟೆ (ಕ.), ನೀನಮರ್ದ್ದರ್ಪ್ಪಿ ದಟ್ಟ (ಖ.). ತಿಣ್ಣಮರ್ದರ್ಪ್ಪಿದಟ್ಟೆ (ಗ. ಘ.); 5. ದಟ್ಟೆರ್ದೊಡಂ (ಕ. ಖ.); 6. ಗದ (ಕ.) , ಗಡ (ಖ.) , ಟ್ಟದ (ಗ. ಘ.) ; 7. ನಸಿದಂ . . . . . . ನಿ। (ಕ.) , ಕನಸಿದ . . . . . ನೆ। (ಖ.) , . . . . . . ಸಿದನಿ। (ಗ.) , ಕುಸಿದನೆ ರಿಪು ವಿಜಯಮು। (ಘ.) ; 8. ಡೇಗಿದಂ (ಕ.) , ಡೆನಿದಂ (ಖ.) ; 9. ಕಂಗೆಯೆಂದ (ಕ.) , ಕಂಗಿಯೆಂದು (ಖ.) ; 10. ಮಿ (ಘ§.) ; 11. ಅಱುಯದ ಕಾರ್ಯದ ತೆಱನೇ। ನಱುವಂತುಟು ಮೊಗ್ಗೆ ದೇವರ (ಕ. ಖ.) , ಅಱುಯದ ತೆಱನೆನ। ಗಱುವಂತು ಮೊಗ್ಗೆದೆವರ (ಗ.) ; 12. ವ (ಘ.) ; 13. . . ಮಱು[3]ದುಂ ॥ ನಱು[3] (ಕ.) , ಮನಮದ ॥ ನರಿ (ಖ.) , ಮಱುದಾ ॥ ನಱು (ಗ.) ; 14. ಗಟಿಪಂ ಪಲವಂತಾಂ। (ಕ.) , ಗಟಿಪಲ ಪಲವಂ ತಾಂ। (ಖ.) , ಗಳ ಪಲಪ . . . . . . . । (ಗ.).

* ಈ ಪದ್ಯವು ಘ. ಪ್ರತಿಯಲ್ಲಿ ಮಾತ್ರವಿದೆ (ಘ§.) ; ಗ. ಪ್ರತಿಯಲ್ಲಿ ಮೊದಲನೆಯ ಪಾದ ಮಾತ್ರವಿದೆ.

ಚಂ॥ ನುಡಿವೊಡೆ ರಾಜಕಾರ್ಯಂ ನಯಮೆತ್ತಬಲಾಜನದೊಂದು ಬುದ್ಧಿಯಿ।
ತ್ತುಡುಪತಿ ವಂಶ ನೋಡುವೊಡಿದೊಂದಘಟಂ ಬಗೆವಾಗಳೆಂತು ಕೇಳ್॥
ನುಡಿಯದೆ ಕೆಮ್ಮಗಿರ್ದೊಡಮಿರಲ್ಕಣಮೀಯದೆ ನಿಮ್ಮೊರ್ನ್ನು ಮಂ।
ನುಡಿಯಿಸಿದಪ್ಪುವಾ ಕುರುಕುಳರ್ಕಳ ಗೆಯ್ದಪರಾಧ ಕೋಟಿಗಳ್ ॥ ೪೫ ॥

ಕಂ॥ ಆವಡವಿಗಳೊಳ್ ಪಣ್ಪಲ।
ಮಾವಗಮೊಳವಲ್ಲಿಗಱಿಸಿ ಪರಿಪರಿದು ಕರಂ॥
ತಾವಡಿಗೊಳ್ವೀ ಭೀಮನ।
ಜೀವಸಮಿದು ನಿನ್ನ ಮನಮನೊನಲಿಸಿತಿಲ್ಲಾ ॥ ೪೬ ॥

ಉ॥ ಪೋಗಿ ಸು[1]ಪರ್ವ ಪರ್ವತದ ಕಾಂಚನ [2]ರೇಣುಗಳಂ ಪರಾಕ್ರಮೋ।
ದ್ಯೋಗದಿನೆತ್ತಿ ತಂದು ನಿನಗಿತ್ತದಟಂ ಬಡಪಟ್ಟು ಜೆಟ್ಟದೊಳ್॥
ಪೋಗಿ ತೊೞಲ್ದು ನಾರ್ಗಳನುಡಲ್ ತರುತಿರ್ದೆಲೆ ಮಾಡಲಾರ್ತನಿ।
ಲ್ಲಾಗಳೆ ಕೋಪಮುಂ ನಿನಗೆ ಸಂಚಿತ ಶೌರ್ಯ[3]ಧನಂ ಧನಂಜಯಂ
॥ ೪೭ ॥

ಕಂ॥ ಕಾಯ ಕ್ಲೇಶದಿನಡವಿಯ।
ಕಾ[4]ಯಂ ಪಣ್ಣುಮನುದಿರ್ಪಿ ತಿಂದಗಲದೆ ನಿಂ॥
ದೀ ಯಮಳರಾವ ತೆಱದಿಂ।
ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ ॥ ೪೮ ॥

ಆ ದುಶ್ಶಾಸನನಿಂದೆನ।
ಗಾದ ಪರಾಭವಮನೇನುಮಂ ಬಗೆಯದೊಡಿಂ॥
ತಾದರಮೆ ತೊವಲ್ಗಾರುಮ।
ನಾದರದೇ[ಂ] ನಿನ್ನ ಮನಕೆ [5]ಚಿಂತೆಯುಮಿಲ್ಲಾ ॥ ೪೯ ॥

ಎಮ್ಮಯ್ವರ ಜೀವಸಮುಂ।
ನೀಂ ಮನದೊಳ್ ನೆನೆಯೆಯಪ್ಪೊ[6]ಡಂ ನಿನ್ನಿರವಂ॥
ನೀಂ ಮರುಳೆ ಬಗೆಯದಂತುಂ।
ಘುಮ್ಮೆಂಬಡವಿಯೊಳಡಂಗಿ ಚಿಂತಿಸುತಿರ್ಪಾ ॥ ೫೦ ॥

---

1. ರೇಂದ್ರ (ಘ.); 2. ತೂಣೆ (ಕ.), ತೊಣೆ (ಖ.); 3. ದಿನಾ (ಕ.), ವಿಳಾಸದಿಂ (ಖ.ಗ.); 4. ಯಂ ಮನದೊಪ್ಪಿತಿಂದಸೀನಲ್ಲದೆ (ಕ.), ಯುಂ ಮನದಪ್ಪಿರ್ತಿಂದಗಲ್ಲದೆ (ಖ), ಯುಂ ಮನಾದಿರ್ಪಿ ತಿಂದಗಲದೆ (ಗ.); 5. ಕಿಂಕೆ (ಕ.ಖ.ಘ.); 6. ಡಿನ್ನುಂ ನಿಂನಂ (ಕ.), ಇತರ ಪ್ರತಿಗಳಲ್ಲಿ ತಪ್ಪುಗಳು.

ಕಂ॥ [1][ಶ]ಮಮನೆ ಕೆಯ್ಕೊಳ್ವೊಡೆ ಬಿ।
ಲ್ಲುಮುಂಬುಮಂ ಬಿಸುಟು ತಪಕೆ ನೀಂ ಬಗೆವೊಡೆ ವಿ॥
ಕ್ರಮಮುಂ ಪಗೆಯಂ ಕಿಡಿಸುವ।
[1][ಶ]ಮದಿಂ ಮುನಿಗಾಯ್ತು ಸಿದ್ಧಿ ಭೂಪತಿಗಾಯ್ತೇ ॥ ೫೧ ॥

ತಪ್ಪುಮನೆ ನುಡಿಯೆನೆಂಬುದಿ।
ದೊಪ್ಪದು ನಿನಗಹಿತರೆಯ್ದೆ [2]ತಪ್ಪಿರ್ದರವರ್॥
ತಪ್ಪಿದ ಬೞಿಕ್ಕೆ ತಪ್ಪಿದ।
[3]ತಪ್ಪೆ[ೞಂ] ಗಳ ನನ್ನಿಗೊಪ್ಪ[4]ಮಲ್ಲದ ತಪ್ಪೇ ॥ ೫೨ ॥

ವ॥ ಎಂದ ಪಾಂಚಾಳ ರಾಜತನೂಜೆಯ ಮಾತಿಂಗೆ ಬೆಂಬಲಂಬಾಯ್ವಂತೆ ಭೀಮಸೇನನಿಂತೆಂದಂ—

ಕಂ॥ ನುಡಿಯದೆ ಪೆಱತಂ ದ್ರೌಪದಿ।
ನುಡಿದಳ್ ತಕ್ಕುದನೆ ಕೇಳಿಮಿನ್ ಕೇಳದಿರಿನ್॥
ನುಡಿಯಲೆಡೆಯಿಲ್ಲ ನಿಮ್ಮಂ।
ನುಡಿಯಿಸಿದಪುದೆನ್ನ ಮನದ ಮುನಿಸವನಿಪತೀ ॥ ೫೩ ॥

ನಾಲ್ಕುಂ ನೃಪ ವಿದ್ಯೆಯನಾ।
ಡಲ್ ಕಲ್ತುಂ ನೆಱೆಯೆ ಕಲ್ತೆಯಿಲ್ಲಾಗದೆ ಸೋ॥
ಲಲ್ಕೆ ನೃಪ ದೊರೆಯೆ ನೆಲನಂ।
ವಲ್ಕಲ ವಸನಕ್ಕೆ ಮೆಯ್ಯನಾಂಪುದು ಪೆಂಪೇ ॥ ೫೪ ॥

ಉ॥ ನನ್ನಿಗೆ ದಾಯಿಗಂ[5][ಗೆಳೆಯ][6]ನೊಪ್ಪಿಸಿದೆಂ ಗಡಿಮೆಂಬ ಮಾತುಗಳ್।
ನಿನ್ನವು ಕೂರದರ್ ನೆಲನನೊಟ್ಟಜೆಯಿಂ ಕೊಳೆ ಕೊಟ್ಟು [7]ಮುಟ್ಟುಗೆ॥
ಟ್ಟನ್ನ ಮರಣ್ಯದೊಳ್ ನಮೆದಪಂ ಯಮನಂದನನೆಂಬ ಬನ್ನಮುಂ।
ಮುನ್ನಮೆ ಸೋಂಕಿ [8]ಕಣ್ಮಲೆವ ಮಾತುಗಳೆಲ್ಲರ ಪೇೞ್ವ ಮಾತುಗಳ್ ॥ ೫೫ ॥

ಕಂ॥ ಸಲೆ ಸಂಧಿರ್ಪತ್ರೊಂದುಂ।
ತಲೆವರೆಗಂ ನಮಗೆ ಪರಿಭವಂ ಕೃಷ್ಣೆಯ ಮುಂ॥
ದಲೆಯಂ ಪಿಡಿದೆೞೆವಲ್ಲಿಯೆ।
ತಲೆವಿಡಿದರ್ ನಮ್ಮ ಬೀರಮಂ ಕೌರವರುಂ ॥ ೫೬ ॥

---

1. ಸ (ಸ.); 2. ಪರ್ಬಿ (ಕ.ಗ.); 3. ತಪ್ಪಲೆಗಳ ನಿನಗದೊ (ಕ.), ತಪ್ಪಲೆಗಳ ನಿನಗೊಪ್ಪ (ಖ.), ತಪ್ಪಿಲೆಗಳ ನಿನಗೊಪ್ಪ (ಗ.), ತಪ್ಪೆಲೆಗಳ ನನ್ನಿಗೊಪ್ಪ (ಘ.); 4. ಮಲ್ಲದೆ (ಕ.ಗ.), ಮದಲ್ಲದೆ (ಖ.); 5. ಗರಸ (ಸ.); 6. ನೇಳಿದ ಮಾಡಿದಮೆಂಬ (ಕ.), ನೇಳಿದ....ನಡಿಮೆಂಬ (ಖ.), ನೇಳಿದಂ...ಗಡಿಮೆಂಬ (ಗ.), ನೇಳಿದನೊಪ್ಪಿಸಿದೆಂ ಗಡಿಮೆಂಬ (ಘ.); 7. ಬಂಟು (ಕ.), ವಂಟು (ಖ.). ಮುಂದು (ಘ†.); 8. ತ (ಗ.ಘ.).

ಚಂ॥ ಮಲೆ ಮಲೆದುರ್ಕಿ ಸೊರ್ಕಿ ಸಭೆಯೊಳ್ ಕುಲ [1]ಪಾಂಸುಲನೀ ಶಿರೀಷ ಕೋ।
ಮಲೆಯ ವಿಲೋಲ ನೀಲ ಕಬರೀ ಭರಮಂ ತೆಗೆವಾಗಳಲ್ಲಿ ಕೆ॥
[2]ಯ್ಯ [3][ಲಿ ಸದೆ]ದಂತೆ ಪತ್ತಿ ಬೆರಲಚ್ಚುಗಳಚ್ಚಿಱಿದಂತೆ ಕೊಂಕುಗಳ್।
ತಲೆ ನವಿರೊಂದಿ ಮೂದಲಿಸುವಂತೆವೊಲಿರ್ದುವು ನಮ್ಮ ವೀರಮಂ ॥ ೫೭ ॥

ಮ॥ ಅಸಿತೇಂದೀವರ ಲೋಲ ಲೋಚನೆಯ[4]ನಂದಂತಾ ಸಭಾಮಧ್ಯದೊಳ್।
ಪಸುವಂ ಮೋದುವವೋಲೆ ಮೋದೆಯುಮದಂ ಕಂಡಂತೆ ಪಲ್ಗರ್ಚಿ ಸೈ॥
ರಿಸಿದೆಂ ನಿನ್ನಯ ನನ್ನಿಗಿನ್ನೆವರಮಾ ದುಶ್ಶಾಸನೋರಸ್ಥಳೋ।
ಷ್ಣ[5]ಸೃತಾಸೃಗ್ಜಲ ಪಾನಮಂ ಬಯಸಿ ಬಾಯ್ ತೇರೈಸೆ ಸೈ[6]ರ್ಪಿರ್ಪನೇ
॥ ೫೮ ॥

ವ॥ ಎಂದು ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು ಪಗೆವರಿರ್ದ ದೆಸೆಯಂ ನೋಡಿ ತಳರಲ್ ಬಗೆದ ಭೀಮಸೇನನಂ ಧರ್ಮಪುತ್ರಂ ಕೋಪತಾಪದಿಂ ಮಸಗಿದ ಮದಗಜಮನೆ ಮಾಣಿಸುವಂತೆಂತಾನುಂ ಮೃದುವಚನಂಗಳಿಂ ಮುಳಿಸನಾಱಿಸುತಿರ್ದನಿರ್ಪನ್ನೆಗಂ—

ಚಂ॥ ಕನಕ ಪಿಶಂಗ ತುಂಗ ಜಟಿಕಾವಳಯಂ ಕುಡುಮಿಂಚಿನೋಳಿಯಂ।
ನೆನೆಯಿಸೆ ನೀಲ ನೀರದ ತನುಚ್ಛವಿ ಭಸ್ಮ ರಜೋವಿಲಿಪ್ತಮಂ॥
ಜನ ಗಿರಿಯಂ ಶರಜ್ಜಳಧರಂ ಕವಿದಂತಿರೆ ಚೇಸ್ವನಾಳ್ದ ಭೋಂ।
ಕನೆ ನಭದಿಂದಮುಂದಿೞಿದನಲ್ಲಿಗೆ [7][ವೃದ್ಧ] ಪರಾಶರಾತ್ಮಜಂ ॥ ೫೯ ॥

ವ॥ ಅಂತು ನಭೋವಿಭಾಗದಿಂ ಧರಾವಿಭಾಗಕ್ಕಿೞಿತಂದ ಕೃಷ್ಣದ್ವೈಪಾಯನನಂ ಕಂಡಜಾತಶತ್ರು ತನ್ನೇಱಿದ ಸ್ಫಟಿಕ ಶಿಳಾತಳದ ಪೀ[8]ಟ್ಟಕದಿಂದಿೞಿದು ನಿಜಾನುಜಸಹಿತಮಿದಿರ್ವಂದು ಧರಾತಳ ನಿಪ್ಮ ಲಲಾಟ ಪಟ್ಟಂ ಸಾಷ್ಟಾಂಗವೆಱಗಿ ಪೊಡವಟ್ಟು ತದೀಯಾಶೀರ್ವಾದಮನಾಂತು ತಚ್ಛಿಳಾತಳದೊಳ್ ಕುಳ್ಳಿರಿಸಿ ವನ ಕುಸುಮಂಗಳಿಂದರ್ಘ್ಯಮೆತ್ತಿ ಸರೋವರ ಜಲಂಗಳಂ ಪದ್ಮಪತ್ರ ಪುಟಂಗಳಿಂ ತಂದು ಪದಪದ್ಮಂಗಳಂ ಕರ್ಚಿ ತತ್ಪಾದ ಪವಿತ್ರೋದಕಂಗಳನನಿಬರುಮುತ್ತಮಾಂಗದೊಳ್ ತಳಿದುಕೊಂಡಿರ್ದಾಗಳ್ ಸತ್ಯವತೀನಂದನಂ ತನ್ನ ಮಕ್ಕಳ ಸಾಯಸಂಗಳ್ಗೆ ಮನ್ಯುಮಿಕ್ಕು ಕಣ್ಣ ನೀರಂ ನೆ[9]ಗಪೆ ಮಹಾ ಪ್ರಸಾದಮೆಂದು ಧರ್ಮನಂದನನಿಂತೆಂದಂ—

---

1. ಪಾಂಸನ (ಕ.), ನಾರಿಯನುದ್ಧತಿಕ್ಕೆಯಿಂ। ದೆಳೆದು (ಘ§.); 2. ಯ್ಗ (ಕ.ಖ.ಗ.); 3. ಲಸದವಂತೆ (ಕ.), ಲಸವದಂತ್ತೆ (ಖ.), ಲಸದದಂತೆ (ಗ.ಘ.); 4. ನಾದಂ ತತ್ಸ (ಕ.), ನಂದಂ ತತ್ಸ (ಗ.); 5. ಸಿ (ಖ.ಗ.ಘ.); 6. ರಿಪ್ಪೆ (ಗ.); 7. ದಿವ್ಯ (ಕ.ಘ.), ವಿದ್ಯೆ (ಖ.), ವಿದ್ಯ (ಗ.ಘ§.); 8. ಟ್ಟ (ಕ.ಖ.); 9. ರೆ (ಕ.ಖ.).

ಉ॥ ನೀಗಿದುದೀಗಳೆಮ್ಮ ವನವಾಸ ಪರಿಶ್ರಮವೀಗಳಾಳ್ದೆವಾ।
ಸಾಗರ ಮೇಖಳಾವೃತ ಧರಿತ್ರಿಯನೀಗಳಡಂಗಿತೆಮ್ಮ ಹೃ॥
ದ್ರೋಗಮನೇಕ ಮಂಗಳ ಪರಂಪರೆಗಳ್ ದೊರೆಕೊಂಡುವೀಗಳೇ।
ನಾಗದೊ ಪೇೞ್ ಭವಚ್ಚರಣ ಪದ್ಮ [1]ನಿರೀಕ್ಷಣದಿಂ ಮುನೀಶ್ವರಾ ॥ ೬೦ ॥

ಕಂ॥ ಆಪತ್ಪಯೋಧಿಯೊಳಗ।
ತ್ಯಾಪತ್ತಿಂದುಳ್ಕಿಮುೞ್ಕಿ ನಮೆವೆಮಗೆ ಶರಣ್॥
ಪಾಪಹರ ನೀಮೆ ಬಗೆದೆನು।
ಗಾಪತ್ಪ್ರತಿಕಾರಮಾವುದೀಗಳೆ ಬೆಸಸಿಂ ॥ ೬೧ ॥

*ವ॥ ಎಂಬುದುಮಾ ಮುನೀಂದ್ರನಾಮುಮಂತೆಂದೆ ಬಂದೆವೆ[2][ಂದು]—

ಕಂ॥ ಸುರರ್ಗಮೃತಮನುಂತೆ ಕಳಾಂ।
ತರದಿಂದಿತ್ತಸಿಯನಾದ ಚಂದ್ರನವೋಲ್ ಭೂ॥
ಭರಮಂ ನನ್ನಿಗೆ ದಾಯಿಗ।
ರ್ಗಿರದಿತ್ತೆಡರೊತ್ತೆ ನೀನೆ ಧನ್ಯ[3][ನ]ಯಲ್ತೇ ॥ ೬೨ ॥

ನೀಂ ಬೇೞ[3]ಮಗೆ ಸುಯೋಧನ।
ನೇಂ ಬೇೞ[3]ಯೆ ಕೂಸುತನದೊಳಾದೊಡಮಿನ್ನೇ॥
ನೆಂಬುದೊ ಪಿರಿದೈವರೊಳಂ।
ಪಂಬಲ್ ಗುಣ ಪಕ್ಷಪಾತಮುಪ್ಪುದು ನಿಮ್ಮೊಳ್ ॥ ೬೩ ॥

ವ॥ [4]ಎಂದುಂ ತನ್ನ ವರ್ತನಮುಂ ಮೋಹಮನುಂಟುಮಾ[5][ಡೆ] ಮತ್ತ ಮಿಂತೆಂದಂ—

ಕಂ॥ ಪನ್ನೆರಡು ವರುಷದವಧಿಯು।
ಮಿನ್ನೆಱಿಯಲ್ ಬ[6][ಂ]ದುದಹಿತನಿಳೆಯಂ ಕುಡನಾ॥
ಸನ್ನಂ ಕಾಳೆಗಮುಱಿಯಿರೆ।
ಪನ್ನಗ ಕೇತನ[7][ನ ಚಲದ ಕಲಿತನ]ದಳವಂ ॥ ೬೪ ॥

[8]ಅನವದ್ಯಂ॥ ಪರಶುರಾಮನನಂಜಿಸಿ ಬೀರಕ್ಕಾಗರಮಾದ ನದೀಜನೇ।
ದೊರೆಯನೇದೊರೆಯಂ ಗಳ ಕುಂಭಪ್ರೋದ್ಭವನಾತನ ಪುತ್ರನೇ॥
ದೊರೆಯನೇದೊರೆಯಂ ಕೃಪನಂತಾ ಪಾಟಿಯೊಳಂಕದ ಕರ್ಣನೇ।
ದೊರೆಯನಿಂತಿವರೊರ್ಬರಿನೊರ್ಬರ್ ಗರ್ವಿತರಗ್ಗಳಮಲ್ಲರೇ ॥ ೬೫ ॥

---

1. ಸರೋವರದಿಂದ.......(ಕ.ಗ.); 2. ನೆ (ಘ.); 3. ನೆ (ಸ.); 4. ಎಂಬುದುಂ (ಸ.); 5. ಡಿ (ಘ.); 6. ಗೆ (ಸ.); 7.........ಬಲ (ಕ.), ........ಲಸ (ಖ.),.......ಲ (ಗ.ಘ.), ಚತುರ್ವಲಂಗಲ (ಘ§.); 8. ಖಚರಪ್ಲುತಂ (ಸ.).

*ಈ ವಚನವು ಘ. ಪ್ರತಿಯಲ್ಲಿ ಮಾತ್ರವಿದೆ.

ಕಂ॥ ಪ್ರಳಯದುರಿ ಕಾಳಕೂಟದ।
ಗುಳಿಗೆ ಪುರಾಂತಕ ಲಲಾಟ ನೇತ್ರಾನಳನೊಂ॥
ದಳವಿಗಮುಗ್ಗಳಮವರ್ಗಳ।
ಮುಳಿಸುಗ[1]ಳುಂ ಮುಳಿದು ತುಡುವ ದಿವ್ಯೇಷುಗಳುಂ ॥೬೬॥

ವ॥ ಅದು ಕಾರಣದಿಂದವರಂ ಗೆಲ್ವಾಗಳ್ ವಿಕ್ರಮಾರ್ಜುನನಲ್ಲದೆ ಗೆ[2]ಲ್ಲ ನದಱಿಂದಾತಂಗೆ ದಿವ್ಯಾಸ್ತ್ರಂಗಳಂ ಪಡೆಯಲ್ವೇೞ್ಪುದದಂ ಪಡೆವುಪಾಯಮುಮಂ ಮಂತ್ರಮುಮನುಪದೇಶಂಗೆಯ್ಯಲ್ ಬಂದೆವೆಂದು ಯುಧಿಷ್ಠಿರಂಗೆ ಪೇೞ್ದು ವಿಕ್ರಮಾರ್ಜುನಂಗೆ ಮಂತ್ರಾಕ್ಷರಂಗಳನುಪದೇಶಂಗೆಯ್ದು ಗುಹ್ಯಕನೆಂಬ[3]ನಂ ಸ್ಮರಣ ಮಾತ್ರದೊಳ್ ಬರಿಸಿ ಸಾಹಸಾಭರಣನನಿಂದ್ರಕೀಲ ನಗೇಂದ್ರಮನೆಯ್ದಿಸಿ ಬರ್ಪುದೆಂದು ಪೇೞ್ವುದುಂ ಧರ್ಮಪುತ್ರನಾ ಮುನೀಂದ್ರಂಗೆ ಸಾಷ್ಟಾಂಗವೆಱಗಿ ಪೊಡವಡೆ ಪರಸಿ ಪಯೋಧರಪಥಕ್ಕೊಗೆದನಿತ್ತ ವಿಕ್ರಾಂತತುಂಗನುಂ ಧರ್ಮ ಪುತ್ರಂಗಂ ವಾಯುಸುತಂಗಂ ಪೊಡವಟ್ಟು ಬೆಸ[4]ಕೇಳ್ವೆನೆಂದಾಗಳ್ ಪಾಂಚಾಳ ರಾಜತನೂಜೆಯಿಂತೆಂದಳ್—

ಕಂ॥ ಬಗೆಯದೆ ಮೆಯ್ಯೊ[5]ಕಮಂ ಬಗೆ।
ಪಗೆವರ ಕಡುವೆರ್ಚನೆನ್ನ ಪೂಣ್ಕೆಯನೆರ್ದೆಯೊಳ್॥
ಬಗೆ ಮುನಿಯ ಮಂತ್ರಪದಮಂ।
ಬಗೆ ಕೂಡುಗೆ ನಿನ್ನ ಬಗೆದ ಬಗೆಯೊಳ್ ಪಾರ್ಥಾ ॥೬೭॥

ವ॥ ಎಂದು ಬುದ್ಧಿವೇೞ್ದು ಮನದೆಱಕಂ ಮನೋವೇ[6]ಗದಿಂ ಪರಿಯೆ ಸೈರಿಸಲಾಱದೆ—

ಉ॥ ಬಳ್ವಳ ನೀಳ್ದ ಕಣ್ಮಲರ ತಳ್ತಮೆಯಿಂ ಕರೆಗಣ್ಮಿ ಬೆಳ್ಗಡ।
ಲ್ಗಳ್ವರಿಯಲ್ಕಮಾಟಿಸಿದೊಡೊಯ್ಯನೆ ಮಂಗಳ [7][ಭಂಗ] ಭೀತಿಯಂ॥
ತಳ್ವದೆ ಮಾಡೆ ಬಾಷ್ಪಜಳಮಂ ಕಳೆದೞ್ಕಱನೀಯೆ ಸಂಬಳಂ।
ಗೊಳ್ವವೊಲಾ ತಳೋದರಿಯ ಚಿತ್ತಮನಿೞ್ಕುಳಿಗೊಂಡ[8]ನರ್ಜುನಂ ॥೬೮॥

ವ॥ ಅಂತು ಯಾತ್ರೋದ್ಯುಕ್ತನಾಗಿ ಗುಹ್ಯಕನ ಪೆಗಲನೇಱ ಗಂಧೇಭ ವಿದ್ಯಾಧರಂ ವಿದ್ಯಾಧರನಂತೆ ಗಗನತಳಕ್ಕೊಗೆದು ಮಹೇಂದ್ರಕೀಲಾಭಿಮುಖ ನಾದಾಗಳ್—

1. ಳಿಂ (ಕ.ಖ.); 2. ಲ್ವರಿಲ್ಲಮಾತಂಗಂ (ಘ.); 3. ಯಕ್ಷಕನಂ (ಘ§.); 4. ಕೆಯ್ವೆ (ಗ.ಘ.); 5. ಗ (ಕ.); 6. ಘವರಿಯೆ (ಘ§.); 7. ಗೀತಿ ಭೀತಿ (ಕ.), ಭಿತ್ತಿಭಿತ್ತಿ (ಖ.), ಗೀತಿ ಭಿತ್ತಿ (ಗ.), ಗೀತಿ ಭಿಕ್ತಿ (ಘ.); 8. ನಂತರಂ (ಕ.ಖ.).

ಚಂ॥ ಕಡವಿನ ಕಂಪಡಂಗಿದುದು ಜಾದಿಯ [1]ಕಂಪೊದವಿತ್ತು ಸೋಗೆಯುಂ।
ಕರ್ಡುಗಿದುದಂಚೆಯುಂಕರ್ ಪೊಸತಾಯ್ತು ಮುಗಿಲ್ಗಳ [2]ಕರ್ಪು
ಪೀನಮೋ॥
ಗಡಿಸಿದುದಿಂದುಮಂಡಳದ ಕರ್ಪೆಸೆದತ್ತು ಘನಾಗಮಂ ಪೊದ।
ಲ್ಗಿಡೆ ಶರದಾಗಮಂ ನೆಱೆಯೆ ಪರ್ವೆ ಸಮಸ್ತ ಮಹೀವಿಭಾಗಮಂ ॥ ೧೯ ॥

ಅಳಿ ಬಿರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ ಹಂಸೆ ಪೂತ ಪೂ।
ಗೊಳದೊಳೆ ರಾಗಿಸುತ್ತಿರೆ ಶುಕಾವಳಿ ಬಂಧುರ ಗಂಧ ಶಾಳಿ ಸಂ॥
ಕುಳದೊಳೆ ಪಾಯ್ದು ಪಾಯ್ದು ನಲಿಯುತ್ತಿರೆ ಸಾರೆ ಚಕೋರವಿಂದುಮಂ।
ಡಳ ಗಳಿತಾಮೃತಾಸವಮನುಂಡುಸಿರುತ್ತಿರೆ ಚೆಲ್ವು ಶಾರದಂ ॥ ೨೦ ॥

ಮ॥ ಪುಳಿಯೊಳ್ ಕರ್ಚಿದ ಬಾಳ ಬಣ್ಣಮನೆ ಪೋಲ್ವಾಕಾಶಮಾಕಾಶಮುಂ।
ಡಳಮಂ ಪರ್ವಿದ ಬೆಳ್ಮುಗಿಲ್ ಮುಗಿಲ ಬೆಳ್ಪೊಳ್ಪೊಕ್ಕು ತಳ್ಪೊಯ್ಯೆ ಬ॥
ಳ್ವಳ ನೀಳ್ದಿರ್ದ ದಿಶಾಳಿ ಶಾಳಿವನ ಗಂಧಾಂಧ ದ್ವಿರೇಫಾಳಿ ಕ।
ಣ್ಗೊಳಿಸಿತ್ತೊರ್ಮೆಯೆ ಬಂದುದಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ
॥ ೨೧ ॥

ವ॥ ಆಗಳ್ ವಿಜಯಂ ತನ್ನ ವಿಜಯಶ್ರೀಯ ಬರವಿಂ[3]ಗಿದಿರ್ವಂದಂತೆ ಬಂದ ಶರತ್ಕಾಲಶ್ರೀಯನುತ್ಕಂಠಿತ ಹೃದಯನಾಗಿ ಮೆಚ್ಚಿ ನೋಡುತ್ತುಂ ಬರ್ಪನ್ನೆಗಂ [4]ಮುಂದೆ ಶಾರದ ನೀರದಂಗಳೆಲ್ಲಮೊಂದೆಡೆಗೆ ತೆರಳ್ದೊಟ್ಟಿ ಬೆಟ್ಟಾದಂತಿರ್ದ ನೀಹಾರ ಗಿರಿಯಂ ಕಂಡಿದಾವುದೆಂದು ಬೆಸಗೊಳೆ ಗುಹ್ಯಕನಿಂತೆಂದಂ—

ಮ॥ ವಿದಳತ್ಕುಂದ ಶಶಾಂಕ ಶಂಖ ಧವಳಂ ಗಂಧೇಭ ದಾನಾಂಬು ಪೂ।
ರ್ಣ ದರೀ ಸುಂದರ ಕಂದರಂ ಮೃಗಪತಿ ಪ್ರಧ್ವಾನ ಗರ್ಜದ್ಗುಹಂ॥
ಮದಿರೋನ್ಮತ್ತ ನಿಳಿಂಪ ಕಿಂಪುರುಷ ಕಾಂತಾರಬ್ಧ ಸಂಗೀತಮೊ।
ಪ್ಪಿದುದಲ್ತೇ ಸುರ ಸಿದ್ಧ ದಂಪತಿ ರತಿ [5]ಶ್ರೀ ರಮ್ಯ ಹೈಮಾಚಳಂ ॥ ೨೨ ॥

ಕಂ॥ ಲಳಿತೋತ್ಸವ ಧ್ವಜಾಂಶುಕ।
ವಿಳಸನಮಂ ಮುಂದೆ ನಿನಗೆ ತೋರ್ಪಂತಿರೆ ಕ॥
ಣ್ಗೊಳಿಸಿರ್ದುದು ನೋಡ ಹಿಮಾ।
ಚಳ ಶಿಖರದ ಮೇಲೆ ಪಾಯ್ವ ಗಂಗಾಸ್ರೋತಂ ॥ ೨೩ ॥

ವ॥ ಎಂದು ಗುಹ್ಯಕಂ ಹಿಮವನ್ಮಹೀಧರಮಂ ತೋಱುತ್ತುಂ ಬಂದು ಕೈಲಾಸ ಪರ್ವತಮಂ ಕಂಡು—

---

1. ಸೊಂಪೆಸದ (ಕ.); 2. ನೀಳ್ದ ಕಪ್ಪುರ್ವಮೋ (ಕ.); 3. ಗೆ ನಿರ್ಗಂಥಂ (ಖ.), ಗೆ ನಿರ್ಗಂದಂ (ಗ.ಘ.), ಗೆ ನಿಗ್ಗವಂ ಬಪ್ಪಂತೆ (ಘ§.); 4. ಮುನ್ನೆ (ಕ.ಗ.); 5. ವ್ಯಾಪ್ತೋರು (ಕ.).

ಮ॥ ಸ್ರ॥ ಇದು ಕೈಲಾಸಂ ಭವಾನೀಧವನ ನೆಲೆ ಮನೋಜಾತನಂ ಬೂದಿಮಾಡಿ।
[1][ತ್ರಿ]ದಱಿೊಳ್ ದಕ್ಷಾಧ್ವರ ಧ್ವಂಸಕನ ನೊಸಲ ಕಣ್ಣಾತ[ನೊಳ್] ತನ್ನ ದೋರ್ಗ॥
ರ್ವದೆಗುರ್ವಂ [2][ಪ್ರಾ]ಕಟಂ ಮಾಡುವ ಬಗೆಯೊಳಿದಂ ಪತ್ತಿ ಕಿ[3][ಱ್ತ್ರೊ]ತ್ತಿ ಪೊ[4][ತ್ತ್ರಿ]।
ತ್ತಿದೊಡಿತ್ತಂ [5][ಮೆಚ್ಚಿ ಲಂಕಾಧಿಪತಿಗೆ ಬರವಂ [6]ರಾಗದಿಂ] ನೀಳಕಂಠಂ ॥ ೭೪ ॥

ಚಂ॥ ತೊಱೆ ತೊಱೆಯೆಂಬ ಮಾತನನಿತಿಲ್ಲದೊಡಾಂ ತೊಱೆವೆಂ ದಲೆಂದೊಡಾ।
ತೊಱೆಯೊಳೆ ಪೋಯ್ತು ಸೂರುಳೆನೆ ಸೂರುಳವೇವುವೊ ನಂಬೆನೆಂಬುದುಂ॥
ಕಱೆಗೊರಲಾತನಾತ್ಮ ವಿಟ ತತ್ತ್ವಮನುಂಟೊಡೆತಾಗಿ ಮಾಡಿ ಬಾಂ।
ದೊಱೆಯನೆ ಪೊತ್ತು ಗೌರಿಗೆ ಕ[ವ]ಲ್ದೊಱೆ [7][ಗೆಯ್ಸಿ]ದನೀ ಪ್ರದೇಶದೊಳ್ ॥ ೭೫ ॥

ವ॥ ಎಂದು ಗುಹ್ಯಕಂ ಕೈಲಾಸ ಶೈಲದೆಲ್ಲೆಡೆಗಳುಮಂ ವಿಕ್ರಮಾರ್ಜುನಂಗೆ ತೋಱುತ್ತುಂ ಬಂದು—

ಉ॥ ಸಾಳ ತಮಾಳ ಕಾನನ ಭರೋದ್ಧತ ಸಿಂಧುರ ಕಂಠ ಗರ್ಜನಾ।
ಭೀಳಮನಂಬರೇಚರ ವಧೂ ಕರಪಲ್ಲವ ಸಂಚಳಲ್ಲತಾಂ॥
ದೋಳಮನಾಶ್ರಿತಾದ್ರಿ ನದ ಕೂಳಮನತ್ಯಧರೀಕೃ[8]ತಾ[ನ್ಯ] ಕು।
ಕ್ಷೀಳಮನಿಂದುಕಾಂತ [9][ಸು]ಸಲೀಳಮನೆಯ್ದಿದನಿಂದ್ರಕೀಲಮಂ ॥ ೭೬ ॥

ಮ॥ ಕಮಳಾಂತರ್ಗತ ಗಂಧ ಬಂಧು ನಯದಿಂ ಬಂದಪ್ಪಿಕೊಳ್ವಂತೆ ಗಾ।
ಳಿ ಮನಂಗೊಂಡಿರೆ ತೀಡೆ ಭೃಂಗರುತಿಗಳ್ ಮಾಂಗಲ್ಯ ಗೇಯಂಗಳಂ॥
ದಮನಂದೀಯೆ ಮಡಲ್ತು ಪೂತ ಲತೆಗಳ್ ಕೆಯ್ಗೆಯ್ದು [10][ಪೂ] ನೀಡಲ್ಕ।
ರ್ಘ್ಯಮನೀವಂತೆವೊಲಾದುದದ್ರಿ ಹರಿಗಂಗಿಷ್ಟಾರ್ಥ ಸಂಸಿದ್ಧಿಯಂ ॥ ೭೭ ॥

ವ॥ ಆಗಳ್ ಗುಹ್ಯಕನಿಂದ್ರಸುತನನಿಂದ್ರಕೀಲ ನಗೇಂದ್ರದ ಚಂದ್ರಕಾಂತ ಶಿಲಾತಲದೊಳಿೞಿಪಿ ಬೀೞ್ಕೊಂಡು ಪೋದನಿತ್ತ ವಿಕ್ರಮಾರ್ಜುನಂ ಪರಂತಪಂ ತಪೋನಿಯಮ ನಿಯಮಿತನಾಗಿ—

---

1. ತ್ರ (ಸ.); 2. ಪ್ರ (ಸ.); 3. ಱ್ತಿ (ಘ.); 4. ಱ್ತೊ (ಘ.); 5. ಬರವಂ ಲಂಕಾಧೀಶಂ (ಸ.); 6. ಗಾ ನೀಳ (ಕ. ಖ. ಗ. ಘ), ಗಾಗಳಾ ನೀಳ (ಘ§.); 7. ಯಿಾಸಿದ (ಕ. ಗ. ಘ.), ಯಿಸಿದ (ಖ.); 8. ತಾಂತ (ಸ.); 9. ಮಯ ಶೈಳ (ಕ.), ಸಲಿಳ (ಖ.), ಸೈಳ (ಗ.), ಸಲ್ಲಿಳ (ಘ.); 10. ನೀಡಲ್ಕಮ (ಕ.), ಪೇಡಲ್ಕಮ (ಖ.), ಪ್ರೆ. ಡಮ (ಗ), ಪೆಚ್ಚ್ರಗಡ (ಘ.).

ಮ॥ ಸ್ರ॥ ಭಸಿತಂ ಕರ್ಪೂರ ಕಾಳಾಗರು ಬಹುಳ ರಜಂ ವಲ್ಕಲಂ ಕಲ್ಪವೃಕ್ಷ।
ಪ್ರಸವಂ ಯಜ್ಞೋಪವೀತಂ ಕನಕ ಕಮಳನಾಳೋತ್ಕರಂ ನಿಚ್ಚನಿಚ್ಚಂ॥
ಪೊಸತೆಂಬಂತಾಗೆ ಪಾರ್ಥಂಗೊಸೆದು ತುಡಲುಡಲ್ ಪೂಸಲುಂ
ಸಾಲ್ವಿನಂ ಸಾ।
ಧಿಸಿತುದ್ಯದ್ಭಕ್ತಿ ಭಾರಾನತ ವನವನಿತಾ ವೃಂದಮಾನಂದದಿಂದಂ ॥ ೭೮ ॥

ಚಂ॥ ಅದಿರದ ಚಿತ್ತಮಳ್ಕದ ಮನಂ ಬಗೆಗೊಳ್ಳದ ಮೋಹಮೆತ್ತಿ ಕ।
ಟ್ಟಿದ ಜಡೆ ತೊಟ್ಟ ರತ್ನ ಕವಚಂ ಕೊರಲೊಳ್ ಸಲೆ ಕೋದ ಬಿಲ್ಪ್ರಯ॥
ತ್ನದೆ ಬಿಗಿದಿರ್ದೆರಲ್ತೊಣೆ ಮಿಸುಪ್ಪಸಿ ಖೇಟಕಮಿಂತಿವೊಂದು ಗುಂ।
ದದೆ ನಿಲೆ ನೋಲ್ಪ ನೋಟಕರ್ಗೆ ಸೌಮ್ಯ ಭಯಂಕರನಾದನರ್ಜುನಂ
॥ ೭೯ ॥

ವ॥ ಅಂತು ಪರಾಶರನಂದನನುಪದೇಶದೊಳ್ ತಪನ ಪ್ರಭಂ ತಪಂಗೆಯ್ಯಲ್ ತಗುಳ್ದೊಡೆ—

ಚಂ॥ ಕರಿಣಿಯ ಸೀಯನಪ್ಪ ಮೊಲೆವಾಲ್ಗೆ ತಗುಳ್ದುದು ತತ್ಕಿಶೋರ ಕೇ।
ಸರಿ ಹರಿಪೋತಮುಂ ಬೆದಱುತುಂ ಕರಿಪೋತಮುವುಂಡುಗರ್ಚಿ ಕೇ॥
ಸರಿಣಿಯ ಕೆಚ್ಚಲಂ ತುಡುಕುತುಂ ಪರಿದತ್ತು ಕುರಂಗ ಯೂಥದೊಳ್।
ಬೆರಸಿದುವಂದು ಪೆರ್ಬುಲಿಗಳಿಂದ್ರತನೂಜ ತಪಃಪ್ರಭಾವದಿಂ ॥ ೮೦ ॥

ವ॥ ಮತ್ತಮಾ ಗಿರೀಂದ್ರ ಕಂದರದೊಳ್ ತಪಂಗೆಯ್ವ ತಪೋಧನರ ತಪಂಗಳೆಲ್ಲಮಾತನ ತಪೋಮಯ ಶಿಖಿಗಳಿಂ ಬೆಂದು ಬೆಂದ ನು[1]ಲಿಯಂ[2]ತೇತರ್ಕಂಮು[3]ಟ್ಟಲ್ಲದೆ ಮುಟ್ಟುಗಿಡೆ ದೇವೇಂದ್ರಂ ತನಗಾದ ಹೃತ್ಕಂಪದೊಳಮಾಸನ ಕಂಪದೊಳಂ ನರೇಂದ್ರ ತಾಪಸಂ ತನ್ನಿಂದ್ರತ್ವಮುಂ ಕೊಳಲೆಂದು ತಪಂಗೆಯ್ದಪನೆಂಬ ಸಂಕೆಯೊಳ್ ತಪೋವಿಘಾತಂ ಮಾಡಿಮೆಂದು ತನ್ನ ನಚ್ಚಿನಚ್ಚರಸೆಯರುಮನಾಱುಂ ಋತುಗಳುಮಂ ಗಂಧರ್ವರುಮಂ ಕಾಮದೇವನಂ ದಂಡನಾಯಕಂ ಮಾಡಿ ಪೇೞ್ದಾಗಳ್—

ಚಂ॥ ವನರುಹ ಗರ್ಭನೆಂಬವ[4]ನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂ।
ಗನೆಯಿನದಂತುಟಾದುದೆನೆ ಮತ್ತಿನ ಬೂತು ತಪಂಗಳೆಮ್ಮ ಪು॥
ರ್ವಿನ ಕಡೆಯೊಂದು ಜರ್ವಿನೊಳೆ ತೀರ್ವುವವಲ್ಲದೆ ದೇವ ಬೆಂಬಲಂ।
ಮನಸಿಜನೀಗಳಾಱು ಋತುವುಂ ನೆರವೆಂದೊಡೆ ಸೋಲದಿರ್ಪರಾರ್ ॥ ೮೧ ॥

1. ಲ್ಲಿ (ಕ. ಖ.); 2. ತಕ್ಕಂ (ಗ.); 3. ಟ್ಟ (ಕ.); 4. ನುಮೆಯ್ತ್ತರೆ ಗೆಯ್ದ ತಪಕ್ಕಿದು (ಕ), ನಮೆಯ್ತ್ತರೆ ಗೆಯ್ದ ತಪಂಕಿದೊ (ಖ.), ನಮೆಯಿತರೆ ಗೆಯ್ದ ತಪಂತಿದೊ (ಗ.).

ವ|| ಎಂದು ದೇವಾಪ್ಸರೋವೃಂದಮೆನಿತಾನುಮುಂದದಿಂ ಪುರಂದರನ ಪಕ್ಕದೆ ಪೂಣ್ದು ಬಂದು ಗಗನ ತಳಮೆಲ್ಲಂ ತಮ್ಮ ತೊಟ್ಟ ದಿವ್ಯಾಭರಣ ಕಿರಣಂಗಳೊಳ್ ತೊಳಗಿ ಬೆಳಗೆ ಬಂದು ಮಹೀತಳಕ್ಕವತರಿಸಿ ನದ ನದೀ ಪುಳಿನ ಪರಿಸರ ಪ್ರದೇಶಂಗಳೊಳಂ ಕದಳೀ ವನಂಗಳೊಳಂ ಕನಕ ಲತಾಮಂಟಪಂಗಳೊಳಮಿಡಿ[1]ಡೆಗೊಳೆ ಪೂತ ಮಲ್ಲಿಗೆಯ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ಗಗನ ಗಮನ ಜನಿತ ಶ್ರಮಮನಾ ಗಜಗಮನೆಯರಾಱಿಸಿ ಪಾಲ್ಗಡಲೊಳಮಮರ್ದಿನೊಳಂ ಪುಟ್ಟಿದ ಕಳ್ಳ ಸೊರ್ಕಿನೊಳ್[2]ಮುಂತೆ ನಡುಗುವ ಬಡನಡುಗಳ್ಗೆ ನಡುಕಮುಮನುಂತೆ ಪೊಡರ್ವ ಪುರ್ವುಗಳ್ಗೆ ಪೊಡರ್ಪುಮನುಂತೆ ಸೊಗಯಿಸುವ ಬೆಳರ್ವಾಯ್ಗಳ್ಗೆ ತನಿ[3][ಗೆ]ತ್ತುಮನುಂತೆ ಪೊಳೆವ ನಿಡಿಯುಲರ್ಗಣ್ಗಳ್ಗೆ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗೆ ತೊದಳುಮನೆಕ್ಕೆಯಿಂ ತಳೆಯೆ ನೆಱೆಯೆ ಕೆಯ್ಗೆಯ್ದು ಮುನ್ನಮಾಱುಂ ಋತುಗಳುಮಂ ನಿಮ್ಮ ನಿಮ್ಮ ಸ್ವರೂಪಂಗಳುಮನಾತನಿರ್ದಲ್ಲಿಗೆ ಪೋಗಿ ತೋಱಿಮೆಂದಾಗಳ್—

ಕಂ|| ಆಱುಂ ಋತುಗಳ ಪೂಗಳು |
ಮಾಱುಂ ಋತುಗಳ ಪೊದಳ್ದ ಚೆಲ್ವುಗಳುಮಣಂ ||
ಬೇಱಿಲ್ಲದೊಂದು ಸೂೞ್ ಮೆ |
ಯ್ದೋಱಿದುವೊಡನೊಡನೆ ನೆಲದೊಳಂ ಗಗನದೊಳಂ || ೮೨ ||

ಮೆಯ್ದೋಱೆ[4][ದೊಡ]ವೞೊಡನೆಯೆ |
ಮೆಯ್ದೋಱಲ್ ಬಗೆದನಂಗ ಜಂಗಮ ಲತೆಗಳ್ ||
ಮೆಯ್ದೋಱುವಂತೆ ಮೆಲ್ಲನೆ |
ಮೆಯ್ದೋಱಿದರಮರ ಗಣಿಕೆಯರ್ ವಂದಾಗಳ್ || ೮೩ ||

ಸಮದ ಗಜಗಮನೆಯರ್ಮುಗಿ |
ಲ ಮೇಲೆ ನಡೆಪಾಡುವಾಕೆಗಳ್ ತಮಗೆ ಧರಾ ||
ಗಮನಂ ಪೊಸತಪ್ಪುದಱಿಂ |
ದಮರ್ದಿರೆ ನಡೆ ನಡೆದು ನಡೆಯಲಾಱದೆ ಸುೞಿದರ್ || ೮೪ ||

ಮುಡಿಯ ಕುಚಯುಗದ ಜಘನದ |
ಕಡುವಿಣ್ಪಿಂ ಮಣಲೊಳಟ್ಟುಂಬರೆ ಮೆಲ್ಲಡಿಗಳ್ ||
ನಡೆಯದ ಬೇವಸಮಂ ತಾಂ |
ನಡೆಯಿಸುವಂತವರ್ಗಳೊಯ್ಯನೊಯ್ಯನೆ [5]ನಡೆದರ್ || ೮೫ ||

---

[1]. ದಡೆಲೆ (ಗ. ಘ.); [2]. ಮಂ (ಕ.), ಮಿಂ (ಖ.); [3]. ಗಿ (ಸ.); [4]. ದರ (ಸ.); [5]. ಬಂದರ್ (ಕ. ಖ.).

ಮ॥ ಮುಡಿಯಂ ಸೋಗೆಯೆಗೆತ್ತು ಸೋಗೆ ನಡೆಯಂ ಪೆಣ್ಣಂಚೆಗೆತ್ತಂಚೆ ಮೆ।
ಲ್ನುಡಿಯಂ ಕೋಗಿಲೆಗೆತ್ತು ಕೋಗಿಲೆ ಘನೋತ್ತುಂಗ ಸ್ತನ ದ್ವಂದ್ವದಿ॥
ಟ್ಟಿಡೆಯಂ ಕೋಕಮೆಗೆತ್ತು ಕೋಕಮಳಕಾನೀಕಂಗಳಂ ಸೊರ್ಕಿದಾ।
ಅಡಿಗೆತ್ತಾಅಡಿ ಸುತ್ತುತುಂ ಬರೆ ಬನಂ ಬರ್ಪಂತೆ ಬಂದಾಕೆಗಳ್ ॥ ೮೬ ॥

ವ॥ ಅಂತು ನರೇಂದ್ರ ತಾಪಸನಂ ಸೋಲಿಸಲೆಂದು ಬಂದಾಕೆಗಳ್ ತಾಮೆ ಸೋಲ್ತು ಮುಂದು ಮುಂದನೆ ಸುೞಿಯೆ—

ಚಂ॥ ಮಗಮಗಿಸುತ್ತುಮಿರ್ಪ ಮೃಗನಾಭಿಯ ನೀರ್ದಳಿವಲ್ಲಿ ಕಂಪನಾ।
ಳ್ದಗುೞ್ದಲರುತ್ತುಮಿರ್ಪ ಪದದೊಳ್ ಪದವಟ್ಟು ಪೊದಳ್ದು ತೋರ ಮ॥
ಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯಸಂ।
ದುಗುೞ್ವವೊಲೊಪ್ಪಿರಲ್ ಬಲದೊಳು[1]ರ್ವಸಿ ದೇಸಿಗೆ ದೇಸಿಯಾಡಿದಳ್
॥ ೮೭ ॥

ಪದ ಕೊರಲಿಂಪನಪ್ಪುಕೆಯೆ [2][ಕೊಂಕು ನ]ಯಂ ಗಮಕಂಗಳಿಂ ಪೊದ।
ರ್ಕೊದಳೆೞ[3]ದಿಕ್ಕಿದಂತೆ ಸುತಿಯೊಳ್ ಸಮಮಾಗಿರೆ ಜಾಣನಾಂತು ಮೆ॥
ಚ್ಚಿದ ತೆಱದಾಸೆವಟ್ಟಲ[3]ಸದೆತ್ತಿ[4]ದವೋಲ್ ದೊರೆವೆತ್ತು ದೂಱಿದಾ।
ಱಿದ ದನಿ ಮುಟ್ಟಿ ಮೇನಕೆ ಸರಸ್ವತಿ ಬಾಯ್ದೆಱೆ[3]ದಂತೆ ಪಾಡಿದಳ್ ॥ ೮೮ ॥

ನಡು ನಡುಗಲ್ಕೆ ಪುರ್ವು ಪೊಡರಲ್ಕೆ ಕುರುಳ್ ಮಿಳಿರಲ್ಕೆ ಬಾಯ್ ಬೆಡಂ।
ಗಿಡಿದೆಳಸಲ್ [5][ತೆರಳ್ದು] ತುಡುಕಲ್ಕೆ ತಗುಳ್ದುದು ಕೆಂದನೀಕೆ ಕ॥
ನ್ನಡಿಪಳಿೞ ಪಾಡಿದೀ ನೆವದಿನೆಂಬಿನೆಗಂ ದನಿಯಿಂಪು ಬೀಣೆಯಂ।
ಮಿಡಿದವೊಲಾಗೆ [6]ಗಾನದೊಳೊಡಂಬಡೆ ಮೇನಕೆ ಮುಂದೆ ಪಾಡಿದಳ್
॥ ೮೯ ॥

ಒದವಿದ[7]ಕೆತ್ತ [8]ಕಂಕಣದ ಪುರ್ವಿನ ಜರ್ವು [9]ಲಯಕ್ಕೆ [10]ಲಕ್ಕ ಲೆ।
ಕ್ಕದ [11][ಗ]ತಿ ನಾಟಕಾಭಿನಯಮಾಯ್ತೆನೆ ಗೇಯದೊಳೀಕೆ ಸೊರ್ಕನಿ॥
ಕ್ಕಿದಳೆನೆ [12]ಕಳ್ಗಿ ಚಕ್ಕಣಮೆನಿಪ್ಪುದು [13]ಸಾಗೆನಿಸಲ್ಕೆ ಸಾಲ್ವ ಸ।
ಗ್ಗದ ಪೊಸ ದೇಸಿಯೋಳಿಗಳನೊರ್ವಳೊಱಲ್ದು ನೆಱಲ್ದು ಪಾಡಿದಳ್
॥ ೯೦ ॥

---

1. ರ್ವಸೆ (ಖ. ಗ. ಘ.); 2. ಕುಂಕುಮ (ಕ. ಖ.), ಕೂಂಕುನೆ (ಗ.), ಮುಂಕೊನೆ (ಘ.); 3. ನಿ (ಖ.), ನಿ (ಗ. ಘ.); 4. ದವಲ್ ದೊರಿವೆತ್ತಿ (ಖ.), ದವೆವೊಲೆದೆತ್ತಿ (ಗ.), ರವೆವೊಲ್ ದೊಲೆದೆತ್ತಿ (ಘ.), ಸವಿ ತಲೆದೋರಿ (ಘ§.); 5. ಕೆರಳ್ದು (ಸ.); 6. ರಾಗ (ಕ. ಖ.); 7. ಕಿ (ಖ. ಘ.); 8. ಗೊಂಕಣಯ (ಗ. ಘ.); 9. ನ (ಕ. ಖ. ಘ.); 10. ಲಕ್ಕೆಸ (ಕ.), ಲಕ್ಕೆಲೆ (ಗ.), ಲೆಕ್ಕಲೆ (ಘ.); 11. ದ (ಸ.); 12. ಕಣ್ಗೆ (ಕ.), ಕಳ್ಬೆ (ಖ.), ಕೆಳ್ದೆ (ಘ.); 13. ಸೋ (ಗ. ಘ.).

ಉ|| ಆ[1]ಡದ ಮೆ[2]ಯ್ಗ್ಗಳಿಲ್ಲ ನಿಡುಮೆಯ್ಗ್ಗಳುಮಾಡಿದುವಂತೆ ಮೆಟ್ಟುವಳ್ |
ನೋಡಿದವರೆಲ್ಲರಂ ಪಿಡಿದು ಮೆಟ್ಟಿದಳಿಟ್ಟಳಮಾಯ್ತು ದೇಸಿ ಕೆ ||
ಯ್ಗೂಡಿದುದಿಲ್ಲ ಮಾರ್ಗಮೆನೆ ವಿಸ್ಮಯಮಾಗಿರೆ ತನ್ನ ಮುಂದೆ ಬಂ |
ದಾಡಿದಳಾ ತಿಳೋತ್ತಮೆಯನೊಲ್ದನುಮಿಲ್ಲ ನರೇಂದ್ರ ತಾಪಸಂ || ೯೧ ||

ವ|| ಅಂತಾಕೆಗಳೆಡೆಯಾಡಿಯುಂ ಮನಂಗೊಳೆ ಪಾಡಿಯುಂ ಮನುಜ ಮಾಂಧಾತನಂ ಸೋಲಿಸಲಾಱದೆ ಸಹಜಮನೋಜನ ರೂಪಿಂಗಂ ಸುರತ ಮಕರ ಧ್ವಜನ ಸೌಂದರ್ಯಕ್ಕಂ ಗಂಧೇಭ ವಿದ್ಯಾಧರನ ಗಂಡಗಾಡಿಗಂ ತಾಮೆ ಸೋಲ್ತೆಯ್ದೆವಂದು—

ಕಂ|| ಬೂದಿ ಜೆಡೆ ಲಕ್ಕಣಂ ತಪ |
ಕಾದುವೆರಲ[3]ರ್ದ್ದಣೆ ಶರಾಸನಂ ಕವಚಮಿವೆಂ ||
ತಾದುವೊ ಮುತ್ತುಂ ಮೆಟಿಸುಂ |
ಕೋದಂ[3]ತುಟಿ ನಿನ್ನ ತಪದ ಪಾಂಗೆಂತು ಗಡಾ || ೯೨ ||

ಚಂ|| ಕಡು ತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ ಪೋ |
ನುಡಿಯವೊ ಮೂರ್ಖ ಸಗ್ಗದಫಲಂ ಸುಖಮಲ್ತೆ ಸುಖಕ್ಕೆ ಪೇಱಿಂಡಂ ||
ಬಡದವರಾರೊ ಪೆಂಡಿರೊಳಗಾರ್ ಪೆಱರಾಮೆ ದಲಾಮೆ ಬಂದು ಕಾ |
ಲ್ವಿಡಿದಪೆವಿಂಬುಕೆಯ್ವೊಡಿ[4][ವು] ಮೆಲ್ಲಡಿಗಳ್ [ಗಡ] ಕರ್ಚುಂ ಬೂದಿಯಂ || ೯೩ ||

ಕಂ|| ಕೋಕಿಳ ಕುಳ[5]ಕಳ ಗಳನಿನ |
ದಾಕುಳ ರವ[6]ಮಿಂಪನಾಗಳುಂ ಪಡೆದುದು ನೋ ||
ಡೀಕೆಗಳ ಚಳಿತ ಲುಳಿತ |
ಭ್ರೂಕುಟಿಯೇ ಪರಮ ಸುಖದ ಕೋಟಿಯನೀಗುಂ || ೯೪ ||

ವ|| ಎಂದೆನಿತಾನುಂ ತೆಱದೊಳಱಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಮಚಳಿತ ಧೈರ್ಯನ ಮನಮಂ ಚಳಿಯಿಸಲಾಱದಚ್ಚರಸೆಯರಚ್ಚಿಗಂಗೊಂಡಂತಾಗೆಯುಂ ಗಂಧರ್ವರ್ ಗರ್ವಮನುಱಿದು ಪೋಗೆಯುಂ ಕಾಮದೇವನೇವಮುಂ ಕೆಯ್ಕೊಂಡು ಸೀಂತಂತೆ ಮೊ[7]ಗ ಮಾಡಿ ಪೋಗಿ ದೇವೇಂದ್ರನ ಮೊಗಮಂ ನೋಡಲ್ ನಾಣ್ಚಿರ್ದನಾಗಳಿಂದ್ರಂ

---

1. ಡಿ (ಖ. ಘ.) ; 2. ಯ್ಮೊಳೆ (ಕ.). ಯ್ಗಳೆ (ಗ.), ಯ್ಮಳಿ (ಘ.); 3. ತಿರೆ (ಘ§.) ; 4. ದು (ಸ.) ; 5. ಗಳಕಳ (ಕ. ಖ.) ; 6. ದಿಂ (ಕ. ಖ.) ; 7. ಗಂ ಬಾಡಿ (ಕ. ಖ.), ಗಂ ಮಾಡೆ (ಗ.).

ನರೇಂದ್ರತಾಪಸನ ಧೈರ್ಯಕ್ಕೆ ಮೆಚ್ಚಿ ಧರಾಮರವೇಷದೊಳಿಂದ್ರಕೀಲ ನಗೇಂದ್ರಮನೆಯ್ದೆವಂದು—

ಮ॥ ಸ್ರ॥ ಕಣಿಯಂ ಶೌ[1]ರ್ಯಾಭಿಮಾನಕ್ಕೆಡಱದ ರಿಪು ಸೈನ್ಯಕ್ಕೆ ಸಂಗ್ರಾಮ
ದೊಳ್ ಬ।
ಲ್ಕಣಿಯಂ ಕಲ್ಹಾರ ಸಾರಾಮೃತ ಶಶಿ ವಿಶದಾತ್ಮೀಯ ವಂಶಕ್ಕೆ
ಚೂಡಾ॥
ಮಣಿಯಂ ತೀವ್ರ ಪ್ರತಾಪ ದ್ಯುಮಣಿಯನೆರೆದರ್ಥಿ ವ್ರಜಂಗಳ್ಗೆ ಚಿಂತಾ।
ಮಣಿಯಂ ಸಾಮಂತ ಚೂಡಾಮಣಿಯನಣಿಯರಂ ಬಂದು ಕಂಡಂ
ಸುರೇಂದ್ರಂ ॥೯೫॥

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನ ರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಸಪ್ತಮಾಶ್ವಾಸಂ

———

1. ಚಾ (ಘ§.).

# ಅಷ್ಟಮಾಶ್ವಾಸಂ

ಕಂ॥ ಶ್ರೀಯಂ ಭುಜಬಳದಿಂ ನಿ।
ರ್ದಾಯಾದ್ಯಂ ಮಾಳ್ಪ ಬಗೆಯಿನವಿಕಳ ನಿಯಮ॥
ಶ್ರೀಯನಳವಡಿಸಿ ನಿಂದ ಧ।
ರಾಯುವತೀಶನನುದಾತ್ತ ನಾರಾಯಣನಂ ॥೧॥

ಕಂಡು ನಿಜ ತನಯನಳ[1]ವೆರ್ದೆ।
ಗೊಂಡಿರೆ ಮುದು ಪಾರ್ವನಾಗಿ ಮೆಲ್ಲನೆ ಸಾರ್ವಾ॥
ಖಂಡಳನಂ ಕಾಣಲೊಡಂ।
ಗಾಂಡಿವಿಗಿರದುರ್ಚೆ ಪಾಯ್ದುವಶ್ರುಜಲಂಗಳ್ ॥೨॥

ವ॥ ಅಂತು ಮನದೊಳಾದ ಮೋಹರಸಮೆ ಕಣ್ಣಿಂ ತುಳುಂಕುವಂತೆ ಪೊಱಪೊಣ್ಮುವ ನಯನ ಜಲಂಗಳನುತ್ತರೀಯ ವಲ್ಕಲ ವಸನೋಪಾಂತದೊಳೊತ್ತುತ್ತುಮತಿಥಿಗತಿಥಿ ಸತ್ಕಾರಮೆಲ್ಲಮಂ ನೆಱೆಯೆ ಮಾಡಿದಾಗಳಿಂದ್ರಂ ನರೇಂದ್ರ ತಾಪಸನನಿಂತೆಂದಂ—

ಕಂ॥ ನೀನಾರ್ಗೆ ನಿನ್ನ ಪೆಸರೇ।
ನೀ ನಿಯಮಕ್ಕೆಂತು ಮೆಯ್ಯನೊಡ್ಡಿದೆಯಿದು ದಲ್॥
ತಾನಾಶ್ಚರ್ಯಮಿದೇನ।
ಜ್ಞಾನಿ[2]ಯವೋಲ್ ತಪಕೆ ಬಿಲ್ಲುಮಂಬುಂ ದೊರೆಯೇ ॥೩॥

ವ॥ ಎನೆ ಸಾಹಸಾಭರಣನಿಂತೆಂದಂ—

ಕಂ॥ ನಿನ್ನೆಂದಂತುಟೆ ಮೋಕ್ಷ।
ಕ್ಕೆನ್ನಿರ್ಪಿರವಘಟಮಾನಮೈಹಿಕದ ತೊಡ॥
ರ್ಪೆನ್ನಿರವಿನೊಳುಂಟಱಿಪದೆ।
ನಿನ್ನಂ ಪುಸಿ[3]ಯಾಡಿ ಕಾಡಲೆನಗೇಂ ದೊರೆಯೇ ॥೪॥

ಮ॥ ನಿನಗಂ ಪೇೞ್ವೊಡೆ ಪಾಂಡುರಾಜತನಯಂ ಗಾಂಡೀವಿಯೆಂ ದಾಯಿಗಂ
ಗೆ ನೆಲಂ ಜೂದಿನೊಳೊತ್ತೆವೋಗೆ ಬನಮಂ ಪೊಕ್ಕಣ್ಣನೆಂದೊಂದು ಮಾ॥

---

1. ವಂ । ಕೊಂ (ಕ.), ವ । ಗೊಂ (ಗ.); 2. ಯೊಲ್ ತಪಕ್ಕೆ (ಖ.), ಯೆಯೊಲ್ತಪಕೆ (ಗ.ಘ.); 3. ಮಾ (ಸ.).

ತನಣಂ ವಿಾಱಿದೆ ನಿಂ[1][ದು ಶಂಕರ]ನ ನೀನಾರಾಧಿಸೆಂದಿಂತಿದಂ।
ಮುನಿ ಪಾರಾಶರನೊಲ್ದು ಪೇೞೆ ಹರ ಬರ್ಪನ್ನಂ ತಪಂಗೆಯ್ದಪೆಂ ॥ ೫ ॥*

ವ॥ ಅಂತುಮಲ್ಲದೆ—

ಚಂ॥ [2]ಸ್ಫುರಿತ ತಪೋಮಯಾನಳನಿನೀಯೊಡಲಂ ನೆಗೞ್ದೀ ಗಿರೀಂದ್ರ ಕಂ।
ದರದೊಳಗಿಂತೆ ದಲ್ ಕರಗಿಪೆಂ ಪೆಱತೇಂ ಪಡೆಮಾತೊ ಮೇಣ್ ಪುರಂ॥
ದರನೊಸೆದಿತ್ತುದೊಂದು ಬರದಿಂದುಱಿದೆನ್ನ ವಿರೋಧಿ ವರ್ಗಮಂ।
ಕರಗಿಪೆನಲ್ಲದಿಲ್ಲಿ ಸೆರಗಂ ಬೆರಗಂ ಬಗೆಯೆಂ ದ್ವಿಜೋತ್ತಮಾ ॥ ೬ ॥

ಎನೆಯೆನೆ ರತ್ನ ರಶ್ಮಿ ಜಟಿಳಂ ಮಕುಟಂ ಮಣಿಕುಂಡಳಂ ಕನ।
ತ್ಕನಕ ಪಿಶಂಗ ದೇಹ ರುಚಿ ನೀಳ ಸರೋಜವನಂಗಳಾಗಳು॥
ಳ್ಳನಿತುಮರಲ್ವವೋಲ್ ಪೊಳೆವ ಕಣ್ಗಳುಮಟ್ಕಱನೀಯೆ ವಿಕ್ರಮಾ।
ರ್ಜುನನ ಮನಕ್ಕೆ ತೋಱಿದನಿಳಾಮರನಂದಮರೇಂದ್ರ ರೂಪಮಂ ॥ ೭ ॥

ವ॥ ಅಂತು ತನ್ನ ಸಹಜರೂಪಮಂ ತೋಱಿ ಮನದಟ್ಕಱಿಂ ತೋಱಿಲೆಂದು ಮಗನನಪ್ಪಿಕೊಂಡು—

ಕಂ॥ ಸಾಧಿಸುವೊಡಮರಿ ನೃಪರಂ।
ಸಾಧಿಸುವೊಡಮಸ್ತ್ರಚಯಮನಿನ್ನುಂ ತನುವಂ॥
ಬಾಧಿಸು ತಪೋಗ್ನಿಯಿಂದಾ।
ರಾಧಿಸು ನೀಂ ಮಗನೆ ದುರಿತಹರನಂ ಹರನಂ ॥ ೮ ॥

ಎಂದು ತಿರೋಹಿತನಾಗಿ ಪು।
ರಂದರನುಂ ಪೋದನಿತ್ತ ತಪದೊಳ್ ನರನಿಂ॥
ತೊಂದಿ ನಿಲೆ ತಪದ ಬಿಸುಪಿಂ।
ಬೆಂದಱಿದುದು ವನದೊಳುಳ್ಳ ತಪಸಿಯರ ತಪಂ ॥ ೯ ॥

ಖರಕರ ಕಿರಣಾವಳಿಯುಂ।
ಪರಿದೆಟ್ಟಬಟ್ಟೆದುವು ಪಗಲಿರುಳ್ ಶಶಿರುಚಿಯುಂ॥
ಪರಿಭವಿಸಿ ನಭಮನಡರ್ದುವು।
ನರೇಂದ್ರ ತಾಪಸ ತಪೋಮಯೂಖಾವಳಿಗಳ್ ॥ ೧೦ ॥

---

1. ದಪಂಕವು (ಕ.ಖ.), ದಸಂಕವು (ಗ.ಘ.), ದಸಂಕತ (ಘ§.); 2. ವಿತತ (ಕ.ಖ.ಗ.).

*[ಈ ಪದ್ಯದ ಮೂರನೆಯ ಪಾದದಲ್ಲಿ 'ಶಂಕರನ' ಎಂಬುದು 'ಶಕ್ರನನೆ' ಎಂದೂ ನಾಲ್ಕನೆಯ ಪಾದದಲ್ಲಿ 'ಹರ' ಎಂಬುದು 'ಹರಿ' (=ಇಂದ್ರ) ಎಂದೂ ಇರಬೇಕೆಂದು ಕೆಲವರ ಅಭಿಪ್ರಾಯ. ಈ ವಿಷಯದಲ್ಲಿ ಈ ಗ್ರಂಥದ ಉಪೋದ್ಘಾತವನ್ನು ನೋಡಿರಿ.]

ವ॥ ಅಂತುಗ್ರೋಗ್ರತಪಂಗೆಯ್ಯೆ ತತ್ತಪಸ್ತಪನವಿಪುಳ ಮರೀಚಿಗಳ್ ತಮಗೆ ತಪೋವಿಘಾತಮಂ ಮಾಡುವುದುಮಿಂದ್ರಕೀಲ ನಗೇಂದ್ರದ ತಪೋಧನರೆಲ್ಲಂ ನೆರೆದು ಬಂದು ಕೈಲಾಸದೊಳ್ ವಿಳಾಸಂಬೆರಸು ಗಿರಿಜೆಯೊಳ್ ತಳ್ತಿರ್ದ ಬಾಳೇಂದು ಚೂಡಾಮಣಿಗೆ ಸಾಮಂತ ಚೂಡಾಮಣಿಯ ತಪಃಪ್ರಭಾವಮನಿಂತೆಂದು ಬಿನ್ನಪಂ ಗೆಯ್ದರ್—

ಮಲ್ಲಿಕಾಮಾಲೆ॥ ಆವನೆಂದಱಿಯಲ್ಕೆ ಬಾರದಪೂರ್ವನೊರ್ವನರಾತಿ ವಿ।
ದ್ರಾವಣಂ ತಪಕೆಂದು ನಿಂದೊಡೆ ತತ್ತಪೋಮಯ ಪಾವಕಂ॥
ದಾವ ಪಾವಕನಂತೆವೋಲ್ ಸುಡೆ ಬೆಂದುವೆಮ್ಮ ತಪಂಗಳಿ।
ನ್ನಾವ ಶೈಳದೊಳಿರ್ಪೆವಿರ್ಪೆಡೆವೇಟ ನೀಂ ತ್ರಿಪುರಾಂತಕಾ ॥ ೧೧ ॥

ಕಂ॥ ಆರೋಪಿತ ಚಾಪಂ ಸಂ।
ಧಾರಿತ ಕವಚಂ ಧೃತೋಗ್ರ ಶರಧಿ ಯುಗಂ ತಾ॥
ನಾರಂದಮಲ್ಲವಂ ತ್ರಿಪು।
ರಾರೀ ಕೇಳ್ ತ್ರಿಪುರಮಿಸುವ ನಿನ್ನನೆ ಪೋಲ್ವಂ ॥ ೧೨ ॥

ವ॥ ಎಂಬುದುಮದೆಲ್ಲಮಂ ಕೇಳ್ದಾತನಾವನೆಂಬುದನಱಿಯಲೆಂದು—

ಕಂ॥ ಧ್ಯಾನದೊಳಭವಂ ನೆಱೆದಿನಿ।
ಸಾನುಮನರೆ ಮುಚ್ಚಿ ಕಣ್ಗಳಂ ನಿಶ್ಚಳಿತಂ॥
ತಾನಿರ್ದು ಮಱೆದು ಕೆಂದಿದ।
ಮೀನಂ ತ[1]ಳ್ತಾಡದಿರ್ದ ಮಡುವಂ ಪೋಲ್ತಂ ॥ ೧೩ ॥

ವ॥ ಅಂತು ಪೋಲ್ತು ದಿವ್ಯಜ್ಞಾನದೊಳ್ ಮಹೇಶ್ವರನುದಾರ ಮಹೇಶ್ವರ ನಪ್ಪುದನಱಿದು ಬೆರಲಂ ಮಿಡಿದು ಮುಗುಳ್ನಗೆ ನಕ್ಕು ನೆನೆದಾತಂಗೆ ತಕ್ಕುದ ನಾನೆ ಬಲ್ಲೆನೆಂದು ಮುನೀಂದ್ರ ವೃಂದಮಂ ಪೋಗಲ್ವೇಟ್ಟು ಮುನ್ನ ದೇವೇಂದ್ರಂ ತನಗೆ ಮೂಕದಾನವನ ಪುಯ್ಯಲಂ ಬಿನ್ನಪಂಗೆಯ್ದುದನವಧಾರಿಸಿ ಮೂಕ ದಾನವನಾದಿವರಾಹ ರೂಪದೊಳಿರ್ದುದುಮನಱಿದು ಮನುಜಮಾಂಧಾತನಿಂದ ಮಾ ದೈತ್ಯನಂ ಕೊಲಿಸಲುಂ ಸಾಹಸಾಭರಣನೊಳೇನಾನುಮೊಡಂಬಡಂ ಮಾಡಿ ಮಾಯಾಯುದ್ಧದೊಳಾತನ ಸಾಹಸದ ಚಲದ ಬಲದ ಬಿಲ್ಲಾಳ್ತನದಳವಿಗಳನಳೆದು ನೋಡಿ ವರದನಪ್ಪೆನೆಂಬುದುಮಂ ಬಗೆದು—

1. ಳ್ವಾ (ಖ.ಗ.ಘ.).

ಚಂ॥ ವನಚರನಾಗಿ ಶಂಭು ಗಿರಿಜಾತೆಯನೋತು ಪುಳಿಂದಿ ಮಾಡಿ ನ।
ಚ್ಚಿನ ಗುಹನ ಕಿರಾತಬಲ ನಾಯಕನಾಗಿರೆ ಮಾಡಿ ಭೂತಮು॥
ಳ್ಳನಿತುಮನೆಯ್ದೆ ಬೇಡವಡೆ ಮಾಡಿ ಯುಗಾಂತ ಪಯೋ[1][ಧರಾಳಿ ಭೋಂ।
ಕೆನೆ ಕವಿವಂದದಿಂ ಕವಿದನಾ ಬನಮಂ ಮೃಗಯಾ [2]ಸಿಧಾನಮಂ] ॥೧೪॥

ವ॥ ಅಂತು ಕವಿದೊಡಾ ಕಳಕಳಕ್ಕೇವಯಿಸಿ ವರಾಹ ರೂಪದ ಮೂಕ ದಾನವಂ—

*ತರಳ॥ ಪೊರಳೆ ವಾರಿಧಿಗಳ್ ಕಲಂಕಿದುವು[3][ರ್ದೆ ಮೆ]ಯ್ಯನುದಗ್ರಮಂ।
ದರಮುದಂದಲುಗಿತ್ತು ಬಾ[4][ಯ್ಗೆ]ಯೆ ದಿಗ್ಗಜಂ ಪೆಱಗಿಟ್ಟುವಾಂ॥
[5][ತ]ರದೆ ತೊಟ್ಟನೆ ದಾಡೆಗುಟ್ಟೆ ಕಟಿಲ್ದು ತಾರಗೆಗಳ್ ನಭಂ।
ಬೆರ[6][ಸು] ಬಿಟ್ಟುವು ಪೆಂಪಿದೇಂ ಪಿರಿದಾಯ್ತೊ ದೈತ್ಯವರಾಹನಾ ॥೧೫॥

ವ॥ ಅಂತಾ ವರಾಹನಾದಿವರಾಹನಾದ ಮುರಾಂತಕನುಮನಿೞಿಸಿ [7]ನೆಲ[ಂಕಪ್ಪಂಗ]ವಿಯುಮಾ[8]ಗೆ ಬರೆ ಪೆಱಗೆ ಕೃತಕ ಕಿರಾತನಟ್ಟುತ್ತುಂ ಬರೆ ತನ್ನತ್ತ ಮೊಗದೆ ಬರ್ಪುದಂ ಕಂಡಮೋಘಾಸ್ತ್ರ ಧನಂಜಯನೊಂದಮೋಘಾಸ್ತ್ರ ಮನ[9]ಕ್ಷೂಣ ಬಾಣಧಿಯಿಂದಮುರ್ಚಿಕೊಂಡು ಗಾಂಡೀವದೊಳ್ ಪೂಡಿ—

ಮ॥ ತೆಗೆದೆಚ್ಚರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌ।
ಳಗೆ ಮೋಪಂತಿರೆ ನೋಡ ಸಂಬಳಿಗೆಪೋಯ್ತೆಂಬನ್ನೆಗಂ ಕೊಂಡುದೊ॥
ಯ್ಯಗೆ ಪಾರ್ದೆಚ್ಚ ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು ತೊ।
ಟ್ಟಗೆ ವೈಮಾನಿಕ ಕೋಟಿಗಂದು ಪಿರಿದೊಂದುತ್ಸಾಹಮುಪ್ಪನ್ನೆಗಂ ॥೧೬॥

ವ॥ ಅಂತು ಮೂಕದಾನವನನಾ ನೆವದೊಳೆ ಕೊಂದು ವರಾಹಾರುಣ ಜಲ ಧಾರಾರುಣಮಾಗಿರ್ದಾತ್ಮೀಯ ಬಾಣಮುಂ ಪರಾಕ್ರಮಧವಳನೊಯ್ಯನೆ ಕೊಂಡು ಬಾಣಧಿಯೊಳಿಟ್ಟು ಪೋಗಿ ಪೂಗೊಳದೊಳ್ ಕರ ಚರಣ ಪ್ರಕ್ಷಾಳನಂ ಗೆಯ್ದು ಮುಗುಟ್ದುಮೇಕಪಾದ ತಪದೊಳ್ ನಿಲೆ ಗೀರ್ವಾಣನಾಥಾತ್ಮಜನಲ್ಲಿಗೆ ಗುಹನ ನಹಿಭೂಷಣನಂಬಂ ಬೇಡಿಯಟ್ಟಿದೊಡಾತಂ ಬಂದು—

---

1. ದಮುಬ್ಧಿಯಂ (ಕ.), ಧಿ ವಾರ್ಧಿಯಂ (ಖ.), ದ ವಾರ್ದಿಯಂ (ಗ.), ದ ವಾರ್ಧಿಯಂ (ಘ.); 2. ನಿಮಿತ್ತದಿಂ (ಘ§.); 3. ದ್ದಮ (ಕ,ಗ.), ದ್ಧೆಮ (ಘ.); 4. ಯೆ (ಘ.); 5. ಕ (ಘ.); 6. ಸಿ (ಘ.) ; 7. ನೆಲನ.......ಕವಿಯುಮಾ (ಸ.) ; 8. ಗಿ (ಕ.ಖ.ಗ.) ; 9. ಕ್ಷೀ (ಕ.), ಕ್ಷ (ಖ.).

* ಈ ಪದ್ಯದ ಬಹುಭಾಗವು ಕ. ಗ. ಪ್ರತಿಗಳಲ್ಲಿ ಲೋಪವಾಗಿವೆ; ಖ. ಪ್ರತಿಯಲ್ಲಿ ಪೂರ ಲೋಪವಾಗಿದೆ.

ಚಂ॥ ಗೊರವರ ಬೂದಿಯುಂ ಜಡೆಯುಮಕ್ಕೆ ತಪಕ್ಕೆ ತನುತ್ರಮಿಾ ಭಯಂ।
ಕರ ಧನು ಖಡ್ಗಮತ್ತಪರಮಿಂತೆರಡುಂ ದೊಣೆ ತೀವಿದಂಬುಮೊಂ॥
ದಿರವು ತಪಕ್ಕಿದೆಂತುಟೊ ತಪಂಗಳುಮಿಲ್ಲ[1][ಮವು]ಕ್ಕೊಡೀಗಳೆ।
ಮ್ಮರಸರ ನಚ್ಚಿನೆಚ್ಚ ಶರಮಂ ಸೆರಗಿಲ್ಲದೆ ಕೊಂಡು ಬರ್ಪಿರೇ ॥೧೭॥

ಕಂ॥ ಅಱಿಯದೆ ತಂದೊಡಮೇನೆ।
ಮ್ಮೆಱೆಯಂಗದನೆಮ್ಮ ಕೆಯ್ಯೊಳಟ್ಟಿಂ ನೀಮಿಂ॥
ತಱಿಯುತ್ತುಂ ಪೆಱರೊಡಮೆಯ।
ನುಱ[3] ಸೆಱ[3]ವಿಡಿದಿರ್ಪಿರಿನ್ನ[2]ರುರ್ವಿಯೊಳೊಳ[3][ರೇ] ॥೧೮॥

ವ॥ ಎಂದು ಕಿರಾತದೂತಂ ತನ್ನನತಿಕ್ರಮಿಸಿ ನುಡಿದುದರ್ಕೆ ಮುಳಿದು ಪರಾಕ್ರಮಧವಳನಿಂತೆಂದಂ—

ಕಂ॥ ದಸಿಕೊಂದಕ್ಕುಂ ಬೇಡಂ।
ಗಿಸಲ್ಕೆ ದೊರೆ ಮೃಗಮನೀ ಜಗಂಗಳನಳ್ಳಾ॥
ಡಿಸುವ ಮದೀಯೋಗ್ರಾಸ್ತ್ರಂ।
ಪೆಸರ್ಗೊಳಲೇಂ ತನಗೆ ದೊರೆಯೆ ಖಳನಳವಱಿಯಂ ॥೧೯॥

ಉ॥ ಏ[4]ಱನೆ ಸೂಱ[3]ಗೊಂಡು ನುಡಿವೀ ನುಡಿಯಲ್ಲದೆ ಮತ್ತಮಾಸನಂ।
ದೋಱುವ ಬಲ್ಪುದೋಱುವೆರ್ದೆದೋಱುವ [5]ಕಯ್ಪು ಸರಂಗಳೆಮ್ಮನುಂ॥
ತೇಱವು ಬೇಡ ಬೇಡದಿರು ಬೇಡ ಚಲಂ ಬೆರಸಂಬನಂಬನಿನ್।
ಕಾಱುತೆ ಮೋದಲಾಟಿಪೊಡೆ ನೀಂ ಬರವೇೞ್ಪುದು ನಿನ್ನನಾಳ್ದನಂ ॥೨೦॥

ವ॥ ಎಂದು ಬಂದ ಕಿರಾತದೂತನಂ ವಿಕ್ರಾಂತತುಂಗಂ ಬಗ್ಗಿಸಿದೊಡಾ ಮಾತೆಲ್ಲಮನಾ ಮಾಟ್ಕೆಯೊಳೆ ಪೋಗಿ ಕಪಟ ಕಿರಾತಂಗಱಿಪಿದೊಡಾತನುಂ ಮಾಯಾಯುದ್ಧಮಂ ಪೊಣರ್ಚಲ್ ಬಗೆದು ಹಸ್ತ್ಯಶ್ವ ರಥ ಪದಾತಿ ಬಲಂಗಳ ನೆನಿತಾನುಮನಿದಿರೊಳ್ ತಂದೊಡ್ಡಿದಾಗಳ್ ಪರಸೈನ್ಯಭೈರವಂ ಮಹಾಪ್ರಳಯ ಭೈರವಾಕಾರಮಂ ಕೆಯ್ಕೊಂಡು ಸೆರಗಿಲ್ಲದೆ ಬಂದು ತಾಗಿ—

ಚಂ॥ ಕೆದಱ[3] ಚತುರ್ಬಲಂ ಬೆದಱ[3] ತಳ್ತ ದಟಿಂ ಕೆಡೆದಟ್ಟಿ ತಟ್ಟಿ ಮಾ।
ಣದೆ ಪೆಱಗಿಟ್ಟು ಬಾಯ್ವಿಡೆ ಘಟಾಳಿ ಗುಣಾರ್ಣವನಂಬು ಲಕ್ಕಲೆ॥
ಕ್ಕದೆ ಕೊಳೆ ಚಾತುರಂಗ ಬಲಮಂತಟಿದಟ್ಟಿ ಕನಲ್ದೊನಲ್ದು ಮಾ।
ಣದೆ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ ॥೨೧॥

---

1. ದೊಡು (ಕ.), ದಡು (ಖ.ಗ.ಘ.); 2. ವನ್ನೆಯುಮೊಳ (ಕ.): 3. ವೇ (ಸ.); 4. ಱ (ಖ.ಗ.ಘ.); 5. ಕಾ (ಗ.ಘ.).

ವ॥ ಅಂತು ಶೂನ್ಯಹಸ್ತದೊಳಿರ್ವರುಂ ಪೆಣೆದು ಪಲವುಂ ಗಾಯದೊಳಾಯುಂದಪ್ಪದೆ ಪಿರಿದುಂ ಪೊೞ್ತು [1]ಸಂತರ್ಪಿಸಿನಂ(?) ಪೋರೆ ದೇವರೆಲ್ಲರುಮಂಬರತಳದೊಳಿರ್ದು [2]ತಮ್ಮಂ ನೋೞ್ಪಂತೆ(?) ನೋಡೆ—

ಕಂ॥ ಇಕ್ಕಿದನಭವಂ ಪಾರ್ಥನ।
ನಿಕ್ಕಿದನಾ ತ್ರಿಪುರಹರನನರ್ಜುನನೆನೆ ಗೆ॥
ಲ್ಲಕ್ಕೆ ಮುಡಿ[3]ಗಿಕ್ಕುವಂತೆವೊ।
ಲಿಕ್ಕಿದನವಯವದೆ ನೆಲದೊಳರಿಗಂ ಹರನಂ ॥ ೨೨ ॥

ವ॥ ಅಂತು ನೆಲಕ್ಕಿಕ್ಕಿ ಗಂಟಲಂ ಮೆಟ್ಟಿದಾಗಳ್—

ಕಂ॥ ಪೊಱ[4]ಕಣ್ಗಂ ಮುನ್ನಂ ತಾಂ।
ಮಱಸಿದ ನೊಸಲೊಂದು ಕಣ್ಣುಮಾಗಳ್ ನೊಸಲಿಂ॥
ಪೊಱಮಟ್ಟಂತಿರೆ ತೋಱಿದ।
ನೆಱಕದೆ [5]ಹರಿಗಂಗೆ ರುದ್ರನಗ್ಗಳಗಣ್ಣಂ ॥ ೨೩ ॥

ಉರದೊಳ್ ಫಣಿ ಕರದೊಳ್ ಬಿಲ್।
ಶಿರದೊಳ್ [6][ತೊ]ಱೆ ತೊಱೆಯ ಕೆಲದೊಳೆಸೆದಿರೆ ಪೆಱೆ ಮುಂ॥
ಗೊರಲೊಳ್ ಕಱೆ ಮಱೆಯಿಲ್ಲದೆ।
ದೊರೆಕೊಳೆ ಮೃಡನಡಿಗೆ ಹರಿಗನೆಱಗಿದನಾಗಳ್ ॥ ೨೪ ॥*

ವ॥ ಅಂತೆಱಗಿ ಪೊಡವಟ್ಟು—

ಕಂ॥ ನೀನಪ್ಪುದನಣಮಱಿಯದೆ।
ದಾನವ ಮಾನವ ಸುರೇಂದ್ರ ಮಣಿ ಮಕುಟ ತಟಾ॥
ವ್ಯಾನ ಪದ[ಂ]ಗಾ ನೆಗ[7][ೞ್ದ]ದ।
ನಾನೇ[8][ತ]ಱಿೊಳೆಂತು ನೀಗುವೆಂ ನೀಂ ಬೆಸಸಾ ॥ ೨೫ ॥

ವ॥ ಎಂದು ವಿನಯವಿನಮಿತೋತ್ತಮಾಂಗನಾಗಿ ಕರಕಮಳಂಗಳಂ ಮುಗಿದು ತನ್ನ ಮುಂದಿರ್ದ ಪರಾಕ್ರಮಧವಳನ ಪರಾಕ್ರಮಕ್ಕಂ ವಿನಯಕ್ಕಂ ಮೆಚ್ಚಿ ಮೆಚ್ಚಿದೆಂ ಬರವಂ ಬೇಡಿಕೊಳ್ಳೆನೆ ಮಹಾಪ್ರಸಾದಂ ಪೆಱತೇನುಮನೊಲ್ಲೆನೆನಗೆ ನಿಮ್ಮಡಿ ಪಾಶುಪತಾಸ್ತ್ರಮಂ ದಯೆಗೆಯ್ವುದೆನೆ ನಿನ್ನ ತಪಶ್ಶಕ್ತಿಗಂ ಭಕ್ತಿಗಂ ಮೆಚ್ಚಿತ್ತೆನೆಂದು—

---

[1]. ಸಲ್ತರ್ಪಿನಂ (ಪ.) ; [2]. ಕವುಂ (ಗ.), ಕದನವುಂ (ಘ.) ; [3]. ಯಿ (ಗ.ಘ.) ; [4]. ಮಡೆಕಣ್ಗಳ್ ಮುನ್ನಂ (ಘ§.) ; [5]. ಹರನಿಂದ್ರನಂದನಂಗುರಿ (ಕ.), ಹರಿಗಂದ್ರನಗ್ಗಳಂ ನುರಿ (ಖ.), ಹರಿಗಂ..ದ್ರನಗ್ಗಳ (ಗ.); [6]. ತೆ (ಘ.); [7]. ೞ್ವ (ಘ§.); [8]. ಕ (ಘ§.).

*ಈ ಪದ್ಯವು ಘ. ಪ್ರತಿಯಲ್ಲಿ ಮಾತ್ರವಿದೆ.

ಕಂ॥ ಕ್ಲೇಶದ ಫಳಮೆರ್ದೆಗೊಳ್ಳ[1]ದೆ।
[ಈ]ಶಂ ಮನಮೊಸೆದು ನೆಗಟ್ದ ದಿವ್ಯಾಸ್ತ್ರಮನಾ॥
ಪಾಶುಪತಾಸ್ತ್ರಮನಿತ್ತು ವಿ।
ನಾಶಿತರಿಪುವಕ್ಕೆ ಹರಿಗನೆಂದಂ ದಯೆಯಿಂ ॥ ೨೯ ॥

ವ॥ ಆಗಳೀಶ್ವರಂ ಕೊಟ್ಟುದರ್ಕೆ ತೆಲ್ಲಂಟಿಯೆಂದು ಗೌರಿದೇವಿಯುಮಂಜರಿಕಾಸ್ತ್ರಮೆಂಬವೋಘಾಸ್ತ್ರಮುಂ ವಿಕ್ರಮಾರ್ಜುನಂಗೆ ಕುಡೆ ಮೂವತ್ತುಮೂದೇವರುಂ ತಂತಮ್ಮ ನಚ್ಚಿನಂಬುಗಳಂ ತಂದೀಯೆ ಗುಣಾರ್ಣವಂ ಸಂಪೂರ್ಣಮನೋರಥನಾಗಿರ್ದಾಗಳಿಂದ್ರಂ ಪರಾಕ್ರಮಧವಳನ ಪರಾಕ್ರಮಕ್ಕಮೋಗೆಯ್ವ ತೆಱನುಮಱಿಯದೆಯುಮತಿಸ್ನೇಹದಿಂ ಪುಷ್ಪವೃಷ್ಟಿಯುಮನಾನಂದಬಾಷ್ಪವೃಷ್ಟಿಯುಮನೊಡನೊಡನೆ ಸುರಿದು ಪಲವು ದಿವಸಮುಗ್ರೋಗ್ರ ತಪದೊಳ್ ಮೆಯ್ಯಂ ದಂಡಿಸಿದ ಪರಿಶ್ರಮಂ ಪೋಗೆ ಕೆಲವು ದಿವಸಮನೆಮ್ಮ ಲೋಕದೊಳ್ ವಿಶ್ರಮಿಸಿ ಬರ್ಪೆ ಬಾ ಪೋಪಮೆಂದು ತನ್ನೊಡನೆ ರಥಮನೇಱಿಸಿಕೊಂಡು ಗಗನತಳಕ್ಕೊಗೆದು ತನ್ನಮರಾವತೀಪುರಮನೆಯ್ದಿ ಮಗಂ ಬಂದೊಸಗೆಗೆ ಪೊಟಿಲೊಳಷ್ಟಶೋಭೆಯಂ ಮಾಡಿಸಿ ಪೊಟಿಲಂ ಪೊಕ್ಕಾಗಳ್—

ಮ॥ ಪರಿತಂದಂದಮರಾವತೀ ಪುರ[2]ದ ವಾರಸ್ತ್ರೀಯರೇನೀತನೇ।
ನರನಾ ಖಾಂಡವಮೆಲ್ಲಮಂ ಶಿಖಿಗುಣಲ್ ಕೊಟ್ಟಾತನೀಗಳ್ ಮಹೇ॥
ಶ್ವರನಂ ಮೆಚ್ಚಿಸಿ ಮಿಕ್ಕ ಪಾಶುಪತಮಂ ಪೆತ್ತಾತನೇ ಸಾಹಸಂ।
ಪಿರಿದುಂ ಚೆಲ್ವನುಮಪ್ಪನೆಂದು ಮನದೊಳ್ ಸೋಲ್ತುಟ್ಕಱಿಂ ನೋಡಿದರ್ ॥ ೨೭ ॥

ವ॥ ಅಂತು ನೋಡಿ ಕಡೆಗಣ್ಣ [3]ಚೆಲ್ಲಂಬೆರಸು ಸೂಸುವ ವಾಸವ ಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳನೀಶ್ವರನ[ಂ] ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳುತ್ತುಂ ದೇವರಾಜನೊಡನೆ ದೇವಾಪ್ಸರೋನಿಚಯ ನಿಚಿತಮಪ್ಪ ದೇವ ವಿಮಾನಮಂ ಪೊಕ್ಕಾಗಳ್ ದೇವೇಂದ್ರಂ ತನ್ನೊಡನೆ ಮಜ್ಜನಂ ಬುಗಿಸಿ ದಿವ್ಯಾಹಾರಂಗಳನೊಡನಾರೋಗಿಸಿ ತಂಬುಲಂಗೊಂಡು ತನ್ನ ತುಡುವ ತುಡುಗೆಗಳೆಲ್ಲಮಂ ತುಡಿಸಿ ಕಿರೀಟಿಯಂ ಕೋಟಿ ಮಾಟಿಕ್ಕೆಯಿಂ ಕೊಂಡಾಡಿ ಕೆಲವು ದಿವಸಮನಿರ್ದು ತನಗವಧ್ಯರುಮಸಾಧ್ಯರುಮಾಗಿರ್ದ ನಿವಾತಕವಚ ಕಾಳಕೇಯ ಪೌಲೋಮ ತಳ ತಾಳುಕರೆಂಬಱುವತ್ತು ಕೋಟಿ ರಕ್ಕಸರನೆನಗೆ ಗೆಲ್ದೀಯಲ್ವೇಟ್ಕುಮೆಂದು ಮಾತಳಿಯೆಂಬ ಸಾರಥಿವೆರಸು ವಿವಿಧಾಸ್ತ್ರಗರ್ಭಮಪ್ಪ ರಥಮಂ ಕೊಟ್ಟೊಡದನೇಱಿ ಪೋಗಿ—

---

1. ದುಮೇಶಂ (ಕ.); 2. ಧೊಳಿರ್ಪ (ಕ.), ದ ನೆರದಶ್ರೀ (ಖ.) ದ. ಸ್ತ್ರೀ (ಗ. ಘ.); 3. ಚ (ಕ. ಗ. ಘ.).

ಮ॥ ದನುಜಾನೀಕದ ನಿಂದದೊಂದು ನೆಲೆಯುಂ ಮುಟ್ಟುತ್ತೆ ಮಾದೇವನಿ।
ತ್ತ ನಿಜೋಗ್ರಾಸ್ತ್ರದೆ ದೈತ್ಯರೆಂಬ ಪೆಸರಿಲ್ಲೆಂಬಂತುಟಂ ಮಾಡಿ ಬಂ॥
ದೆನಿತಾನುಂ ಮಹಿಮಾಗುಣಕ್ಕೆ ಕಣಿಯಾಗಿರ್ದೊಂದು ಪೆಂಪಿಂದಮಿಂ।
ದ್ರನೊಳರ್ಧಾಸನಮೇಱಿದೊಳ್ಪು ಹರಿಗಂಗಕ್ಕುಂ ಪೆಱಂಗಕ್ಕುಮೇ ॥ ೨೮ ॥

ವ॥ ಅಂತು ದೇವಲೋಕದೊಳ್ ತನ್ನ ಮಾತೆ ಮಾತಾಗಿರ್ದ ಪರಾಕ್ರಮಧವಳನ ಪರಾಕ್ರಮಕ್ಕಂ ಗಂಡಗಾಡಿಗಂ ರಂಭೆ ಸೋಲ್ತು ಸೈರಿಸಲಾಱದೇಕಾಂತದೊಳ್ ಮೇಲೆ ಬಿೞ್ದೊಡೆ—

ಕಂ॥ ಎಂದು ಪುರಂದರನರಸಿಯ।
ಯಂದು ದಲೆನಗಬ್ಬೆಯೇ ತೊದಳ್ ನುಡಿಯದೆ ಪೋ॥
ಗೆಂದೊಡದೊಂದಬ್ದದೊಳೆ ಬೃ।
ಹಂದಳೆಯಾಗೆಂದು ಮುನಿದು ಶಾಪವನಿತ್ತಳ್ ॥ ೨೯ ॥

ವ॥ ಇತ್ತೊಡೆಂತುಮಾನ್ ಪರಸ್ತ್ರೀಯರ ದೆಸೆಯೊಳಮಣ್ಣನ ನನ್ನಿಯ ವರ್ಷಾವಧಿಯೊಳ್[1][ಮೋತು] ಪಿಡಿ[ವೆಂ] ನಿನ್ನ ನುಡಿಯೊಳೇದೋಷಮೆಂದು ತನ್ನ ಶೌ[2]ಚದ ಮೇಗಣ ಕಲಿತನಮುಮಂ ಸೌಭಾಗ್ಯದ ಮೇಗಣ [3]ಬಲ್ಲಾಳ್ತನಮುಮನಿಂದ್ರಲೋಕದಿಂ ಪೊಗೞಿಸಿ ಸುಖಮಿರ್ಪನ್ನೆಗಮಿತ್ತ ವಿಕ್ರಾಂತತುಂಗನ ತಡೆದುದರ್ಕೆ ಯುಧಿಷ್ಠಿರ ಭೀಮಸೇನ ನಕುಳ ಸಹದೇವರುಂ ದ್ರೌಪದಿ[4]ಯುಂ ವ್ಯಾಕುಳ ಚಿತ್ತರಾಗಿ—

ಸ್ರ॥ ಆ ದಿವ್ಯಾಸ್ತ್ರಂಗಳಂ ಸಾಧಿಸಲೆ ನೆಗೞ್ದ ಪಾರಾಶರಂ ಪೇೞೆ[3] ಮುನ್ನಂ।
ಪೋದಂ ಸಂದಿಂದ್ರಕೀಲಕ್ಕದನಱಿವಮದೇನಾದುದೋ ಕಾರ್ಯಸಿದ್ಧಿ ॥
ಪ್ರಾದುರ್ಭಾವಕ್ಕೆ ವಿಘ್ನಂ ಪಲವೊಳವಱಿಯಲ್ಬ[ರ್ಕು]ಮೇ ಬಾರದಲ್ಲಿಂ।
ಪೋದಂ ವಿಕ್ರಾಂತತುಂಗಂ ಗಡಮದನಱಿಯಲ್ಕಾಗದಿನ್ನೆಲ್ಲಿ ಕಾಣ್ಬಂ ॥ ೩೦ ॥

ವ॥ ಎಂದು ಪೋದ ದೆಸೆಯನಱಿಯದೆ ಚಿಂತಾಕ್ರಾಂತ[5][ರಾ]ಗಿ ಮಾರ್ಕಂಡೇಯನೆಂಬ ದಿವ್ಯ ಜ್ಞಾನಿಗಳ ದಿವ್ಯೋಪದೇಶದೊಳಯ್ವರುಂ ಗಂಧಮಾದನ ಗಿರಿಗೆ ವಂದು ತದ್ಗಿರೀಂದ್ರದೊಳ್ ಭೀಮಸೇನಂ ದ್ರೌಪದಿಯ ಬಯಕೆಗೆ ಧನದನ ಕೊಳದೊಳಗಣ ಕನಕ ಕಮಳಂಗಳಂ ತರಲೆಂದು ಪೋಗಿ—

1. ಮೆಂತುಂ ನುಡಿಯೆಂ (ಕ. ಗ.), ಮೆಂತುಂ ಪಿಡಿಯೆಂ (ಖ. ಘ.); 2. ರ್ಯ (ಕ. ಖ.); 3. ಬಿ (ಕ.); 4. ಯುಮಮಾಳ ವ್ಯಾಕುಳ (ಕ. ಖ. ಗ.), ಯುಂ ಮಾಳವ್ಯಾಕುಳ (ಘ.); 5. ನಾ (ಘ§.).

ಕಂ॥ ಪ್ರಕಟಿತ ಸಾಹಸನಱುವ।
ತ್ತು ಕೋಟಿ ಧನದಾನುಚರರನತಿ ರೌದ್ರಭಯಾ॥
ನಕಮಾಗೆ ಕೊಂದು ಸೌಗಂ।
ಧಿಕ [1][ಕಾಂಚನ] ಕಮಳಹರಣ ಪರಿಣತನಾದಂ ॥ ೩೦ ॥

ವ॥ ಮತ್ತಂ ಜಟಾಸುರನೆಂಬಸುರನನಾ ಗಿರೀಂದ್ರ ಕಂದರದೊಳ್ ಸೀಳ್ದು ಸೀಱುಂಬುಳಾಡಿ ಕೆಲವು ದಿವಸಮನಿರ್ದೊಂದು ದಿವಸಮೊರ್ವನೆ ಬೇಂಟೆಯ ನೆವದಿಂ ದ[ಲ್ಲಿಂ ತಳರ್ದು] ಬಟ್ಟೆಯ ಕಣ್ಣೊಳಡ್ಡಂಬಿಟ್ಟಿರ್ದ ವೃದ್ಧ ವಾನರನಂ ಕಂಡು—

ಚಂ॥ ತೊಲಗೆನೆ ಬಟ್ಟೆಯಿಂ ತೊಲಗಲಾಱೆನಶಕ್ತನೆನಾರ್ಪೊಡೆನ್ನನಿನ್।
ತೊಲಗಿಸಿ ಪೋಗು ನೀನೆನೆ ವೃಕೋದರನೊಯ್ಯನೆ ನಕ್ಕು ಬಾಲಮಂ॥
ಸಲೆ ಮುರಿದೆತ್ತಲಾಟಿಸೆ ಧರಿತ್ರಿಗೆ ಕೀಲಿ[2][ಸಿ]ದಂತುಟಾಗೆ ದೋ।
ರ್ವಲದ ಪೊಡರ್ಪುಗೆಟ್ಟು ನಡೆ ನೋಡಿ ಮರುತ್ಸುತನಂ ಮರುತ್ಸುತಂ ॥ ೩೧ ॥

ಕಂ॥ ನೀನೆಮ್ಮಣ್ಣನೆ ವಂಶದ।
ವಾನರಲ್ಲಯ್ ವಲಂ ಮಹಾಬಲ ಪೇೞೆ॥
ಕೀ ನಗದೊಳಿರ್ದೆಯೆನೆ ತ।
ದ್ವಾನರನಱ್ಕಿರ್ತು ಭೀಮನೆಂಬಂ ನೀನೇ ॥ ೩೨ ॥

ವ॥ ಎಂಬುದುಮಪ್ಪೆನೆಂದೊಡೆ ನಿಮ್ಮಣ್ಣನಪ್ಪಣುಮನೆನಾನಪ್ಪೆನೆಂದು ಪೇೞ್ವುದುಮಾಗಳ್ ಸಾಷ್ಟಾಂಗಮೆಱಗಿ ಪೊಡವಟ್ಟ ಭೀಮಸೇನನಂ ಪರಸಿ—

ಕಂ॥ ಎನ್ನಂತಪ್ಪೊಡವುಟ್ಟಿದ।
ರಿನ್ನಿನಗೊಳ[3]ರಾಗಲಹಿತರಿದಿರಾಂಪರೆ ಪೇೞ್॥
ನಿ[4]ನ್ನಂ ಪಗೆವ[5]ರ ಬೇರೊಳ್।
ಬೆನ್ನೀರಂ ಪೊಯ್ದು ನಿನಗೆ ಮಾೞ್ಪೆಂ ಧರೆಯಂ ॥ ೩೩ ॥

ವ॥ ಎಂಬುದುಂ ಭೀಮಸೇನನಿಂತೆಂದಂ—

ಮ॥ ಬೆಸನಂ ಪೂಣ್ದು ಕಡಂಗಿ ಪಾಯ್ದು ಕಡಲಂ ಮುಂ ಪೂಣ್ದರಂ ಕೊಂದು ಪೊ।
ಕ್ಕು ಸಮಂತಾಗಡೆ ಲಂಕೆಯಂ ಬನಮುನಾಟಂದುರ್ಕೆ ಕಿೞ್ತಿಕ್ಕಿ ಸಂ॥
ತಸಮಂ ಸೀತೆಗೆ ಮಾಡಿ ಸುಟ್ಟು ಪೊೞಲಂ ಕಾಳಾನಳಂಗಿತ್ತು ಬೇ।
ವಸಮಂ ರಾಮ[6][ನಿ]ನುಯ್ದು ನೀಂಬರೆಗಮೇನಾ ಕೌರವರ್ ಗಂಡರೇ ॥ ೩೪ ॥

---

1. ಕಮುಳಾಕರ (ಸ.); 2. ಟ (ಘ೯.); 3. ಗಾ (ಕ. ಖ.); 4. ನ್ನ (ಕ. ಖ. ಗ.)
5. ಡಿ ಯ (ಕ. ಖ. ಘ.), ಡೆಯ (ಗ.); 6. ನ (ಸ.).

ಕಂ॥ ಎನಗೆ ದಯೆಗೆಯ್ವುದೊಂದನೆ।
[1][ಮೊನೆಯೊಳ್] [2]ವಿಜಯಂಗೆ ವಿಜಯಮಾಗಿರೆ [ನೀ]ಮಾ॥
ತನ ಕೇತನದೊಳ್ ಫಣಿಕೇ।
ತನ ಬಲಕುತ್ಪಾತ ಕೇತುವಪ್ಪುದೆ ಸಾಲ್ಗುಂ ॥ ೩೬ ॥

ವ॥ ಎಂದು ಬೇಡಿಕೊಂಡೊಡದೇವಿರಿದಿತ್ತೆನೆಂದಣುವನದೃಶ್ಯ[3]ಮಾದನಾಗಳ್ ಭೀಮಸೇನಂ ಬೀಡಿಂಗೆ ವಂದು ಧರ್ಮಪುತ್ರಂಗಾ ಮಾತೆಲ್ಲಮಂ ಪೇಳ್ದು ವಿಕ್ರಮಾರ್ಜುನನ ಬರವನೆ ಪಾರುತ್ತಿರ್ಪನ್ನೆಗಮಿತ್ತ ವಿಬುಧ ವನ[ಜ ವನ] ಕಳ ಹಂಸನುಂ ಪಲವುಂ ದಿವಸಮುಗಲ್ದಿರ್ದ ತನ್ನೊಡವುಟ್ಟಿದರಂ ನೆನೆದು ಪೋಪೆನೆಂದಿಂದ್ರನಂ ಬೀಳ್ಕೊಂಡು ತನಗೆ ದೇವೇಂದ್ರನಿತ್ತ ಐಂದ್ರಮೆಂಬ ದಿವ್ಯಾಸ್ತ್ರಮುಮಂ ನೈಷ್ಠಿಕಮೆಂಬ ಮುಷ್ಟಿಯುಮಂ ಕೆಯ್ಕೊಂಡು ದೇವಸ್ತ್ರೀಯರ ಮನಮನಿಟ್ಟುಳಿಗೊಂಡಿಂದ್ರಂ ತನ್ನ ಪುಷ್ಪಕಮನೇಱಿಸಿ ಮಾತಳಿಯಂ ಸಾರಥಿಯಾಗಲ್ವೇಳ್ದು ಕಳಿಪೆ ನಾಕಲೋಕದ್ವಾರಮಾಗಿರ್ದ ಗಂಧಮಾದನಗಿರಿಗೆ ವಂದು ಕಾರ್ಗಾಲದ ಬರವಂ ಚಾದಗೆ ಪಾರ್ಪಂತೆ ತನ್ನ ಬರವನೆ ಪಾರುತ್ತಿರ್ದ ಧರ್ಮಪುತ್ರನ ಮರುತ್ಸುತನ ಪಾದಕಮಲಂಗಳಂ ನಿಜ ಮುಕುಟ ಮರೀಚಿಗಳಿಂದಮರ್ಚಿಸಿ ತದೀಯಾಶೀರ್ವಚನಮನಾಂತು ತನಗೆ ಪೊಡವಟ್ಟ ನಕುಳ ಸಹದೇವರಿರ್ವರುಮನಪ್ಪುಱಿಂ ಪರಸಿ ಬಳಿಯಮಿಂದ್ರಕೀಲ ನಗೇಂದ್ರದೊಳೀಶ್ವರನ ವರ ಪ್ರಸಾದದಿಂ ಪಡೆದ ದಿವ್ಯಾಸ್ತ್ರ[4]ಮಂ ತೋಱಿ ತನ್ನನಿಂದ್ರನೊಡಗೊಂಡು ಪೋದುದುಮನಿಂದ್ರಲೋಕದೊಳಾತನಲ್ಲಿ ಪಡೆದ ಮಹಿಮೆಯುಮನಱಿಯೆ ಪೇಳ್ದು ನಾವಿಲ್ಲಿರಲ್ವೇಡ ದ್ವೈತವನದೊಳಿರ್ಪಂ ಬನ್ನಿಮೆಂದು ಮಾತಳಿಯಂ ಬೀಳ್ಕೊಟ್ಟು ಕಳಿಪಿ ನಿಜ ಪರಿಜನ ಸಹಿತಂ ಬಂದು ಸುಖಮಿರ್ಪನ್ನೆಗಮೊಂದು ದೆವಸಮೊಂದು ಮಾಯಾ ಮತ್ತಹಸ್ತಿ—

ಮ॥ ಮುಸಕಂ ಕಾಯ್ಪು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ ಮಾಂ।
ದಿ[5]ಸಿಮಿಾ ವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ ತಾ॥
ಪಸರಂ ಬೆರ್ಚಿಸಿ ತೂಳ್ದಿ ಬೇ[6][ಳ್ವ]ರಣಿಯಂ ಕೊಂಡಾಶ್ರಮಕ್ಕಿಂತು ಬೇ।
ವಸಮಂ ಮಾಡುವುದಾಯ್ತುದೊಂದು ವಿಭವಂ ಮತ್ತೇಭ ವಿಕ್ರೀಡಿತಂ
॥ ೩೭ ॥

ವ॥ ಆಗಳಾ ಮದಾಂಧ ಗಂಧಸಿಂಧುರದ ಕೋಳಾಹಳಮಂ ತಾಪಸರ್ ಬಂದು ಯುಧಿಷ್ಠಿರಂಗಱಿಪಿ ನೀಮೆಮಗದಱ ಕೈಗೆ ಪೋದರಣಿಯಂ ತಂದೀಯ

1. ಮನದಲ್ಲಿ (ಕ.) ; 2. ಕಳಂಕಮಿಲ್ಲದಾಂ ಬೇಡಿದಪೆಂ ವಿಜಯಂಗೆ। ವಿಜಯಮಾಗಿರಿ (ಕ. ಗ. ಘ.); 3. ನಾ (ಕ.) ; 4. ೦ಗಳಿಲ್ಲಮಂ (ಘ§) ; 5. ಸುವರ್ಣಂದುದು (ಖ.ಗ.), ಸುವರ್ಣಂದುದು (ಘ.) ; 6. ಳ್ (ಘ.).

ದಾಗಳಿಪ್ಪಿ ವಿಘ್ನಂಗಳಂ ಮಾಡಿದಿರೆಂದೊಡಯ್ವರುಂ ಪ್ರಚಂಡ ಕೋದಂಡ ಹಸ್ತರ್ ಕಾಳ ಕಾಳಸ್ವರೂಪಮುಂ ಕೆಯ್ಕೊಂಡು ಮದಾಂಧ ಗಂಧಸಿಂಧುರದ ಬೞಿಯಂ ನಿರ್ವಂ[1]ದದಿಂ ತಗುಳ್ವುದುಮಾ ಮಾಯಾ ಮತ್ತಹಸ್ತಿಯುಂ ಮೂಱು ಜಾವಂಬರಂ ರೂಪುದೋಱಿ ಪರಿದು ಬೞಿಯುಮದೃಶ್ಯಮಾದೊಡಯ್ವರುಂ ಚೋದ್ಯಂಬಟ್ಟು ಘರ್ಮ ಕಿರಣ ಸಂತಾಪ ತಾಪಿತ ಶರೀರರೊಂದಾಲದ ಮರದ ಕೆೞಗೆ ವಿಶ್ರಮಿಸೆ ಧರ್ಮಪುತ್ರಂ ನೀರಡಸಿ ಸಹದೇವನನೆಲ್ಲಿಯಾದೊಡಂ ನೀರಂ ಕೊಂಡು ಬೇಗಂ ಬಾಯೆಂದು ಪೇೞ್ವುದುಮಂತೆ ಗೆಯ್ವೆನೆಂದು ಕೂಜಜ್ಜಳಚರ ಕುಳ ಕಳ ರವದೊಳಂ ಕಮಳ ಕುವಳಯ ರಜಃ ಕಷಾಯ ಪರಿಮಿಳದಳಿಪಟಳ ಜಟಿಳಮಾಗಿ ಬಂದು ತೀಡುವ ಮಂದಾನಿಳನಿಂ ನೀರ ದೆಸೆಯನಱಿದು ಪೋಗೆವೋಗೆ—

ಕಂ || ಬಕ ಕಲಹಂಸ ಬಲಾಕ |
ಪ್ರಕರ ಮೃದು ಕ್ವಣಿತ ರಮ್ಯಮಿದಿರೊಳ್ ತೋಱಿ ||
ತ್ತು ಕೊಳಂ ಪರಿ ವಿಕಸಿತ ಕನ |
ಕ ಕಂಜ ಕಿಂಜಲ್ಕ ಪುಂಜ ಪಿಂಜರಿತ ಜಳಂ || ೩೮ ||

ವ || ಅಂತು ಸೊಗಯಿಸುವ ಸರೋವರಮುಂ ಕಂಡು ತಾನುಂ ನೀರಡಸಿದ ನಪ್ಪುದಱಿಂದದಱ ಕೆಲದ ಲತೆಯ ಮೆಳೆಯೊಳ್ ಬಿಲ್ಲುಮಂಬುಮಂ ಸಾರ್ಚಿ ಕೊಳನಂ ಪೊಕ್ಕು ಕರ ಚರಣ ವದನ ಪ್ರಕ್ಷಾಳನಂಗೆಯ್ದು ನೀರಂ ಕುಡಿಯಲೆಂದು ನಿಜಾಂಜಲಿ ಪುಟಮುಂ ನೀಡಿದಾಗಳೊಂದು ದಿವ್ಯ ವಚನಮಾಕಾಶದೊಳ್—

ಕಂ || ತೋಯಜ ಷಂಡಮನಿದನಾ |
ನಾಯುತಿಯಿಂ ಕಾವೆನೆನ್ನ ಮಾತಿಂಗೆಲೆ ಕೌಂ ||
ತೇಯ ಮಱುಮಾತನಿತ್ತು ಮ |
ದೀಯ ಸರೋವರದ ತೋಯಮುಂ ಕುಡಿ ಕೊಂಡುಯ್ || ೩೯ ||

ವ || ಎಂಬುದುಮಾ ದಿವ್ಯ ವಚನಮನುಲ್ಲಂಘಿಸಿ ನೀರಟ್ಟಿ ಪೋಪಿನಂ ನೀರಂ ಕುಡಿದು ಪದ್ಮ ಪತ್ರೌಘಂಗಳಿಂ ತಮ್ಮಣ್ಣಂಗೆ ನೀರಂ ತೀವಿಕೊಂಡು ಸರೋವರದಿಂ ಪೊಱಮಟ್ಟೊಂದೆರಡಡಿಯನಿಡುತೆ ಗತಪ್ರಾಣನಾಗಿ ಬಿೞ್ದಿರ್ದನಿತ್ತ ಧರ್ಮಪುತ್ರಂ ಸಹದೇವಂ ತಡೆದುದರ್ಕುಮ್ಮಳಿಸಿ ನಕುಲನ ಮೊಗಮುಂ ನೋಡಿ ಸಹದೇವನ ನೊಡಂಗೊಂಡು ನೀರಂ ಕೊಂಡು ಬೇಗಂ ಬಾಯೆಂದು ಪೇೞ್ದೊಡಂತೆ ಗೆಯ್ವೆನೆಂದು ಸಹದೇವನ ಪೋದ ಪಜ್ಜೆಯನೆ ಪೋಗಿ ಕೊಳದ ತಡಿಯೊಳ್ ಬಿೞ್ದಿರ್ದ ತಮ್ಮನಂ ಕಂಡು ಚೋದ್ಯಂಬಟ್ಟು—

1. ದಂ ಮಾೞ್ಪುದುಂ (ಕ.), ದದಿಂ ಮಾೞ್ಪುದುಂ (ಗ.).

ಕಂ॥ ತಾನುಂ ಸರೋಜ ಷಂಡಮು।
ನಾನತ ರಿಪು ಪೊಕ್ಕು ದಿವ್ಯ ವಚನಮುನದನಂ॥
ತೇನುಂ ಬಗೆಯದೆ ಕುಡಿದ।
ಜ್ಞಾನತೆಯಿಂ ನಂಜುಗುಡಿದರಂತಿರೆ ಕೆಡೆದಂ ॥ ೪೦ ॥

ವ॥ ಅನ್ನೆಗಂ ಯಮನಂದನನಿರ್ವರ ಬರವುಮಂ ಕಾಣದೆ ಶಂಕಾಕುಳಿತ ಚಿತ್ತನಾಗಿ ಕಿರೀಟಿಯುಂ ಬೇಗಂ ಪೋಗಿ ನೀನಾ ಕೂಸುಗಳನೊಡಂಗೊಂಡು ನೀರಂ ಕೊಂಡು ತಡೆಯದೆ ಬಾಯೆಂಬುದುಮಂತೆ ಗೆಯ್ವೆನೆಂದು ಬಂದು ಕೊಳನ ತಡಿಯೊಳಚೇತನರಾಗಿ ಬಿೞ್ದಿರ್ದ ತಮ್ಮಂದಿರಿರ್ವರುಮಂ ಕಂಡು ವಿಸ್ಮಯಂಬಟ್ಟು—

ಕಂ॥ ಆ ಕಮಳಾಕರಮಂ ಪೊ।
ಕ್ಕಾಕಾಶ ಧ್ವನಿಯ[1]ನುಱದೆ ಕುಡಿದರಿ ಭೂಪಾ॥
ನೀಕ ಭಯಂಕರನುಂ [2]ಗಡ।
ಮೇಕೆಂದಱಿಯೆಂ ಬೞಲ್ದು ಜೋಲ್ದಂ ಧರೆಯೊಳ್ ॥ ೪೧ ॥

ವ॥ ಅನ್ನೆಗಮತ್ತ ಯಮನಂದನಂ ಮೂವರ್ ತಮ್ಮಂದಿರ ಬರವಂ ಕಾಣದೆ ಭಗ್ನಮನನಾಗಿ ಭೀಮಸೇನನಂ ನೀಂ ಪೋಗಿ ಮೂವರುಮನೊಡಂಗೊಂಡು ನೀರಂ ಕೊಂಡುಬಾಯೆಂದೊಡಂತೆ ಗೆಯ್ವೆನೆಂದು ವಾಯುವೇಗದಿಂ ಬಂದು ಪುಂಡರೀಕ ಷಂಡೋಪಾಂತದೊಳ್ ವಿಗತಜೀವಿತರಾಗಿರ್ದ ಮೂವರನುಜರುಮಂ ಕಂಡಿದು ಮನುಜರಿಂದಾದುಪದ್ರವಮಲ್ಲಮೇನಾನುಮೊಂದು ದೇವತೋಪದ್ರವಮಾಗಲೆ ವೇೞ್ಕುಮೆಂದು—

ಕ॥ ಬಿಡದೆ ಕ[3]ಡುಕೆಯ್ದು ದಿವ್ಯದ।
ನುಡಿಗೆ ಕಿವುೞ್ಕೇಳ್ದು ಕುಡಿದು ನೀರಂ ಭೀಮಂ॥
ಪಿಡಿದ ಗದೆವೆರಸು ಭೋಂಕೆನೆ।
ಕೆಡೆದಂ ಗಿರಿ ಶಿಖರದೊಡನೆ ಕೆಡೆವಂತಾಗಳ್ ॥ ೪೨ ॥

ವ॥ ಅಂತು ನಾಲ್ವರುಂ ವಿಳಯ ಕಾಲ ವಾತಾಹತಿಯಿಂ ಕೆಡೆದ ಕುಲಗಿರಿಗಳಂತೆ ಕೆಡೆದು ವಿಗತ ಜೀವಿತರಾಗಿರ್ದ ಪದದೊಳತ್ತ ದುರ್ಯೋಧನನ ಬೆಸದೊಳಾತನ ಪುರೋಹಿತಂ ಕನಕಸ್ವಾಮಿಯೆಂಬಂ ಪಾಂಡವರ್ಗಾಭಿಚಾರಮಾಗೆ ಬೇಳ್ವ ಬೇಳ್ವೆಯ ಕೊಂಡದೊಳಗಣಿಂದಮಂಜನ ಪುಂಜದಂತಪ್ಪ ಮೆಯ್ಯುಂ ಸಿಡಿಲನಡಸಿದಂತಪ್ಪ ದಾಡೆಯುಮುರಿಯುರುಳಿಯಂತಪ್ಪ ಕಣ್ಣುಂ ಕೃತಾಂತನಂತಾಕಾರಮಾಗಿ ತೞತೞಿಸಿ ಪೊಳೆವ ಕತ್ತಿಗೆಯುಂ ಬೆರಸು ಪೊಱಮಟ್ಟು [4]ಕೀರ್ತಿಗೆಯೆಂಬುಗ್ರ

[1]. ಮಱಿದೆ (ಕ.), ಮರದೆ (ಖ.) ; [2]. ಕ (ಖ.), ತ (ಗ.ಘ.); [3]. ಡಿ (ಖ. ಗ. ಘ.); [4]. ಕೃತ್ತಿಯೆಂ (ಘ.).

ದೇವತೆ ಬೆಸಸು ಬೆಸಸೆಂದು ಬೆಸನಂ ಬೇಡೆ ಪಾಂಡವರನೆಲ್ಲಿವೊಕ್ಕೊಡಂ ಕೊಲ್ಲೆಂದೊಡಂತೆ ಗೆಯ್ವೆನೆಂದು ಪೋಗೆಲ್ಲಿಯುಮಱಸಿ ಕಾಣದೆ ಕೊಳನ ತಡಿಯೊಳ್ ಬಿಟ್ಟಿರ್ದ ನಾಲ್ವರುಮಂ ಕಂಡು ಬಾಪ್ಪು ಬಱ್ದಿನೆಂದು ತಿನಲ್ ಸಾರ್ವಾಗಳ ವರ್ಗಳ್ಗನಿತಂ ಮಾಡಿದ ದೈವಂ ಪ್ರತ್ಯಕ್ಷಮಾಗಿ ಗಜಱಿ ಗರ್ಜಿಸುತ್ತುಂ ಬಂದು—

ಕಂ॥ ಎಲೆ [1]ಪಿಱಿತಿನಿ ಪೋ ಮುಟ್ಟದೆ ।
ತೊಲಗೀ ನಾಲ್ವರ್ಕಳಸುವನವರ್ಗಳ ಮೆಯ್ಯಿಂ ॥
ತೊಲಗಿಸಿ [2]ಮುನ್ನಮೆ ಕಾದಿ ।
ರ್ದಲಂಘ್ಯ ಬಲನೆನಿಸಿದೆನಗೆ ನೀನಗ್ಗಳಮೇ ॥ ೪೩ ॥

ವ॥ ಅದಲ್ಲದೆಯುಂ ನೀನೆ ಜಾತಿದೇವತೆಯಪ್ಪೊಡೆನ್ನೆಂಜಲನೆಂತು ತಿಂಬೆಯೆಂಬುದುಂ ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆ ವಂದರೆನಗಮಾ ಬೆಸಂ ತಪ್ಪಿದುದಾನಾರಾಂ ತಿಂಬೆಂ ಪೇೞೆನೆ ನಿನ್ನನಾವನೊರ್ವನಕಾರಣಂ ಪುಟ್ಟಿಸಿದನಾತನನೆ ತಿನ್ನೆಂಬುದುಮಂತೆ ಗೆಯ್ವೆನೆಂದು ಪೋಗಿ—

ಕಂ॥ ಕನಕನ ಬೇಳ್ವೆ ತಗುಳ್ದುದು ।
ಕನಕನನೆಂಬೊಂದು ಮಾತು ಧರೆಗೆಸೆಯೆ ಸುಯೋ ॥
ಧನನ ಪುರೋಹಿತನಪ್ಪಾ ।
ಕನಕಸ್ವಾಮಿಯನೆ ಮುನಿದು [3]ಕೀರ್ತಿಗೆ ತಿಂದಳ್ ॥ ೪೪ ॥

ವ॥ ಅನ್ನೆಗಮಿತ್ತ ಕೃತಾಂತನಂದನಂ ತನ್ನ ನಾಲ್ವರ್ ತಮ್ಮಂದಿರುಂ ಬಾರದೆ ತಡೆದುದರ್ಕೆ ಚಿಂತಾಕ್ರಾಂತನಾಗಿ—

ಕಂ॥ ಪೋದರನೊಡಗೊಂಡು ಬರಲ್ ।
ಪೋದರುಮಾ ಪೋದ ಪೋಗೆ ಪೋದರ್ ತಡೆಯಲ್ ॥
ಪೋದವರಲ್ತೆಂದು ಮನಃ ।
ಖೇದಂಬೆರಸೆಯ್ದೆವಂದನಬ್ಜಾಕರಮಂ ॥ ೪೫ ॥

ವ॥ ಅಂತೆಯ್ದೆವಂದು ಬಱಸಿಡಿಲ್ ಪೊಡೆಯೆ ಕೆಡೆದ [4]ಶಾಲ ತರುಗಳಿರ್ಪಂತಿರ್ದ ನಾಲ್ವರ್ ತಮ್ಮಂದಿರುಮಂ ಕಂಡು ಬೆಕ್ಕಸಂಬಟ್ಟು—

---

1. ಪ (ಖ. ಗ. ಘ.) ; 2. ದೆಮುಗಾ...ದಿ (ಕ.), ನಮುಗಾ....ದಿ (ಖ.), ನಮುಕಾ ...ದಿ (ಗ. ಘ.) ; 3. ಕೃತ್ತಿಗೆ (ಖ. ಗ. ಘ.) ; 4. ವಿಶಾಳ (ಕ. ಖ. ಗ.),

ಕಂ || ಆರಿಂದಮಿವರ್ಗಿದಾಯ್ತೆಂ|
ದಾರಯ್ವಂ ಬಱಿಯಮಾದೊಡೇನಾಯ್ತೆಂದಂ ||
ಭೋರುಹ ರಜಃ ಪ[1]ಟಾವೃತ |
ವಾರಿಯನಾ ನೃಪತಿ ಕುಡಿಯಲೊಡರಿಸಿದಾಗಳ್ || ೪೬ ||

ಮರುಳಾಗದೆನ್ನ ನುಡಿಗು |
ತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗು ||
ತ್ತರಿಸುಗುಮಂತಲ್ಲ[2][ದಿವಂ |
ದಿ]ರಂತೆ ನೀನುಂತೆ ಮೂರ್ಖನಾಗದಿರರಸಾ || ೪೭ ||

ವ || ಎಂಬುದುಮೆನ್ನ ತಮ್ಮಂದಿರ್ಗಿನಿತಂ ಮಾಡಿದ ದಿವ್ಯಮಿಾ ದಿವ್ಯಮಕ್ಕು ಮೆಂದದಱ ಬೆಸಗೊಂಡುದರ್ಕೆಲ್ಲಂ ಮಱುಮಾತುಗುಡುವುದುಂ ಮೆಚ್ಚಿ ತನ್ನ ಸ್ವರೂಪಮಂ ತೋಱಿ—

ಚಂ || ಕನಕನ ಬೇಳ್ವೆಯಿಂದೊಗೆದ ಕೀರ್ತಿ[3]ಗೆಯಿಂ ನಿನಗಪ್ಪಪಾಯಮಂ |
ನೆನೆದು ಮದೇಭ ರೂಪಮನೆ ತೋಱಿ ನಿಜಾಶ್ರಮದಿಂದಗಲ್ಚಿ ನಿ ||
ನ್ನನುಜರನೀಯುಪಾಯದೊಳೆ [4]ಕೀರ್ತಿಗೆಯೊಡ್ಡಿಸೆ ಕಾದೆನಾಂ ಕೃತಾಂ |
ತನೆನೆನಗಮ್ಮ ನೀಂ ಮಗನಯಿನ್ ಪೆಱತೇಂ ನಿನಗುತ್ತರೋತ್ತರಂ || ೪೮ ||

ವ || ಎಂದು ಮಱ[5]ಕೆಂದಿದರನೆತ್ತುವಂತೆ ನಾಲ್ವರುಮನೆತ್ತಿ ತಾಂ ಮುನ್ನಂ ತಂದರಣಿಯುಂ ಕೊಟ್ಟು ಕೃತಾಂತನಂತರ್ಧಾನಕ್ಕೆ ಸಂದಂ ಧರ್ಮತನೂಜನನು ಮನುಜರ್ ಸಹಿತಂ ನಿಜ ನಿವಾಸಕ್ಕೆ ವಂದರಣಿಯಂ ಪಾರ್ವರ್ಗೆ ಕೊಟ್ಟು ಕೆಲವು ದಿವಸಮಿರ್ದು ಧೌಮ್ಯ ಪುರೋಹಿತಂಬೆರಸಯ್ವರುಮಾಳೋಚಿಸಿ—

ಚಂ || ನೆಱ[3]ದುವು ಪನ್ನೆರ[6]ಟ್ಬರಿಸಮುಗ್ರ ವಿರೋಧಿ ಜನಕ್ಕೆ ಮಿಟ್ಟುಗಳ್ |
ನೆಱ[3]ವವೊಲಾಗದಿನ್ನಱಿದಿರಲ್ ನಮಗಬ್ದಮನೊಂದನಿರ್ದೊಡೇ ||
ತಱ ಪಡೆಮಾತೊ ಮತ್ತಮಿರವೇಟ್ಪುದು ಪನ್ನೆರಡಬ್ದಮಂ ಮನಂ |
ಮಱುಗೆ ಬನಂಗಳೊಳ್ ನುಡಿದ ನನ್ನಿಗೆ ಪೇಱಮಿದರ್ಕೆ ಕಜ್ಜಮಂ || ೪೯ ||

ವ || ಎನೆ ಯಮನಂದನನಿಂತೆಂದಂ—

---

1. ಟಲ (ಕ.), ಟ (ಖ. ಗ.) ; 2. ದೊಡೀ | ಪರರಂತೆಯೆ ನೀನುಮೊಯ್ಕ (ಕ.), ದೊಡಿ | ವರರಂತೆ ನೀನು ಮೂರ್ಖ (ಖ), ದೊಡಿ | ವರಂತೆ ಮೂರ್ಖ (ಗ. ಘ.) ; 3. ಕೆ (ಖ. ಗ. ಘ.) ; 4. ಕೃತ್ತಿಕೆ (ಖ. ಗ. ಘ.); 5. ಸೊಂ (ಕ.), ದೊಂ (ಖ.); 5. ಳ್ವರುಷ (ಖ. ಗ. ಘ.).

ಮ || ಅಪವಾದಂ ಪೆಱತೊಂದುಮಿಲ್ಲ ನಮಗಿನ್ನುಂ ಪೊಕ್ಕಿರಲ್ಕಿಂಬು ಮ |
ತ್ಸ್ಯಪುರಂ ಶತ್ರುಗೆ ಶತ್ರು ಮತ್ಸ್ಯನದಱಿಂದಜ್ಞಾತವಾಸಕ್ಕೆ ಚಿಂ ||
ತಿಪೊಡಿನ್ನನ್ನವು ತಾಣಮಿಲ್ಲದಱಿನುಂತಾರ್ಗಪ್ಪೊಡಂ ಮಿಕ್ಕ ರೂ |
ಪ ಪರಾವರ್ತನದಿಂ ವಿರಾಟಪುರಮಂ ಪೊಕ್ಕಿರ್ದದಂ ನೀ[1]ಗೆಮೋ || ೫೦ ||

ವ || ಎಂದು ಯುಧಿಷ್ಠಿರಂ ನಿಶ್ಚಿತಕಾರ್ಯಮನನುಷ್ಠಿಸೆ ನಿಜ ಪರಿಜನಮೆಲ್ಲಮನೀಯೊಂದು ವರುಷಮುಂ ನಿಮ್ಮ ನಿಮ್ಮ ಬಲ್ಲಂದದೊಳಿರಿಮೆಂದು ಧೌಮ್ಯ ಸಮೇತಂ ಪೋಗಲ್ವೇಳ್ದು ತಮ್ಮಯ್ವರುಂ ಪಾಂಚಾಳಿವೆರಸು ಪೋದ ದೆಸೆಯನಾರುಮಱಿಯದಂತು ದ್ವೈತವನಮಂ ಪೊಱಮಟ್ಟು ಜಗುನೆಯಂ ಪಾಯ್ದು ಮೂಡ ಮೊಗದೆ ಪಯಣಂಬೋಗಿ ಮತ್ಸ್ಯದೇಶಮಂ ಪುಗುತಂದರದೆಂತಪ್ಪುದೆಂದೊಡೆ—

ಕಂ || ಇಂಚೆಯ ಪಸವಿನ ಬಱದ ಕ |
ಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ||
ಮುಂಚದೆ ಪಿಂಚದೆ ಬಳೆದು ವಿ |
ರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್ || ೫೧ ||

ವ || ಆ ನಾಡಂ ನಾಡಾಡಿಯಲ್ಲದೆ ಮೆಚ್ಚುತ್ತುಂ ಬಂದು—

ಕಂ || ಧ್ವನದಳಿಕುಳಾಕುಳೀಕೃತ |
ವನಂಗಳಿಂ[2]ದೆಸೆ[ವ ಪದ್ಮಷಂಡಂ]ಗಳ ಚೆ ||
ಲ್ವಿನೊಳಂ ಕಣ್ಣಂ ಮನಮುಮ |
ನನುವಿಸುವ ವಿರಾಟಪುರಮನೆಯ್ದಿದರವರ್ಗಳ್ || ೫೨ ||

ವ || ಅಂತೆಯ್ದಿವಂದು ತಮ್ಮ ದಿವ್ಯಾಯುಧಂಗಳನೆಲ್ಲಮನಾ ಪುರೋಪವನದ ಪಿತೃವನದ ಕೆಲದ ಶಮೀವೃಕ್ಷದ ಮೇಲೆ ಪುರುಷಾಕೃತಿಯಾಗಿ ನೇ[3][ಲ್ಗ]ಟ್ಟಿ ಕೆಲ[4][ದ] ಪೆಣಂಗಳೆಲ್ಲಮನವಱ ಮೇಲೊಟ್ಟಿ ಪ[5]ರೆದೋರೊರ್ವರೊಂದೊಂದು ಬಟ್ಟೆಯೊಳ್ ಪೋಗಿ ಬೇಱ[5]ವೇಱ[3] ಪೊಟಲಂ ಪೊಕ್ಕು ಧರ್ಮಪುತ್ರಂ ಧರಾಮರ ವೇಷದೊಳ್ ವಿರಾಟನಂ ಕಂಡಾಶೀರ್ವಾದಮಂ ಕುಡೆ ವಿರಾಟಂ ನೀಮೆತ್ತಣಿಂ

---

[1]. ಗುವಂ (ಕ.); [2]. ದೆಸೆಯ ಚೆಲ್ವು ಚೆಲ್ವಿನೊಳಂ ಕ| ಣ್ಮನಮುಮನಗಿಯಿಸುವ ವಿರಾ| ಟನ ಪುರ[ಮಂ ಹೃದಯಹರ] (ಕ.), ಖ. ದಲ್ಲಿಯೂ ಸುಮಾರು ಹೀಗೆಯೇ ಇದೆ. ವರ ಸರೋವರಂಗಳಿನೆರ್ದೆಯುಂ| ಮನಮುಂ ಬಗೆಯುಂ ಕಣ್ಣುಮ| (ಘ§.); [3]. ಲಗ (ಘ§.); [4]. ದೊಳ್ (ಘ§.); [5]. ಱ (ಕ. ಗ.), ರ (ಖ.).

ಬಂದಿರೆಂಬುದುಮಾಂ ಧರ್ಮರಾಜನ ಸಮೀಪದೊಳಿರ್ಪವರಸಂಗೆ ಪೊೞ್ತು ಪೋಗದಾಗಳೆಮ್ಮೊಡನೆ ನೆತ್ತಮನಾಡುವನದಲ್ಲದೆಯುಂ—

ಕಂ|| ಕನವರಿಸೆ ನಾಲ್ಕು ವೇದಮು |
ಮೆನಗೆ ಮುಖೋದ್ಗತಮದಲ್ಲದಾಱಿಂಗದ ಮಾ ||
ತನಿತೆ ಗಡ ನೃಪತಿ ಬಂದೆಂ |
ನಿನಗಾಳಾಗಲ್ಕೆ ಕಂಕಭಟ್ಟನೆನೆಂಬೆಂ || ೫೩ ||

ವ|| ಎಂಬುದುಂ ವಿರಾಟನಾತನ ಭದ್ರಾಕಾರಮುಮಂ ಮೃದು ಮಧುರ ಗಂಭೀರ ವಾಣಿಯುಮಂ ಕಂಡು ಕರಂ ಮನದೆಗೊಂಡು ಕರಮೊಳ್ಳಿತೆಂದು ಕಂಕಭಟ್ಟನನಿರಿಸಿದನನ್ನೆಗಂ ಭೀಮಸೇನನುಂ ಬೋನ[1]ವೇಳಿಗೆಯುಂ ಸಟ್ಟುಗಮುಮನೊರ್ವ ಪರಿಛಾರಕನಿಂ ಪಿಡಿಯಿಸಿಕೊಂಡು ಬಂದು ನಿಂದನಂ ಕಂಡು ವಿರಾಟಂ ನಿನ್ನ ಬಿನ್ನಾಣಮೇನೆಂದು ಬೆಸಗೊಳೆ—

ಕಂ|| ಎನ್ನಟ್ಟಡುಗೆಯನುಂಡೊಡೆ |
ಬಿನ್ನಣಮೇನರಸ ನರೆಗಳಾಗವು ಸವಿಯೊಳ್ ||
ನಿನ್ನಂ ಮೆಚ್ಚಿಪೆನೆಡ[2]ಱಿದೊ |
ಡೆನ್ನರೊಳಂ ಮಲ್ಲ[3]ನೊರ್ವ ವಲ್ಲಲನೆಂಬೆಂ || ೫೪ ||

ವ|| ಎಂಬುದುಂ ನಿನ್ನನಾಳ್ವೆನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ದನನ್ನೆಗಂ ನಕುಳನುಮಂಕವಣಿಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೇೞಾಳಿಂ ಪಿಡಿಯಿಸಿಕೊಂಡು ಬಂದು ವಿರಾಟನಂ ಕಂಡೆಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲೆನೆಂದು [4]ಪೇೞ್ದಾಳಾಗಿ ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದಂ ಸಹದೇವನುಂ ಗೋಪಾಳ ವೇಷದೊಳ್ ಬಂದು ಕಂಡವನ ಗೋಮಂಡಳಾಧ್ಯಕ್ಷನಾಗಿರ್ದಾಗಳ್—

ಮ|| ಎಳೆಯಂ ವಿಕ್ರಮದಿಂ ತರಲ್ ಮಹಿಧರಂ ಮುನ್ ಪಂದಿಯಾದಂತೆ ಪೋ |
ದೆಳೆಯಂ ದಾಯಿಗರಂ ಪಡಲ್ವಡಿಸಿ ಕೊಂಡಾಳಲ್ಕಮಾದೇವದಿಂ ||
ಮುಳಿಸಿಂ ರಂಭೆಯ ಕೊಟ್ಟ ಶಾಪಮನದಂ ನೀಗಲ್ಕಮಾಗಳ್ ಬೃಹಂ |
ದಳೆಯಾದಂ ನರನಾತ್ಮಕಾರ್ಯವಶದಿಂ ಶುದ್ಧಾಂತದೊಳ್ ಮತ್ಸ್ಯನಾ || ೫೫ ||

ವ|| ಅಂತು ಬೃಹಂದಳೆಯಾಗಿ ಗಾಂಡೀವ ಜ್ಯಾಘಾತದೊಳಿಂದ್ರನೀಲಂಗಳ ನಡಸಿದಂತಿರ್ದೆರಡುಂ ಮುಂಗೆಯ್ಗಳ ಕರ್ಪಂ ತೀವೆ ತೊಟ್ಟ ಬಳೆಗಳ್ ಮಱಸೆ

---

1. ವೆಳಗೆ (ಕ. ಗ.), ವಳಿಗೆ (ಘ.); 2. ಱಿ3ಂ | ದೆಂನ (ಕ. ಖ.); 3. ರೊ (ಖ. ಗ. ಘ.); 4. ಪೂಣ್ದಾ (ಕ. ಗ.), ಪೂಳ್ದಾ (ಖ.).

ವಿರಾಟನ ಮಗಳಪ್ಪುತ್ತರೆ ಮೊದಲಾಗೆ ಪಲವುಂಪಾತ್ರಂಗಳನಾಡಿಸುತ್ತುಂ ಮಹಾಭಾರಾವತಾರದೊಳಪ್ಪ ಸಂಗ್ರಾಮರಂಗದೊಳರಾತಿನಾಯಕರ ಕಬಂಧ ಪಾತ್ರಂಗಳ ನಾಡಿಸುವುದನುದಾಹರಿಸುವಂತಿರ್ದಂ ಪಾಂಚಾಳ ರಾಜತನೂಜೆಯುಂ ರೂಪುಗರೆದು ಸೈರಂಧ್ರೀವೇಷದೊಳ್ ಪೋಗಿ ವಿರಾಟನ ಮಹಾದೇವಿ [1]ಸುದೇಷ್ಣೆಯಂ ಕಾಣ್ಬುದುಮಾಕೆಯುಂ ಕೃಷ್ಣೆಯ ರೂಪಂ ಕಂಡು ಚೋದ್ಯಂಬಟ್ಟು ಸಾಮಾನ್ಯೆಯಲ್ಲೆ ನೀನಾರ್ಗೆನೆಂಬೆಯೆಂದು ಬೆಸಗೊಳೆ—

ಕಂ॥ ನವ ಮೃಗಮದ ಪರಿಮಳಮುಮ।
ನಿವು ಮಸುಳಿಪುವೆನಿಪ ವಿವಿಧ ಗಂಧಂಗಳನಾ॥
ನವಯುವದೊಳ್ ಮಾಡುವ ಘ।
ಟ್ಟಿವಳ್ತಿಯೆಂ ದೇವಿ [2]ಗಂಡವಳ್ತಿಯೆನಲ್ಲೆಂ ॥ ೫೬ ॥

ಪೆಸರೊಳ್ [3]ಸೈರಂ[ಧ್ರಿ]ಯೆನಲ್।
[4]ವೆಸನದ ದೆಸೆಯಱಿಯೆನೆನಗೆ ಗಂಧರ್ವರ ಕಾ॥
ಪಸದಳಮುಂ[5]ಟರಿಸುವೊಡಾಂ।
ಬೆಸಕೆಯ್ವೆಂ ನಿನ್ನ ಬೆಸಸಿದಂದದೊಳಿರ್ಪೆಂ ॥ ೫೭ ॥

ವ॥ ಎಂದು ವಿರಾಟನ ಮಹಾದೇವಿಗಾವಗಮಣುಗೆಯಾಗಿ ಪಾಂಚಾಳಿಯಿರ್ದಳಂತು ಪಾಂಡವರೀ ಮಾಱ್ಕೆಯಿಂದಿರ್ಪನ್ನೆಗಮೊಂದು ದಿವಸಂ ವಿರಾಟಂ ನೆಲದೊಳುಳ್ಳ ಮಲ್ಲರೆಲ್ಲರುಮಂ ಬರಿಸಿ ಮಲ್ಲಯುದ್ಧಮಂ ನೋಡೆ ಸುಯೋಧನನ ಮಲ್ಲಂ ವಿಷಖರ್ಪರನೆಂಬಂ ತನ್ನ ಮಲ್ಲರೆಲ್ಲರುಮಂ ಕೊಂದೊಡೆ ಸಿಗ್ಗಾಗಿ ತನ್ನ ಬಾಣಸಿಗನಾಗಿರ್ದ ವಲ್ಲಲನಂ ಕರೆದು ಪೇೞ್ವಾಗಳ್—

ಕಂ॥ ಪರ್ಪರಿಕೆಗಿಡದೆ ಕಲಿ ವಿಷ।
ಖರ್ಪರನಿದಿರಾಂತೊಡಾಂತು ವಲಲಂ ತಳಮಂ॥
ಮಾರ್ಪೊಸೆದು ತಳ್ತು ಕ[6][ಣ್ತಿರಿ]।
ತರ್ಪಿನೆಗಮವುಂ[ಕಿ] ಸಿಂಹ[7]ನಾದದಿನಾರ್ದಂ ॥ ೫೮ ॥

ವ॥ ಅಂತು ಸುಯೋಧನನ *ಮಲ್ಲನಂ [ಕೊಂದು] ವಲಲಂ ವಿರಾಟನ ಮನೆಯೊಳ್ ತನ್ನ ಮಾತೆ ಮಾತಾಗಿರ್ದನನ್ನೆಗಂ ವಿರಾಟನ ಮೈದುನಂ [8][ಸುದೇಷ್ಣೆ

---

1. ಸುದ್ರುಷ್ಣೆ (ಘ.); 2. ದಂ (ಗ. ಘ.); 3. ಸೈಳೇಂದ್ರಿ (ಕ. ಖ.), ಸೈರಂಧ್ರಿ (ಗ) ಸಯಿರೆಂದ್ರಿ (ಘ.); 4. ವ (ಖ. ಗ.); 5. ಟರಿಪು (ಕ.), ಟರಿಸು (ಖ.); 6. ಣ್ಬೊಣ (ಕ§.), 7. ನಂ (ಕ.); 8. ಸುದ್ರುಷ್ಣೆಯೊಡ ಉಟ್ಟಿದನೊರ್ವ ಕಿಚಕನಿಂ ಪಿರಿಯಂ ಸಿಂಹ್ವಬಲನೊರ್ವಂ.

* ಇಲ್ಲಿಂದ ಮುಂದೆ ೬೩ನೆಯ ಪದ್ಯದ ಆರಂಭದವರೆಗೂ ಕೊಟ್ಟಿರುವ ಭಾಗವು ಘ. ಪ್ರತಿಯಲ್ಲಿ ಮಾತ್ರವಿದೆ.

ಯೊಡವುಟ್ಟಿದನೊರ್ವ(ಂ) ಸಿಂಹಬಲಂ ಕೀಚಕನೆಂಬಂ] ಸುಯೋಧನನ ದಂಡೆಲ್ಲಮ ನಿಱಿದೋಡಿಸಿ ಬಂದು ವಿರಾಟನಂ ಕಂಡು ತಮ್ಮಕ್ಕನಂ ಕಾಣಲ್ಪೋದಾತನಾ ಮಹಾದೇವಿಯ ಕೆಲದೊಳಿ[1][ರ್ದ]—

ಚಂ॥ ಸೊಗಯಿಸೆ ತೋಳ ಮೊತ್ತಮೊದಲೊಳ್ ಪೊಗರ್ವಟ್ಟಿಸಿವೊಂದು ನುಣ್ಪು
ಸಾ।
ವಗಿಸುವ ಮೇಲುದಂ ಮೊಲೆಗಳಳ್ಳಿಱಿಯುತ್ತಿರೆ ಪೊಣ್ಮೆ ಘರ್ಮ ಬಿಂ॥
ದುಗಳಲರಂಬುವೋಲೆಳಸೆ ಪಾಟಲ ಲೋಲ ವಿಲೋಚನಂ ಮನಂ।
ಬುಗೆ ನಳಿತೋಳ [2][ಕೋ]ಳೆಸೆಯೆ ಘಟ್ಟ ಮುಗುಳ್ಚುವ ಘಟ್ಟವಳ್ತಿಯಂ
॥ ೫೯ ॥

ವ॥ ಭೋಂಕನೆ ಕಂಡು ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪಟಿದಳಿಪಿ ನೋಡಿ ತನ್ನ ಮನದೊಳಿಂತೆಂದು ಬಗೆದಂ—

ಚಂ॥ ಸುರಿಯೆ ಬೆಮರ್ ಕುರುಳ್ವಿಡಿದು ಮುತ್ತುಗಳಂ ಮಱಿದುಂಬಿ ಕಾಱುವಂ।
ತಿರೆ ನಳಿತೋಳ ಬಳ್ವಳಿಕೆ ಕಣ್ಗೊಳಿ ಘಟ್ಟ ಮುಗುಳ್ಚುವಂದಮು॥
ಲ್ತಿರೆದು ಮುಗುಳ್ಚುವಂದಮೆ ದಲೆನ್ನೆರ್ದೆಯಂ ಪೆಱ[3]ತೇನದೆಂತು ಪೇೞ್।
ಪರಿಕಿಪೆನೀ ಮೃಗೋದ್ಭವದ ಕಂಪುಮನೀಕೆಯ ಮಯ್ಯ ಕಂಪುಮಂ ॥ ೬೦ ॥

ಕಂ॥ ಇದೆ ಮದನ ಭವನಮಿಂತಿದೆ।
ಮದನಾಮೃತಮಿದುವೆ ಮದನ ಸಾಯಕಮಿದೆ ಪೋ॥
ಮದನ ಮಹೋತ್ಸವ ಪದಮೆನಿ।
ಸಿದುದು ಕಟಾಕ್ಷೇಕ್ಷಣಂ ವಿಲೋಲೇಕ್ಷಣೆಯಾ ॥ ೬೧ ॥

ಉ॥ ಮಾಸಿದ ರೂಪು ನೋೞ್ಪೊಡರೆಮಾಸಿದ ಚಿತ್ರದ ಪೆಣ್ಣ ರೂಪುಮಂ।
ಮಾಸಿಸೆ ನಾಡೆ ಮಾಸದಿಕೆಯುಂ ಪಡೆದಪ್ಪುದು ಕಂಡ ಕಣ್ಗಳೊಳ್॥
ಸೂಸುವ ಮಾೞ್ಕೆಯಿಂ ಪೊಱಗೆ ಪೊಣ್ಮುವುದಂದಮಿದೆಂತೊ ಕಾಯ್ದು ಕೈ।
ವೀಸುವ ಕಾವನಂದಮಿವಳೇಂ ಕುಲ ನಾರಿಯೊ ವಾರ ನಾರಿಯೋ ॥ ೬೨ ॥

ಮಲ್ಲಿಕಾಮಾಲೆ॥ ಆವ[4][ಳ]ಪ್ಪೊಡಮಕ್ಕೆ ಪೋ ತಲೆಯಿಂದೆ ಪೋದೊಡಮಿಂದೆ
ಮಾ।
ದೇವನಾರ್ತೆಡೆಗೋದೊಡಂ ಲಯಮಿಂದೆ ಬರ್ಪೊಡಮೆನ್ನುರಂ॥
ತೀವಿ ತಳ್ತಿವಳೀ ಕುಚಂಗಳನಟ್ಕಱಿಂದಮರ್ದಪ್ಪಿ ಪೋ।
ಗಾವುಪಾಯದೊಳಾದೊಡಂ ನೆರೆವಲ್ಲದಿನ್ನಿರೆನೀಕೆಯೊಳ್ ॥ ೬೩ ॥

1. ರ್ದ್ದ; 2. ತೋ; 3. ದೇ; 4. ನ.

ವ॥ ಎಂದು ಸೈರಂಧ್ರಿಯಂ ನೋಡಿ ಸೈರಿಸಲಾಱದೆ ಸಿಂಹಬಲನಂತನಂಗ ಮತ್ತಮಾತಂಗ ಕೋಳಾಹಳೀಕೃತಾಂತರಂಗನಾಗಿ ತಮ್ಮಕ್ಕನನೀಕೆಯಾರ್ಗೆಂದು ಬೆಸಗೊಂಡೊಡಾತನ ಸೋಲ್ತ ಕಣ್ಣಱಿದೀಕೆ ಸಾಮಾನ್ಯ ವನಿತೆಯಲ್ಲಿವಳ್ ಗಂಧರ್ವ ವನಿತೆಯೆನ್ನೊಳಾದ ಮಚ್ಚುಂ ಮೋಹಮುಂ ಕಾರಣಮಾಗಿರ್ಪಳೆಂಬುದುಮಾ ಮಾತಿನೊಳ್ ಬೇಟಮುಗ್ಗಳಿಸೆ ನಿಜ ನಿವಾಸಕ್ಕೆ ಬಂದಕ್ಕನೆನಗೆ ತನ್ನ ಘಟ್ಟಿವಳ್ತಿಯ ಕೆಯ್ಯೊಳಪೂರ್ವವಿಲೇಪನಂಗಳನಟ್ಟುವುದೆಂದಟ್ಟುವುದುಂತಮ್ಮನುಪರೋಧಕ್ಕಾಱದೆ [1]ಸೈರಂಧ್ರಿಯಂ ಪೋಗಲ್ವೇೞ್ವುದುಮಾಕೆಯುವನ ಮನದ ಪಱುವಗೆಯನಱಿ[ಯು] ದಂಕೆ ಗೆಯ್ವನೆಂದು—

ಚಂ॥ ಸ್ಮರನರಲಂಬು ಕೈಬರ್ದುಕಿ ಬರ್ಪವೊಲೊಯ್ಯನೆ ಬಂದು ನಿಂದ ಸುಂ।
ದರಿಯನೊಱಲ್ದು ಸಿಂಹಬಳನಂತಿರು ಮಾಸಿದೆಯಾದೆ ಮೇಣಡಲ್ ॥
ತರಿಪೆನೆ ತಂಬುಲಂಬಿಡಿ ಮನೋಜಶಿಖಾಳಿಗಳ[2]ಟ್ವಿ ಮುನ್ನಮೆ।
ನ್ನರಿವೆರ್ದೆ ಕಂಡು ನಿನ್ನನಿನಿಸಾಱಿದುದಂಬುಜ ಲೋಲಲೋಚನೇ ॥೬೪॥

[6]ಕಂ॥ ಪರೆದ ಕುರುಳಲುಗೆ ಘಟ್ಟಿಯ।
ನರೆಯುತ್ತುಂ ನಾಣ್ಚಿ ತೆಗೆದು ನೋೞ್ಪುದುಮೆನ್ನಂ ॥
ಸ್ಮರ ಕೞ[3]ಕಾ[ಗ್ನಿ]ಯೆ ಕೊಂಡಂ।
ತಿರೆ ಕೊಂಡುದು ನೋಡ ನಿನ್ನ ನೋಡಿದ ನೋಟಂ ॥ ೬೫ ॥

ಮ॥ ಮದನಾಸ್ತ್ರಂ [4][ಕ]ರ ಸಾಣೆಗಾಣಿಸಿದುದೆಂಬಂತಾಗೆ ನಿನ್ನೊಂದು ಕಂ।
ದಿದ ಮೆಯ್ಯೆನ್ನಯ ತೋೞೊಳೊಂದೆ ಸಿರಿಯಂ ನೀನುಯ್ದು ತೊೞ್ತಾ [5][ಳ್ದ] ರಾ ॥
ಗದಿನೆನ್ನೊಳ್ ಸುಕಮಿರ್ಪುದೆನ್ನ ನುಡಿಯುಂ ನೀಂ ಕೇಳ್ದುವೊಂದಂಚೆಯುಂ।
ಪೊದೆಯೊಂದಂಚೆಯನುಟ್ಟ ನಿನ್ನಿರವಿದೇನಂಭೋಜಪತ್ರೇಕ್ಷಣೇ ॥ ೬೬ ॥

ಕಂ॥ ಬಿಗಿದೊಗೆದ ನಿನ್ನ ಮೊಲೆಗಳ।
ಮೃಗಮದದ ಪುಳಂಚಗಳ್ ಪ[ಗಿಲ್ತಿ]ರಲೆಡೆಯಾ ॥
ದಗಲುರಮನೆನಗೆ ಪಡೆದಜ।
ನೊಗಸುಗಮಲ್ತೆಲಗೆ ನಿನ್ನನೆನಗೆಯೆ ಪಡೆದಂ ॥ ೬೭ ॥

ಎನಗರಸಿಯಾಣೆ ನಿನ್ನೊಡ।
ನೆನಗೇಗೆಟ್ಟಪುದಿದೆಂದು ಱೋಡಾಡಲ್ ಕೆ ॥
ಮ್ಮನೆ ನುಡಿದೊಡೆನ್ನ ಕಣ್ಗಂ।
ಮನಕ್ಕೆ ವಂದಿರ್ದ ನಿನ್ನೊಳೆನಗೆರಡುಂಟೇ ॥ ೬೮ ॥

---

1. ಸಯಿರೆಂದ್ರಿ; 2. ಳ್ಗ; 3. ಕಾಂಗಿ; 4. ಖ; 5. ಳು; 6. ನಿತ್ತಿ.

ಕಂ॥ ಬಾಯುಱಿದೆನಿತೆರೆದೊಡಮಾ।
ಹಾ ಯೆ[1][ನ್ನೆ]ಯ ಕರವೆ [2]ಮ[ಱುಗಿ ಮೆಯ್ವಿಡಿದುರಿವೆ]॥
ನ್ನೀ ಯೆರ್ದೆಯನಾಱಿಸಲ್ [ನೀಂ]।
ಬಾಯೊಳ್ದಂಬುಲಮನಪ್ಪೊಡಂ ದಯೆಗೆ[3]ಯ್ವೋ ॥ ೬೯ ॥

ವ॥ ಎಂದು ಪುತ್ತಮೆಸಿತಾನುಂ ತೆಱದ ಲಲ್ಲೆಯಿನಳಿಪಂ ತೋಱಿ ಬಾಯುಱಿದು ತನ್ನ ನುಡಿಗಳಳಿಪಿಳಿವೋಗೆ ಸೈರಿಸಲಾಱದೆ ಪಿಡಿವುದುಂ ಪಾಂಚಾಲ ರಾಜತನೂಜೆಯಿಂತೆಂದಳ್—

ಮ॥ಸ್ರ॥ ನುಡಿಯಲ್ವೇಡೆನ್ನೊಳಿಂತಪ್ಪಳಿಪಿನ ನುಡಿಯಂ ನಿನ್ನ ಮಾತಿಂಗೆ ಚೀ ಮೆ।
ಳ್ಪಡುವಂತಪ್ಪಾಕೆಯಲ್ಲೆಂ ಬಿಡು ಗಡ ಬಿಡ[4]ದಂದೆನ್ನ ಗಂಧರ್ವರಿಂದಂ॥
ಮಡಿವಯ್ ನೀನೆಂದೊಡಂತಪ್ಪೊಡೆ ಬಿಡೆನೆನಗಂ ಮೇಗುವೇೞ್ದಪ್ಪೆಯಿಲ್ಲಾ।
ರ್ಪೊಡೆ ನಿನ್ನಂ ಕಾವ ಗಂಧರ್ವರೆ ಬಿಡಿಸುಗೆ ಪೋಗೆಂದು ಪೊಯ್ದಂ
ದುರಾತ್ಮಂ ॥ ೭೦ ॥

ವ॥ ಪೊಯ್ದೊಡೆ ಬಱಬಂ ಪೊಯಿಲ್ವೆತ್ತಂತೇನುಮನಱಿಯದೆ ಪರಿಭವಾ[5][ನಿ]ಲನಿಂ ಶೋಕಾನಲನಿರ್ಮಡಿಸೆ ನಡ ನಡುಗಿ ಕಾಯ್ಪಿನೊಳ್ [6][ಪಿ]ಡುಗಿ ತಳೋದರಿ ವೃಕೋದರನಲ್ಲಿಗೆ ವಂದು ಕಟ್ಟೇಕಾಂತದೊಳಿಂತೆಂದಳ್—

ಮ॥ಸ್ರ॥ ಪೆಱನಿಕ್ಕುಂಗೂಟಿ೩ೊಳಂ ಕೀೞಲೊಳಮಳವಿಗೆಟ್ಟಿರ್ಪ ನಿಮ್ಮಿರ್ಪುದರ್ಕಂ।
ಮಱುಗುತ್ತಿರ್ಪಳ್ಗೆ ನೋಡಾದಟಿಲನೆನಗೆ ಕಣ್ಸೋಲದಿಂ ಕೀಚಕಂ ಬಂ॥
ದುಱಿದೆನ್ನಂ ಕಾಡಿ ಕೈಗೆಲ್ದು[7][ಗಿ]ದನವನದೊಂದುರ್ಕನೇವೇೞ್ವೆನಿನ್ನೀ।
ನಱುವಯ್ ಪೂಣ್ದೆನ್ನದೊಂ[8][ದಂ] ಪರಿಭವಮನಿದಂ ನೀಗು ನೀಂ
ಭೀಮಸೇನಾ ॥ ೭೧ ॥

ವ॥ ಎಂಬುದುಂ ಭೀಮಸೇನನೇವದೊಳ್ ಕಣ್ಗಾಣದಿವನೊರ್ವಂ ದುಶ್ಶಾಸನನ ನಂಟನಕ್ಕುಮಾದೊಡೇನಾಯ್ತು—

ಕಂ॥ ಮುಳಿಸೆಂಬುದೆನಗೆ ಕೌರವ।
ರೊಳೆ ಪಿರಿ[9][ದಾ] ಬಲಿ[10][ದ] ಬಯಕೆಯುಂ ಮಾದುರದೊಳ್॥
ಕಳಿವಂತನ್ನೆಗಮಿವನೊಳ್।
ಕಳಿವೆಂ ನಿನ್ನೊಂದು ಮುಳಿಸನಬ್ಜದಳಾಕ್ಷೀ ॥ ೭೨ ॥

---

1. ನ್ನ; 2. ಮರನಿಮೆಯ್ವಡೆ ಮರಿಯೆಂ; 3. ಯ್ವೊ; 4. ದೆಂ; 5. ನ; 6. ಪು; 7. ಸಿ; 8. ದೀ; 9. ದಂ; 10. ಯ.

ವ॥ ಎಂದು ನೀನೀ ವಿರಾಟನ ನಾಟಕಶಾಲೆಯನೆ ಸಂಕೇತ ನಿಕೇತನಂ ಮಾಡಿ ನೇಸರ್ಪಡಲೊಡಮೆನ್ನಿಂ ಮುನ್ನಮೆ ಪೋಗಿರ್ಪುದಾನಲ್ಲಿಗೆ ವರ್ಪೆನೆಂ[1][ದಾ ಪಾಣ್ಬ] ನಂ ನಂಬೆ ನುಡಿದಾ ಪೊಟ್ಟೆಂಗನ್ನನಲ್ಲಿಗೆ ವರಿಸವಂಗೆ ತಕ್ಕುದನಾನೆ ಬಲ್ಲೆನೆಂದು ನುಡಿದು ಕಳುಪಲಾ ದ್ರೌಪದಿ ಸಂತಸಂಬಟ್ಟಂತೆ ಗೆಯ್ವೆನೆಂದು ಪೋಗಿ—

ಚಂ॥ ಮಱುದೆವಸಂ ಲತಾಲಲಿತೆ ಕೀಚಕನಲ್ಲಿಗೆ ಕಾಮನೊಂದು ಕೈ ।
ಸೆಱೆಯೆನಿ[2][ಪಂಗ] ರಾಗಮನಿಳೇಶ್ವರ ವಲ್ಲಭೆಯಟ್ಟಲುಯ್ದೊಡಾ ॥
ನಱಿಯದೆ ನಿನ್ನೆ ನೋಯಿಸಿದೆನಿಂದೆನಗೆಂಬುದನೆಂಬುದೆಂದು ಕಾ ।
ಲ್ಗೆಱಗಿದೊ[ಡೊ]ಳ್ಳಿತಾಗೆ ನಿನಗಿಂತಿನಿತೊಂದೊಲವುಳ್ಳೊಡೊಲ್ಲೆನೇ ॥ ೭೩ ॥

ವ॥ ಎಂದು ನಂಬೆ ನುಡಿದು ವಿರಾಟನ ನಾಟಕಶಾಲೆಯನೆ ಪೂರ್ವ ಸೂಚಿತ ಕ್ರಮದೊಳ್ ಕುಱುಪುವೇೞ್ದು ಸೂರ್ಯಾಸ್ತಮಯ ಸಮಯದೊಳ್ ಭೀಮ ಸೇನಂಗೆ ತದ್ವೃತ್ತಕಮನಱಿಪಿದೊಡೆ ಬಾಹು ಯುದ್ಧಸನ್ನದ್ಧನಾಗಿ ಕಲಿಗಂಟಿಕ್ಕಿ ಗಂಡುಡೆಯುಮನುಟ್ಟು ಮೇಲುದನಿೞಿಯೆ ಮುಸುಕಿಟ್ಟು ಪೋಗಿ ಗುಣಣೆಯ ಬಾಗಿಲೊಳ್ ದ್ರೌಪದಿಯನಿರಿಸಿ ವೀರಶ್ರೀಯ ವಿವಾಹಮಂಟಪಮಂ ಪುಗುವಂ ತೊಳಪೊಕ್ಕು—

ಕಂ॥ ಸಿಂಗಬಲನೆಂಬಗುರ್ವಿ[3]ನ ।
ಸಿಂಗಮನಸಿಧೇನು ಕಿರಣ ಕೇಸರ ಮಾಲಾ ॥
ಸಂಗತಮನಡಸಿ ನುಂಗಲ್ ।
ಸಂಗತಬಲನೊಂದು ಶರಭಮಿರ್ಪಂತಿರ್ದಂ ॥ ೭೪ ॥

ವ॥ ಅನ್ನೆಗಮಿತ್ತ ಕೀಚಕನೆಂಬ ಪಾಣ್ಬಂ—

ಉ॥ ಅಚ್ಚಿಗದಿಂದಟಲ್ದಿನನಡಂಗದ ಬೇಸಱೊಳಂತೆ ನೀರೊಳಂ ।
ಕಿಚ್ಚಿನೊಳಂ ಪೊರಳ್ದು ಪಗಲಂದಿರುಳಾದೊಡೆ ರಾಜ್ಯಮಾದವೋಲ್ ॥
ಪೆರ್ಚಿ ಮನಕ್ಕೆ ಬಿಚ್ಚತಿಕೆವಂದಿರೆ ನಾಟಕಶಾಲೆವೊಕ್ಕು ವಿ ।
ದ್ಯುಚ್ಚಪಳಂ ಮನೋಜಪರಿತಾಪದಿನೋಪಳೆಗೆತ್ತು ಭೀಮನಂ ॥ ೭೫ ॥

ಚಂ॥ ನುಡಿಯಡೆ ಕೆಮ್ಮನಿರ್ಪಿರವಿದಾವುದು ಕಾರಣಮಾವುದೀ ಮೊಗಂ ।
ಗುಡದಿರವಿಂತು ಕಣ್ಬ[4][ಡಿ]ಗರಪ್ಪರೆ ಮಾನಸರಪ್ಪರೆಂದು ಮ ॥
ಳ್ಪಡೆ ನುಡಿದೆಯ್ದೆವಂದು ಮುಸುಕಂ ತೆಗೆದಾಗಡೆ ಮೇಲೆವಾಯ್ದು ಬ ।
ಲ್ದಡಿಗನವುಂಕೆ ಬಲ್ದಡಿಗನಂ ಪಿಡಿಮೊರ್ಮೆಯೆ ಮಲ್ಲಯುದ್ಧದೊಳ್ ॥೭೬॥

---

1. ದಂ ಪಾಂಚಾಲನ ಬನಂ ; 2. ಪೊಂದು ; 3. ನಿ ; 4. ಟ.

ವ || ಪೋರ್ದು ಮಲ್ಲಾಮಲ್ಲಿಯಾಗೆ ಪಲವುಂ ಗಾಯಂಗಳೊಳಾಯುಂದಪ್ಪಡೆ ತನಗವಂ ಸಮಾನ ಬಳನಪ್ಪುದಱಿಂ ಪಿರಿದು ಪೊಲ್ತು [1]ಸಂತರ್ಪಿನಂ(?) ಪೋರ್ದು ಬಳಿಯು ಪೇಱಿನಾನೆ ಮೆಟ್ಟಿದಂತೆ ನುರ್ಚುನೂಱಿಪ್ಪಿನಪುವುಂಕಿ ಪಿಡಿದಡಸಿ[ಯು] ಗುರ್ವು ಪರ್ವೆ ಬೀಸಿ ಗುಣಣೆಯ ಕಂಭಂಗಳೊಳಂ ಕೇರ್ಗಳೊಳಮಾಸ್ಫೋಟಿಸಿ ತಾಟಿಸಿದಾಗಳ್—

ಕಂ || ಬಿಸುನೆತ್ತರ್ ನೆಣನಡಗೆ |
ಲ್ವಿ ಸಮಸ್ತಂ ಸುರಿಯೆ ಕೈಗೆ ತೊವಲುಱಿಯುಲಗು ||
ರ್ವಿಸಿದುದು ಶೀವಿದ ಗುಳ್ಳೆಯು |
ಪಸುಂಬೆಯಂ [2][ಸೋ]ರ್ಚಿದಂತೆ ತನು ಕೀಚಕನಾ || ೭೭ ||

ಉ || ಆಂ ಜಗದೊಳ್ ಬಲಸ್ಥನೆ[3][ನಿ]ದಿರ್ಚುವರಾರೆನಗೆಂದು ಸೋಲದಿಂ |
ಕಂಜದಳಾಕ್ಷಿಯಂ ಪಿಡಿದನೀ ಖಳನೆಂಬಱಲಿಂದವುತ್ತಮಿ ||
ತ್ತಂ ಜವನೊಕ್ಕಲಿಕ್ಕಿದೊಡೆ ನಾಟಕಶಾಲೆಯೊಳಿಯ್ದೆ ರಕ್ತ ಪು |
ಷ್ಪಾಂಜಳಿಗೆಯ್ದ ಮಾಱ್ಕೆಯವೊಲಿರ್ದುವು ಸೂಸಿದ ಖಂಡದಿಂಡೆಗಳ್
|| ೭೮ ||

ವ || ಅಂತು ಸಂಧಿ ಸಂಧಿಯೊಳ್ ಸಹಸ್ರ ಸಿಂಹಬಲನೆನಿಪ ಸಿಂಹಬಲ[4]ನ[ನ] ಶ್ರಮದೊಳೆ ಕೊಂದು ಜವಂಗೆ ಬಾಣಸುಗೆಯ್ದಿಂದಿನಂದದೊಳೆ ಬಾಣಸಿನ ಮನೆಯೊಳ್ ಬಂದಿರ್ದನಿತ್ತ ದ್ರೌಪದಿಯುಮುಪಾಯದೊಳ್ ಗುಣಣೆಯ ಮನೆಯ ಮುಂದೆ ನಿಂದು—

ಕಂ || ಗಂಧರ್ವವನಿತೆಯೆಂ ನಿ |
ರ್ಬಂಧಂ ಬೇಡಳಿಪೆ ಸಾವೆಯೆನೆ ಮಾಣದೆ ಕಾ ||
ಮಾಂಧಂ ಕೀಚಕನಾಟಿಸಿ |
ಗಂಧರ್ವರಿನಱಿದನೆನಗೆ ದೊಱಿಪ್ಪಿನೆಗಂ || ೭೯ ||

ವ || ಎಂದು ಗಗ್ಗರಿಕೆಗೊಳ್ವ ಸರಮುಂ ಕರ್ಣ ಪರಂಪರೆಯಿಂ ಕೇಳ್ದು ಸಿಂಹಬಲನೊಡವುಟ್ಟಿದರ್ ನೂರ್ವರ್ ಕೀಚಕರುಂ ಪರಿತಂದು ಮುಳಿಸಿನೊಳ್ ಕಣ್ಗಾಣದೆಲ್ಲಮೀ ಡಾ ಮ ರ ಡಾಕಿನಿಯಿಂದವಾದುದೀಕೆಗವೆಮ್ಮಣ್ಣಂಗಮೊಂದೆ ವಿಧಿಯಂ ಮಾಱ್ಪೆಮೆಂದಾಕೆಯುಂ ಮುಂದಿಟ್ಟು ಪೋದರಿವನನಿರುಳೊಳೆ ಸಂಸ್ಕರಿಸಲ್ವೇಱ್ಕುಮೆಂದು ಕೊಂಡುಪೋಪಾಗಳಾ ಕಳಕಳಮುಂ ಭೀಮಸೇನಂ ಕೇಳ್ದಪಂದಿರೊಡನೆ ರೂಪುಗರೆದು ಪೊಱಲಂ ಪೊಱಮಟ್ಟು ಬಱಿಸಿಡಿಲೆಱಗುವಂತೆ ನಿಜಭುಜ ಶಿಖರಾಸ್ಫಾಲನಂ ಗೆಯ್ದು—

1. ಸಲ್ತರ್ಪಿನಂ (ಪ.) ; 2. ಸಾ ; 3. ಯಿ ; 4. ನಂ ಕೊಲ್ವಂತಸು.

ಮ || ವನಿತಾಹೇತುವೆ ಕೇತುವಾಯ್ತು ನಿಮಗಂ ಗಾಂಧರ್ವರಿಂದಿಂದು ನಿ |
ಮ್ಮ ನಿಷೇಕಂ ನೆರೆದತ್ತು ಸತ್ತಿರೆನುತುಂ ಪೊಕ್ಕಾರ್ದುರ್ ಕಾಳಾಂಬುದ ||
ಧ್ವನಿಯಿಂ ಬಾಟಿಯ ಚೆಲ್ವನಪ್ಪ ಜನಮಂ ಕಾಡಾನೆ ಪೊಯ್ದಂತೆ ಪೊ |
ಯ್ದನಿಸುಂ ಮಾಣದೆ ನೀಚ ಕೀಚಕ ನಿಕಾಯ ಧ್ವಂಸನಂ ಮಾಡಿದಂ || ೮೦ ||

ವ|| ಅಂತಳವಿಗಟಿಯೆ ಕೊರ್ವಿದ ಕೀಚಕ ವನವೆಲ್ಲಮೊಂದಿರುಳೊಳೆ ಸಾಹಸ ಭೀಮನುದ್ದಾಮ ಕೋಪದವದ ಹನಜ್ವಾಲಾಸಹಸ್ರಂಗಳಿನಳ್ಕಿಮೆಳ್ಕಿದಂತಪ್ಪುದುಂ ನೇಸಱ್ ಮೂಡಿದುದಾಗಳಾ ಪಡೆಮಾತನಿರ್ದರಿರ್ದಲ್ಲಿಯೆ ಕೇಳ್ದು—

ಮ || ಪಡಲಿಟ್ಟಂತೆವೊಲಾಯ್ತು ಕೀಚಕ ಬಲಂ ಗಂಧರ್ವರಿಂದಿಂದಿರು |
ಳ್ಗಡಿದೇಂ ಸಂಗಡ ಮಿಟ್ಟುವಾಯ್ತೆ ಪೆಱವೆಣ್ಗೊಲ್ದಂಗಮೇನಾಗದಿಂ ||
ದುಡಿದತ್ತಾಗದೆ ಮತ್ಸ್ಯನೊಂದು ಬಲಗೆಯ್ಯೊಂದಕ್ಕಟಾ ಎಂಬುದಂ |
ನುಡಿಯಲ್ಕಾರ್ತರುಮಿಲ್ಲ ಪಾರದರದೊಳ್ ಸತ್ತಂಗಲಿಲ್ವನ್ನರಾರ್ || ೮೧ ||

ಕಂ|| ರಾವಣನುಂ ಗಡ ಸೀತಾ |
ದೇವಿಗೆ ಸೋಲ್ತದಱ ಫಲಮನೆಯ್ದಿದನಿವನಾ ||
ರಾವಣನಿಂ ಪಿರಿಯನೆ ಪೇ |
ಱೀವುದೊ ಶುಚಿಯಲ್ಲದವನ ಗಂಡುಂ ತೊಂಡುಂ || ೮೨ ||

ವ|| ಎಂದು ಪೊಟಲ ಜನಂಗಳ್ ಗುಜುಗುಜುಗೊಂಡು ಕೀಚಕನ ಪಡೆ ಮಾತನೆ ನುಡಿಯೆ ವಿರಾಟನ ಮಹಾದೇವಿಯುಂ ಪೇಡಿ ಸತ್ತಂತೇನುಮನೆನಲ ಱಿಯದೆ ನಾಣ್ಚಿ ತನ್ನೊಳೆ ಮೂಗಟ್ಟಿಯನಟ್ಟು ಕೆಮ್ಮನಿರ್ದಳಿತ್ತ ದುರ್ಯೋಧನನ ಗೂಢ ಪ್ರಣಿಧಿಗಳಾ ಮಾತಂ ಜಲಕ್ಕನಱಿದು ನಾಗಪುರಕ್ಕೆ ವಂದು ಸುಯೋಧನ ಸಭಾಮಧ್ಯದೊಳಿಂತೆಂದು ಬಿನ್ನಪಂಗೆಯ್ದರ್—

ಮ || ಗುಡಿಗಂ ಬದ್ದವಣಕ್ಕಮಪ್ಪ ಪಡೆಮಾತೀಮಾತಿದಂ ಕೇಳ್ವೊಡೀ |
ಗಡೆ ಮೆಚ್ಚೀಯಲೆವೇಟ್ಟಪ್ಪುದೆಯ್ದೆ ಪರಮ ದ್ರೋಹಕರ್ಕಳಾಗಿರ್ದುರ್ ನಿ ||
ಮ್ಮಡಿಯೊಳ್ ಪೋಗದೆ ಕಾಡುತಿರ್ದ ಸುಭಟರ್ಕಳ್ ನೂರ್ವರುಂ ಕೀಚಕರ್ |
ಮಡಿದರ್ ಪೇವರದೊಂದು ಪುಣ್ಯಬಲದಿಂ ಗಂಧರ್ವ ಯುದ್ಧಾಗ್ರದೊಳ್ || ೮೩ ||

ವ|| ಅದುಕಾರಣದಿಂದಾ ವಿರಾಟನ ಮಂಡಲಂ ಗೋಮಂಡಲದಂತೆ ಹೇಳಾ ಸಾಧ್ಯಮಾಗಿ ಕೈಗೆವರ್ಕುಮೆಂಬುದುಂ ಕುರುರಾಜಂ ಸಿಂಧುತನೂಜನ ಮೊಗಮಂ ನೋಡಿ—

ಮ || ಇದು ದಲ್ ಚೋದ್ಯಮತರ್ಕ್ಯಮದ್ಭುತಮಸಂಭಾವ್ಯಂ ವಿಚಾರಕ್ಕೆ ಬಾ |
ರದುಪೆಂತೆಂದೊಡೆ ಸಂದ ಸಿಂಹಬಲನಂ ಕೊಲ್ವನ್ನರಾರ್ ಭೀಮನ ||
ಲ್ಲದವರ್ ಕೀಚಕ ಭೀಮ ಶಲ್ಯ ಬಲದೇವರ್ಕಳ್ ಸಮಾನರ್ಕಳ |
ಪ್ಪುದಱಿಂ ತೋಳ್ವಲದೊಳ್ ಪೆಱಂಗಮರಿದೀ ವಿಕ್ರಾಂತಮುಂ ಗರ್ವಮುಂ
|| ೮೪ ||

ವ|| ಅದಱಿಂ ಪಾಂಡವರೈವರುಂ ವಿರಾಟಪುರದೊಳಿರ್ದರಾಗಲೆವೇೞ್ಕು ಮವರಿರ್ದರಪ್ಪೊಡೆ—

ಚಂ|| ಪರಿಭವದೊಂದು ತುತ್ತತುದಿ ಕೃಷ್ಣೆಯ ಬನ್ನದೊಳಾಗೆ ಜೂದಿನೊಳ್
ಪೊರಸಱೆವಂತೆ ತಮ್ಮರಸುಗೆಟ್ಟು ಕಟಿಲ್ದಿರ್ದೆಗೆಟ್ಟರಣ್ಯದೊಳ್ ||
ತಿರಿ ತರುತಿರ್ದ ಕಣ್ಬಡಿಗರಿನ್ ಮಗುೞ್ದುಂ ಬಿಱುತೋಡಿ ಜೇಡರೊಳ್ |
ನೆರೆದಿರಲಲ್ಲದೊಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುವೋ || ೮೫ ||

ವ || ಎಂಬುದುಮಾ ಕೌರವನ ಮಾತಿಂಗಮರಾಪ*ಗಾನಂದನನಿಂತೆಂದಂ—

ಮ||ಸ್ರ|| ರಸೆಯೊಳ್ ಕಾಲಾಗ್ನಿರುದ್ರಂ ಜಲ ಶಯನದೊಳಂಭೋಜನಾಭಂ
ಪೊದಳ್ದಾ |
ಗಸದಿಂ [1]ಸುತ್ತಿರ್ದಜಾಂಡೋದರದೊಳಜನಡಂಗಿರ್ಪವೋಲ್ ಕಾರಣಕ್ಕಂ ||
ದೊಸೆದಿರ್ದರ್ ಪಾಂಡವರ್ ಕಾನನದೊಳರದವರ್ ನನ್ನಿಯಂ ತಪ್ಪೆಯುಂ
ಸ |
ಪ್ತ ಸಮುದ್ರಂ ಮೇರೆಯಂ ತಪ್ಪೆಯುಮೊಳರೆ ಬಿಗುರ್ತಾಂಪವರ್
ರಾಜರಾಜಾ || ೮೬ ||

ವ || ಎನೆ ಕುಂಭಸಂಭವನಿಂತೆಂದಂ—

ಮ || ಕೃತ[2]ಶಾಸ್ತ್ರ[ರ್] ಧೃತ[ಶ]ಸ್ತ್ರರಪ್ರತಿಹತ ಪ್ರಾಗಲ್ಭ್ಯರೀಗಳ್ ಪೃಥಾ |
ಸುತರುದ್ಯೋಗಮನೆತ್ತಿಕೊಳ್ವ ದೆವಸಂ ಸಾರ್ಚಿತ್ತು ಕಾಲಾವಧಿ ||
ಸ್ಥಿತಿಯುಂ ಬಂದುದಿ[3]ದರ್ಕೆ ಮಾಣ್ದಿರದೆ ಮಂತ್ರಾವಾಸದೊಳ್ ಮಂತ್ರ ನಿ |
ಶ್ಚಿತನಾಗೀಗಡೆ ಕಾದಿದಲ್ಲದಿಳೆಯಂ ನೀ[4]ನೆಂತುಮೇನಿತ್ತಪಯ್ || ೮೭ ||

ವ || ಎಂದೊಡೆ ಕರ್ಣನಿಂತೆಂದಂ—

ಚಂ|| ಬಗೆಯದೆ ಸಾಮಮಂ ಬಿಸುಟು ಭೇದಮನೊಲ್ಲದುದಗ್ರ ದಾನಮಂ |
ನೆಗಟಿದೆ ದಂಡಮಂ ನಿನಗೆ ಮಾಡಿದಕೃತ್ಯರನಂತು ಮಾಣ್ಬುದೇ ||
ಬಗೆ ಪಗೆ ನೀಗೆಯುಂ ಮುಳಿಸು ಪೋಗೆಯುಮಾಯತಿ ಪೆರ್ಚೆಯುಂ ಜಗಂ |
ಪೊಗೞೆ[3]ಯು[5]ಮಾಂತರಾತಿ ನೃಪರಂ ತವೆ ಕೊಲ್ವುದಹೀಂದ್ರಕೇತನಾ
|| ೮೮ ||

---

* ೨೮೯ನೆಯ ಪುಟದ ಅಡಿಟಪ್ಪಣಿವನ್ನು ನೋಡಿರಿ.

1. ದ (ಕ.ಖ.ಗ.ಘ); 2. ಶಸ್ತ್ರಾದೃತಶಾಸ್ತ್ರ(ಕ.), ಶಾಸ್ತ್ರಧೃತರ್ಶಾಸ್ತ್ರಂ(ಖ.), ಶಾಸ್ತ್ರದ್ಧೃತಶಾಸ್ತ್ರ(ಗ), ಶಾಸ್ತ್ರಧೃತಶಾಸ್ತ್ರ(ಘ.); 3. ವ (ಕ.ಗ.); 4. ನುಂ (ಘ.); 5. ಮಂ (ಕ.ಗ.).

ವ|| ಎಂಬುದುಂ ಸುಯೋಧನನಿರ್ವರ ನುಡಿಯುಮಂ ಕೇಳ್ದು ತನ್ನ ಮನದೊಳಾದ ಕಜ್ಜಮನಿಂತೆಂದಂ—

ಚಂ|| ಅಱಿಯಲೆವೇೞ್ಪುದಿರ್ದೆಡೆಯನಿರ್ದೆಡೆಯಿಂ ತೆಗೆದಾಜಿರಂಗದೊಳ್ |
ನಿಱಿಸಲೆವೇೞ್ಪುದಂತವರನಂತವರಿರ್ಪೆಡೆಯುಂ ವಿರಾಟನಿ ||
ರ್ಪಱಿಕೆಯ ಪಟ್ಟಣಂ ನಮಗಿದೇವಿರಿದಪ್ಪುದು [ತಳ್ವದೆಯ್ದಿ ನಾಂ]
ತುಱುವನೆ] ಕೊಳ್ವಮಂತು ತುಱುಗೊಂಡೊಡೆ ಪಾಂಡವರಿರ್ಪ ಗಂಡರೇ
|| ೮೯ ||

ವ|| ಎಂದು ಪಿರಿದುಮಾಗ್ರಹಂಬೆರಸು ಗೋಗ್ರಹಣ ಪ್ರಪಂಚಮನೆ ನಿಶ್ಚಯಿಸಿ ವಿರಾಟನ ದಾಯಿಗಂ ತ್ರಿಗರ್ತಾಧೀಶಂ ಸುಶರ್ಮನುಮಂ ನಾಲ್ಕಾಸಿರರಥಂಬೆರಸು ದಕ್ಷಿಣ ದಿಶಾಭಾಗಕ್ಕೆ ವೇೞ್ದು ತುಱುವಂ ಕೊಳಿಸಿದಾಗಳ್—

ಚಂ|| ಕರೆದು ವಿರಾಟನುತ್ತರನನಾತ್ಮತನೂಜನನಾ ಪೊೞಲ್ಗೆ ಕಾ |
ಪಿರಿಸಿ ಧರಾತಳಂ ತಳರ್ವವೋಲ್ ನಡೆದಾಗಳೆ ಪಾಂಡುಪುತ್ರರ ||
ಯ್ವರುಮಿದು [2]ನಮ್ಮನಾರಯಲೆ ವೈರಿಯ ಮಾಡಿದ ಗೊಡ್ಡಮಿಲ್ಲಿ ಮಾ |
ಣ್ದಿರಲಣಮಾಗ ಪೂಣ್ದವಧಿಯುಂ ನೆಱೆದತ್ತು ಕಡಂಗಿ ಕಾದುವಂ || ೯೦ ||

ವ || ಎಂದು ತನ್ಮಯ್ವರುಮಾಳೋಚಿಸಿ ವಿಕ್ರಮಾರ್ಜುನನಂ ಪೆಱಗಣ ಕಾಪಿಂಗಿರಲ್ವೇೞ್ದು ನಾಲ್ವರುಂ ನಾಲ್ಕುಂ ಸಮುದ್ರಂಗಳ್ ಮೇರೆದಪ್ಪಿದಂತೆ ವಿರಾಟನೊಳ್ ಕೂಡಿ ಪೋಗಿ ತಾಗಿದಾಗಳ್—

ಚಂ|| ಕಡಲ ಪೊದಳ್ದ ಪೆರ್ದೆರೆಗಳೆಯ್ದೆ ಕುಲಾದ್ರಿಗಳೊಳ್ ಪಳಂಚಿ ತೂ |
ಳ್ದೊಡನೆ ಮರಲ್ದವೋಲ್ ಕೆಡೆಯೆ ಪಾಯಿಸಿದುಗ್ರ ರಥಂಗಳೞ್ಗಿ ತ ||
ಳ್ತಿಡಿಗಿಡೆ ಪಾಯ್ದರಾತಿ ನೃಪರಂ ತಱಿದಾ[ಂತಿರದಾ] ಸುಶರ್ಮನಂ |
ಪಿಡಿದು ನೆಗೞ್ತೆಯಂ ಪಡೆದು ಸಾಹಸದಿಂ ತುಱುವಂ ಮಗುೞ್ಚಿದರ್
|| ೯೧ ||

ವ || ಅನ್ನೆಗಮತ್ತ ಸುಯೋಧನಂ ಸಮಸ್ತ ಸಾಧನಂ ಬೆರಸು—

ಉ || ಉತ್ತರ ಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚಿ ದಿ |
ಗ್ಭಿತ್ತಿ ವಿಭೇದಿ ಪೆರ್ಜೆ ಕದನಾನಕ ರಾವಮುಗುರ್ವಿನುರ್ವ ಪ ||
ರ್ವುತ್ತಿರೆ ಚಾರು ವೀರ ಭಟ ಕೋಟಿಗೆ ರಾಗರಸಂ ಪೊದಳ್ದು ತು |
ಳ್ಕುತ್ತಿರೆ ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ
|| ೯೨ ||

1. ಯುತ್ತಿರೆ (ಕ.) ; 2. ಮೆ (ಕ.ಖ.).

ಚಂ॥ ಪಸರಿಸಿ ಪೊಕ್ಕು ಕೂಕಿಱಿದು ಕಾದುವ ಬಲ್ಲಣಿಗಳ್ ಪಳಂಚಿ ಪಾ।
ಯಿಸುವ ದೞಿಕ್ಕಗುರ್ವೆಸೆಯೆ ನೂಂಕಿದ ಬಲ್ಲಣಿಗೆತ್ತಮೆಯ್ದೆ ಚೋ॥
ದಿಸುವ ರಥಕ್ಕೆ ಪೆಳ್ಪಳಿಸದೊರ್ವರಿನೊರ್ವರೆ ಮಿಕ್ಕು ಪಾರ್ದು ಸಾ।
ರ್ದಿಸೆ ತುಱುಗಾಱರಂದಿನಿಸು ಬಲ್ವಲನಾದುದದೊಂದು ಕಾಳೆಗಂ ॥ ೯೩ ॥

ಕಂ॥ ಮಚ್ಚರದಿನೊರ್ವರೊರ್ವರ।
ನುಚ್ಚಳಿಸಿ ತಗುಳ್ದು ಗೋವರಾರ್ದಿಸೆ ಕೇೞಿಂ॥
ಕರ್ಚಿ ಪುಡಿಯೊಳ್ ಪೊರಳ್ದವು।
ನಚ್ಚಿನ ಕಾಂಭೋಜ ವಾಜಿ[1]ಗಳ್ ಕೆಲವಾಗಳ್ ॥ ೯೪ ॥

ವ॥ ಅಂತು ತಮ್ಮ ಮನದೊಳೊಡಂಬಟ್ಟಂತೆ [2]ಮನಮನೆಡಗಲಿಸಿ ಪರಿಪ ಜಾತ್ಯಶ್ವಂಗಳೆಲ್ಲಮುೞಿಗಾಳೆಗದೊಳ್ ಸತ್ತೊಡೆ—

ಚಂ॥ ತುಱು ಪರಿವಾಗಳೆಮ್ಮ ಪೆಣನಂ ತುೞಿದುಂ ಪರಿಗುಂ ದಲೆಂದು ಚಿಃ।
ತುಱುಗೊಳೆ ಬಾೞ್[3]ನೆಂದು ತುಱುಗೋಳೊಳೆ ಸಾವುದು ಸೈಪಿದೆಂದು
ಪಾ॥
ಯ್ದುಱಿಕೆಯ ಗೋವರಣ್ಮಿ ಬರೆ [3]ಪಾಯಿಸಿ ಘೋೞಿಯಿಲರ್ ತಗು[4]ಳ್ದು ತ।
ತ್ತಱ ತೞಿದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್ ॥ ೯೫ ॥

ವ॥ ಆಗಳೊರ್ವ ಗೋವಳನನಿಬರ ಸಾವುಮಂ ಕಂಡು ಮನದೊಳಾದೇಪಂ ಪೆರ್ಚೆಯುಂ ತುಱುವ ಪೋಗಿಂಗಾಱದೆ ವಿರಾಟಪುರಕ್ಕೆ ವಂದುತ್ತರಂಗೆ ಪೇೞ್ದಾಗಳ್—

ಚಂ॥ ಪೆಱಗಣ ಕಾ[5]ಪನೆನ್ನನೆ ಮಹೀಪತಿ ಪೂಣಿಸಿ [6]ಪೋದನಾಂ ಗಡಂ।
ತುಱುಗೊಳೆ ಮಾಣೆನೆನ್ನಿದಿರ್ಗೆ ರಾವಣ ಕೋಟಿಯುಮಾಂತುಮೇಂ
ಗೆಲಲ್ ॥
ನೆಱೆಗುಮೆ ತನ್ನಿಮಿನ್ನೆನಗೆ ಸಾರಥಿಯಪ್ಪನನೀಗಳೆಂದು ಪೊ।
ಚ್ಚಱಿಸೆ ವಿರಾಟನಂದನನದೆಲ್ಲಮನಾಗಡೆ ವಿಕ್ರಮಾರ್ಜುನಂ ॥ ೯೬ ॥

ವ॥ ಕೇಳ್ದಾ ಪೊೞ್ತ್ತಿ ಪೊೞ್ತಾಗೆ ದ್ರೌಪದಿಗೆ ಬೞಿಯನಟ್ಟಿ ಬರಿಸಿ—

---

1. ರಾಜಿಗಳೆಲ್ಲಂ (ಕ.ಖ.); 2. ಮನೆ ಮನೆಗಡರಿಸಿದ (ಕ.); 3. ಕಂಡು ಮಹಾರಥ ಕೋಟಿಗಳ್ ತಗು (ಕ.ಖ.); 4. ಳ್ದುಱಿದಿೞ್' (ಕ.), ಳ್ದೞಿದಿೞಿ (ಖ.); 5. ಪುಗೆ (ಕ.); 6. ದಾಗಳೀಗಳೀ (ಕ.ಖ.).

ಉ॥ ಸಾರಥಿ ಮಾ[1]ಡು ಮತ್ಸ್ಯಸುತ[2]ನುತ್ತರನಂ [ತದ]ರಾತಿ ಸೈನ್ಯ ಕೂ ।
ಪಾರದ ಪಾರಮಂ ತಡೆಯದೆಯ್ದುವೆನೆಂಬುದುಮಂತೆ ಬಂದು ಪಂ ॥
ಕೇರುಹ ವಕ್ತ್ರೆ ಮತ್ಸ್ಯಸುತನಂ ನುಡಿದಳ್ ನಿನಗಾಜಿರಂಗದೊಳ್ ।
ಸಾರಥಿಯಪ್ಪೊಡಪ್ಪುದು ಶಿಖಂಡಿಯೆ ನಿನ್ನೊರೆಗುಂ[3]ತೆ ಗಂಡರಾರ್ ॥ ೯೭ ॥

ವ॥ ಎಂಬುದುಂ ಬೃಹಂದಳೆಯಲ್ಲಿಗುತ್ತರಂ ತನ್ನ ತಂಗೆಯುತ್ತರೆಯನೆ ಬೞಿಯನಟ್ಟಿ ಬರಿಸಿ—

ಉ॥ ಸಾರಥಿಯಪ್ಪೊಡಪ್ಪನೆನಗೀತನೆ ಪೋ ಪೆಱರೇವರಿನ್ ನೆರಂ ।
ಬಾರೆನೆನುತ್ತೆ ತನ್ನ ರಥಮಂ ತರವೇೞ್ದಿರದೆಯ್ದೆ ಘೋರ ಕಾಂ ॥
ತಾರಮನೊಂದು ಬೇಗೆ ಪರಿವಂತು [4]ರಥಂ ಪರಿದತ್ತು ವೈರಿ ಕಾಂ ।
ತಾರಮನಟ್ಟುಲಂಕದ ಬೃಹಂದಳೆ ಚೋದಿಸೆ ಚೋದ್ಯಮಪ್ಪಿನಂ ॥ ೯೮ ॥

ವ॥ ಅಂತು ಕಿಱಿದಂತರಮಂ ಪೋಗೆ ವೋಗೆ—

ಚಂ॥ ಕರಿ ಘಟೆ ನೀಳ ಮೇಘಘಟೆಯಂತೆ ತುರಂಗ ದೞಂ ಸಮುದ್ರದೊಳ್ ।
ತರತರದಿಂದಮೇೞ್ವ ತೆರೆಯಂತೆ ರಥಂ ಮಕರಂಗಳಂತಗು ॥
ರ್ವುರಿವರಿಯುತ್ತುಮಿರ್ಪಣಿ ಬೃಹದ್ವಡಬಾನಳನಂತೆ ತೋಱೆ ಭೀ ।
ಕರತರಮಾದುದುತ್ತರನ ಕಣ್ಗೆ ಸುಯೋಧನ ಸೈನ್ಯಸಾಗರಂ ॥ ೯೯ ॥

ವ॥ ಆಗಳದಂ ಕಂಡುತ್ತರನೊತ್ತರಮೊತ್ತಿದಂತೆ ಬೆರ್ಚಿ ಬೆಗಡುಗೊಂಡು—

ಉ॥ ನೋಡಲಱುಂಬಮೆಂದೊಡಿದನಾಂತಿಱಿದಾರ್ ತವಿಪನ್ನರೆಂದು ನಾ ।
ಣೋಡೆ ವಿರಾಟಸೂನು ರಥದಿಂದಿೞಿದೋಡಿದೊಡೆಯ್ದೆ ಪೂಣ್ದು ಬೆ ॥
ಚ್ಚೋಡೆ ಕಿರೀಟಿ ತನ್ನ[5]ನಱು[6]ಪುತ್ತೆ ಶಮೀದ್ರುಮದಲ್ಲಿ[7]ಗಾಡನಂ ।
ನೀಡಿರ[8]ದುಯ್ದು [9]ನೀಡಿಸಿದನಾತ[10][ಸ]ನಲ್ಲಿಯ ಕೈದುವೆಲ್ಲಮಂ ॥ ೧೦೦ ॥

ವ॥ ಅಂತು ಗಾಂಡೀವಿ ಗಾಂಡೀವಂ ಮೊದಲಾ[11][ಗೆ] ದಿವ್ಯ ಶರಾಸನ ಶರಧಿ ವಿಚಿತ್ರತನುತ್ರಂಗಳೆಲ್ಲಮಂ ಗೆಲ್ಲಮಂ ತನಗಾವಗಂ ಕೊಳ್ವಂತೆ ಕೊಂಡು ಪಗೆವರ ಗಂಟಲ ಬಳೆಯನೊಡೆದು ಕಳೆವುದನನುಕರಿಸುವಂತೆ ತೀವಿ ತೊಟ್ಟ ಮುಂಗೆಯ್ಯ ಬಳೆಗಳನೊಡೆದು ಕಳೆದು—

1. ಡೆ (ಕ.); 2. ನೀಗಡೆ ತನ್ನನ (ಕ.), ಗಂನಂಪನ (ಖ.); 3. ಟಿ (ಕ. ಖ.); 4. ಪರಿತ್ತುಱಿಮಿಱ್ತು (ಕ. ಖ.); 5. ರಥ (ಕ. ಖ.); 6. ದಿಂದಿೞಿದಾ (ಕ.); 7. ಗೆಯ್ದಿ ತಾಂ (ಕ.); 8. ದೆಯ್ದೆ (ಕ. ಖ. ಘ.); 9. ತೋಱಿ (ಕ. ಘ§.); 10. ನದ (ಕ. ಗ.), ನನ (ಘ.); 11. ದ (ಕ. ಖ.), ಗಿ (ಗ. ಘ.).

ಚಂ|| ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದಂದು ಗಂ|
ಡುಡೆಯುಡೆ ಗಂಡುಗಟ್ಟುದು ನೆಗೞ್ತೆಯ ಗಾಂಡಿವಮಂ ತಗುಳ್ಚಿ ಜೇ||
ವೊಡೆಯೆ ಸಿಡಿಲ್ ಸಿಡಿ[1]ಲ್ದು ಪೊಡೆವಂತೆವೊಲಾಯ್ತನೆ ಗಂಡಗಾಡಿ ನೂ|
ರ್ಮಡಿ ಮಿಗಿಲಾದುದಾ ರಥಮನೇಱಲೊಡಂ ಪಡೆಮೆಚ್ಚೆಗಂಡನಾ ||೧೦೧||

ವ|| ಅನ್ನೆಗಮುತ್ತ ಪರಸೈನ್ಯಭೈರವನ ಬಲವಿಂಗಳ್ಕಿ ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜಿನಿಯುಮಂ ಕಂಡು ಸುಯೋಧನಂಗೆ ಗಾಂಗೇಯನಿಂತೆಂದಂ—

ಚಂ|| ಅವಧಿಯ ಲೆಕ್ಕಮುಂ ನೆಱಪಿ ನನ್ನಿಗೆ ಮಾಣದೆ ಕಾದಲೆಂದು ಬಂ|
ದವನಿವನರ್ಜುನಂ ತೊಡರ್ದು ನಿಲ್ಲದೆ ನೀನೊಡಗೊಂಡು ಪೋಗು ಗೋ||
ನಿವಹಮನಂಗರಾಜ ಕೃಪ ಕುಂಭಭವ ಪ್ರಮುಖ ಪ್ರವೀರರಿಂ|
ಬಿವರ್ವೆರಸಾಂಪೆನಾನಿನಿಸನೀ ಯೆಡೆಯೊಳ್ ಕದನತ್ರಿಣೇತ್ರನಂ ||೧೦೨||

ವ|| ಎಂಬುದುಂ ಸುಯೋಧನಂ [2]ಪಿರಿದುಮಾ[3]ಕುಳಂಬೆರಸು ಗೋಕುಲಮುಮಂ ಕೊಂಡುಪೋಗೆ ಪೋಗಲೀಯದುತ್ತರನಂ ರಥಮಂ ಚೋದಿಸೆಂದು ಮುಟ್ಟಿವಂದು—

ಮ|| ಪಗೆ ತೀರ್ಗುಂ ಬಗೆ ತೀರ್ಗುಮಾ ಕುರುಕುಳ ಪ್ರಖ್ಯಾತನಂ ಕಾದಿ ತೊ|
ಟ್ಟಗೆ ಗೋವೃಂದಮನಾಂ ಮಗುೞ್ಚಿದಪೆನೆಂದಾರ್ದೆಚ್ಚು ತನ್ನಂಕದಂ||
ಬುಗಳೊಂದೊಂದ[4]ಱಲೊಂದು ಲಕ್ಕ ಬಲಮುಂದಟ್ಟಾಡೆ ದುರ್ಯೋಧನಂ|
ಮಿಗೆ ಸೋಲ್ತೋಡೆ ಮಗುೞ್ಚಿದಂ ತುಱುಗಳಂ ವಿದ್ವಿಷ್ಟವಿದ್ರಾವಣಂ
||೧೦೩||

ಚಂ|| ಅದಟರ ಚೆನ್ನಪೊಂಗರ ಸಬಂಗಳ ತೊ[5]ಟ್ಟುಱಿಯೊಳ್ ತೊಡಂಕಿ ನಿ|
ಲ್ಲದೆ ಪೊ[6][ಱಮಟ್ಟ] ತಮ್ಮ ಮನದೊಳ್ ಮಿಗೆ[7] ಬೆಚ್ಚಿಸಿದಂತೆ ತೋಱುವ||
ಗ್ಗದ ನಿಡುಗೋಡು ಮೋಡುಮುಮುರುತ್ತುಮಿಱುಂಕಿದ ಕೆಚ್ಚಲೆತ್ತಮೆ|
ತ್ತಿದ ಕುಡಿವಾಲಮುಂಪೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್
||೧೦೪||

ವ|| ಅಂತು ತುಱುವಂ ಮಗುೞ್ಚಿ ಮಗುಳದೆ ತನಗಿದಿರೊಡ್ಡಿ ಸಿಂದರಿನೃಪಬಲಮನರೆದು ಸದೆದು—

---

1. ಸಿಡಿದುಪೊಯ್ವು (ಕ. ಖ.); 2. ಕಿ (ಘ§.); 3. ಬ್ಬ್ರಅಲಂ (ಘ.); 4. ಱನೆಕ್ಕ (ಕ.); 5. ತ್ತು (ಗ. ಘ.); 6. ಲ ಮೆಚ್ಚು (ಸ.); 7. ಮೆ (ಕ. ಖ.), ಬ (ಘ.).

ಚಂ|| ಪ[1]ೞುವೞಿಯಂ ತಗುಳ್ದುಳುರ್ವ ಬೇಗೆವೊಲೆಚ್ಚ ಶರಾಳಿಗಳ್ ಭೞಿಲ್ |
ಭೞಿಲೆನೆ ಪಾಯೆ ಪಾಯ್ವ ಬಿಸುನೆತ್ತರ ಸುಟ್ಟುರೆ ಚಾತುರಂಗಮುಂ ||
ಕೞಿಕುೞಿಯಾಗೆ ಪೇೞ್ಪೆಸರಿಲ್ಲೆನೆ ಪಾಯಿಸಿ ತೇರನೆಯ್ದಿ ತೊ |
ತ್ತೞಿದುೞಿದತ್ತು ವೈರಿ ಬಲಮೆಲ್ಲಮನಮ್ಮನ ಗಂಧವಾರಣಂ || ೧೦೫ ||

ಕುರುಬಲದೊಳ್ ಕರಂ ನೆಗೞ್ದ ಬೀರರ ಚೆನ್ನರ ಸಂದ ಚೆನ್ನಪೊಂ |
ಗರ ತಲೆ ತಾೞಪಣ್ ಕೆದಱಿದಂತೆ ನಿರಂತರಮಾಜಿರಂಗದೊಳ್ ||
ಪರೆದಿರೆ ಲೋಹಿತಾಂಬುಧಿಯೊಳಾನೆಗಳಟ್ಟೆಗಳಾಡೆ ನೋಡಲ |
ಚ್ಚರಿಯುಮಗುರ್ವುಮದ್ಭುತಮುಮಾಯ್ತು ರಣಂ ಕದನತ್ರಿಣೇತ್ರನಾ || ೧೦೬ ||

ವ|| ಆಗಳದಂ ಕಂಡಂಗರಾಜಂ ರಾಜರಾಜನ ನಡಪಿದುದುಮಂ ತನ್ನ ಬಲ್ಲಾಳ್ತನಮುಮಂ ನೆನೆದು [2]ವಿಕರ್ಣಂಬೆರಸರ್ಣವ ನಿನಾದದಿಂದಾರುತ್ತುಂ ಬಂದು ಗುಣಾರ್ಣವನೊಳ್ ತಾಗೆ—

ಚಂ|| ಸಮೆದುದು ಪೋಗು ಗೋಗ್ರಹಣದಲ್ಲಿಯೆ ಭಾರತಮೆಂಬ ಮಾತನಂ |
ದಮರ ನರೋರಗರ್ ನುಡಿಯೆ ರೌದ್ರಶರಂಗಳಿನೆಚ್ಚು ಯುದ್ಧದೊಳ್ ||
ಸಮಸಮನಾಗಿ ಕಾದಿದೊಡೆ [3][ಕರ್ಣನ[4]ವ]ಕ್ಷಮನೆಚ್ಚು ಗರ್ವಮಂ |
ಸಮೆಯಿಸಿ ಕೊಂದನಂಕ[5]ದ ವಿಕರ್ಣನನೊಂದೆ ವಿಕರ್ಣದಿಂ ನರಂ || ೧೦೭ ||

ವ|| ಅಂತು ಕರ್ಣನ ನೋವುಮಂ ವಿಕರ್ಣನ ಸಾವುಮಂ ಕಂಡು—

ಉ|| ತಕ್ಕಿನ ಕುಂಭಸಂಭವ ನದೀಜ ಕೃಪ ಪ್ರಮುಖ ಪ್ರವೀರರೆ |
ಕ್ಕೆಕ್ಕೆಯಿನೊರ್ವರೊರ್ವರೆ ಬಿಗುರ್ತೆರರದಾಂತು ನಿಶಾತ ಬಾಣ ಜಾ ||
ಲಕ್ಕೆ ಸಿಡಿಲ್ದು ಜೋಲ್ದು ಸೆರಗಂ ಬಗೆದೋಡಿದರೊಂದು ಪೊೞ್ತು[6][ಮೊಂ |
ದರ್ಕೆ]ಮಿದಿರ್ಚಲಾಱದ ಮನಂಗಲಿಗಳ್ ಕದನತ್ರಿಣೇತ್ರನಾ || ೧೦೮ ||

ಕಂ|| ಮನದೊಳ್ ಕರುಣಿಸಿ ಸಂಮೋ |
ಹನಾಸ್ತ್ರದಿಂದೆಚ್ಚು ಬೀರರಂ ಬೀರದ ಶಾ ||
ಸನಮನೆ ನಿಱಿಸುವ ಬಗೆಯಿಂ |
ದನಿಬರ ಪೞವಿಗೆಯನೆೞ್ದುಕೊಂಡಂ ಹರಿಗಂ || ೧೦೯ ||

---

1. ಳವರಿ (ಖ.), ಳವಣಿ (ಗ. ಘ.); 2. ತ[ನ್ನಾಳ್ದನ] ತಮ್ಮಂ ವಿಕರ್ಣಂ (ಕ.), ತನ್ನ ತಮ್ಮಂ ವಿಕರ್ಣಂ (ಖ. ಗ. ಘ.); 3. ಕೂರ್ಮನ (ಸ.) ; 4. ಪ (ಕ. ಖ. ಘ.), ಕ (ಗ.); 5. ದೊಳೆ ಕರ್ಣ್ನನನೊಂದೆ ವಿಕರ್ಣ್ನನಂ (ಕ. ಖ.); 6. ಮಿ| ಕ್ಕಿಕ್ಕಲದಿ (ಕ.), ಮಿ| ಕ್ಕರ್ಕೆ ಲರಿ (ಖ.), ವೊಂದಿಕ್ಕ (ಘ.).

ವ॥ ಅಂತು [1]ವರ ಶಶಿ ವಿಶದಯಶಃಪಟಂಗಳಂ ನನ್ನಿ ಪಟಂಗೊಳ್ವಂತೆ ವಿವಿಧ ಧ್ವಜಪಟಂಗಳಂ ಕೊಂಡು ಗೆಲ್ಲಂಗೊಂಡು ತಾನುಮುತ್ತರನುಂ ವಿರಾಟಪುರಕ್ಕೆ ಮಗುಳ್ದು ಬರ್ಪಾಗಳ್—

ಉ॥ ಸೂಸುವ ಸೇಸೆ ಬೀಸುವ ಚಳಚ್ಚಮರೀರುಹಮೆಕ್ಕೆಯಿಂ ರಣಾ
ಯಾಸ ಪರಿಶ್ರಮಾಂಬು ಲವಮಂ ತವೆ ಪೀರೆ ಪುರಾಂಗನಾ ಮುಖಾ ॥
ಬ್ಜಾಸವ ಗಂಧಮೊಳ್ ಬೆರಸಿದೊಂದೆಲರೊಯ್ಯನೆ ತೀಡೆ ಪೊಕ್ಕನಾ ।
ವಾಸವ[2]ನಂತೆ ಮತ್ಸ್ಯಮಹಿಪಾಳಕ ಮಂದಿರಮಂ ಗುಣಾರ್ಣವಂ ॥ ೧೧೦ ॥

ಇದು ವಿವಿಧ ವಿಬುಧಜನವಿನುತ ಜಿನಪದಾಂಭೋಜ
ವರ ಪ್ರಸಾದೋತ್ಪನ್ನ ಪ್ರಸನ್ನ ಗಂಭೀರ ವಚನರಚನ
ಚತುರ ಕವಿತಾಗುಣಾರ್ಣವ ವಿರಚಿತಮಪ್ಪ
ವಿಕ್ರಮಾರ್ಜುನ ವಿಜಯದೊಳ್
ಅಷ್ಟಮಾಶ್ವಾಸಂ

———

1. ನರ (ಕ. ಖ.); 2. ಸೂನು (ಕ.), ನಂದನಂ (ಖ.).